ಅಂತರ ಭಾರತೀಯ ಪುಸ್ತಕ ಮಾಲೆ

# ಗೆದ್ದಲು

(ಬಂಗಾಳಿ ಭಾಷೆಯ ಘುನ್‌ಪೋಖಾ ಕಾದಂಬರಿಯ ಅನುವಾದ)

ಶೀರ್ಷೇಂಧು ಮುಖೋಪಾಧ್ಯಾಯ

ಅನುವಾದ

ಗೀತಾ ವಿಜಯಕುಮಾರ್



ನ್ಯಾಷನಲ್ ಬುಕ್ ಟ್ರಸ್ಟ್, ಇಂಡಿಯಾ

# ಪೀಠಿಕೆ

ಹಿಂದಿಗೆ ಅನುವಾದವಾದ ಮೊಟ್ಟಮೊದಲ ಬಂಗಾಳಿ ಕಾದಂಬರಿ – ಎಂಬ ಶ್ರೇಯಸ್ಸು, ಪ್ಯಾರೀಚಾಂದ ಮಿತ್ರರ "ಆಲಾಲೇರ್ ಘರೇನ ದುಲಾಲ" (1858 ,ಬಿಗಡೆ ರಯಿಸ್)ಗೆ ಸೇರುತ್ತದಾದರೂ, ಬಂಗಾಳಿ ಸಾಹಿತಿಗಳಲ್ಲಿ, ಕಾದಂಬರಿಕಾರರಲ್ಲಿ ಬಂಕಿಮ್‌ಚಂದ್ರರು ಅಗ್ರಮಾನ್ಯರೆಂಬುದನ್ನು ಯಾರೇ ಆಗಲಿ ಅಲ್ಲಗಳೆಯಲಾಗದು. ಅವರು 1857 ರ ದಂಗೆಯ ಎಷ್ಟೋ ವರ್ಷಗಳ ನಂತರ ತಮ್ಮ ಕಥೆ ಕಾದಂಬರಿಗಳನ್ನು ಬರೆದರು. ಆ ವೇಳೆಗೆ, ಭಾರತದಲ್ಲಿ ಬ್ರಿಟನ್ನಿನ ರಾಣಿಯ ಶಾಸನ ಬೇರೂರಿತ್ತಲ್ಲದೆ, ಭಾರತದ ಸಮಾಜದಲ್ಲಿ, ಮಧ್ಯಮ ವರ್ಗ – ಎಂಬ ಒಂದು ಹೊಸ ವರ್ಗ ಹುಟ್ಟಿಕೊಂಡು, ಉಚ್ಛ್ರಾಯ ಸ್ಥಿತಿಗೆ ಬಂದಿತ್ತು. ಬಂಗಾಳದ, ಆಗಿನ ವಿಕ್ಟೋರಿಯಾ ಕಾಲದ ಸಾಹಿತಿಗಳಲ್ಲಿ ಬಂಕಿಮ್‌ಚಂದ್ರರ ವ್ಯಕ್ತಿತ್ವವನ್ನು ಅಸಾಧಾರಣವೆಂದು ಪರಿಗಣಿಸಲಾಗಿತ್ತು. ಆ ಕಾಲದ ಆ ಯುಗದ ಈ ಆಧುನಿಕ ವ್ಯಕ್ತಿತ್ವ ತನ್ನ ವರ್ಗದ – ಮಧ್ಯಮ ವರ್ಗದ ಜನರಲ್ಲಿ, ಅವರ ಮನಸ್ಸಿನಲ್ಲಿ ತನ್ನದೇ ಆದ ಸ್ಥಾನ ಪಡೆಯಲು ಹವಣಿಸಿದ್ದಲ್ಲಿ ಅದು ಸಹಜವೇ ಆಗಿತ್ತು. ಬಂಕಿಮ್‌ಚಂದ್ರರು ಆಗಿನ ಕಾಲದ ಸಾಮಾಜಿಕ ಮೌಲ್ಯಗಳನ್ನು ಮೇಲೆತ್ತಿ ಬೆಳೆಸಲು ಇಚ್ಛಿಸಿದ್ದರು. ಆದರೆ, ಅದಕ್ಕಾಗಿ ತೆತ್ತಬೇಕಾದ ಬೆಲೆಯ ಅರಿವು ಅವರಿಗಿರಲಿಲ್ಲ; ಆ ಬಗ್ಗೆ, ಅವರು ಸ್ಪಷ್ಟವಾದ ಯಾವ ಧೋರಣೆಯನ್ನೂ ಹೊಂದಿರಲಿಲ್ಲ. ಆಗಬೇಕಾದ್ದು ಆಗೇ ಆಗುತ್ತದೆ, ತಪ್ಪಿದ್ದಲ್ಲ ಎಂಬ ಭಾವನೆ ಅವರ ಮನಸ್ಸಿನಲ್ಲಿ ಬೇರೂರಿತ್ತಾದರೂ, ಅದರಿಂದಾಗಿ – ಅಂತಹ ಭಾವನೆಯಿಂದಾಗಿ, ವ್ಯಕ್ತಿ ಸ್ವಾತಂತ್ರ್ಯಕ್ಕೆ ಚ್ಯುತಿ ಬರದಂತೆ ನೋಡಿಕೊಳ್ಳಬೇಕೆಂಬುದು ಅವರ ವಿಶ್ವಾಸವಾಗಿತ್ತು. ಬಂಕಿಮ್‌ಚಂದ್ರರು ತಮ್ಮ ಕಾದಂಬರಿಗಳಲ್ಲಿ ಇದನ್ನೇ ಪ್ರತಿಪಾದಿಸಿದರು. ಅವರ ಕಾದಂಬರಿ *ಚಂದ್ರಶೇಖರ್* (1875) ನಲ್ಲಿನ ಪ್ರತಾಪ, ರಾಜಸಿಂಹ ಕಾದಂಬರಿಯಲ್ಲಿನ ಮುಬಾರಕ್, ಅವರ ಈ ವಿಶ್ವಾಸದ ಪ್ರತೀಕವಾಗಿವೆ. ಬಂಕಿಮ್‌ಚಂದ್ರರು, ವ್ಯಕ್ತಿ ಮತ್ತು ವಿಧಿ ಅಥವಾ ಭವಿತವ್ಯದ ನಡುವಣ ದ್ವಂದ್ವವನ್ನು ಸ್ಪಷ್ಟಗೊಳಿಸಲು, ಇತಿಹಾಸದ ಮೊರೆಹೋದರೆಂಬುದು ಬಹುಪಾಲು ನಿಜವಾಗಿದೆ. ಅವರ ಸಾಮಾಜಿಕ ಕಾದಂಬರಿಗಳಲ್ಲಿ ಮತ್ತು ರೋಮಾಂಚಕಾರಿಯಾದ ಐತಿಹಾಸಿಕ ಕಾದಂಬರಿಗಳಲ್ಲಿ, ವ್ಯಕ್ತಿ ಮತ್ತು ವಿಧಿಯ ನಡುವಣ ಈ ಸಂಬಂಧ ಹಾಗೂ ಸಂಘರ್ಷ ಬಹಳ ಸ್ಪಷ್ಟವಾಗಿ ಕಂಡು ಬರುತ್ತದೆ.

ಕಪಾಲ ಕುಂಡಲ ಮತ್ತು ಕುಂದನಂದಿನಿ ದೂರ ಕಾಲೀನ ಮತ್ತು ಸಮಕಾಲೀನ ಚರಿತ್ರೆಯ ಮೇಲೆ ಆಧಾರಗೊಂಡ ಕೃತಿಗಳಾಗಿವೆ. ಈ ಎರಡೂ ಕಾದಂಬರಿಗಳಲ್ಲಿ, ವಿಧಿ ಲಿಖಿತ ಏನೆಂಬುದನ್ನು ಮೊದಲೇ ಪ್ರಸ್ತಾಪಿಸಲಾಗಿದೆ. ಈ ಕಾದಂಬರಿಗಳಲ್ಲಿನ ಪಾತ್ರಗಳು, ತಮ್ಮ ಅನಿವಾರ್ಯ ಅದೃಷ್ಟವನ್ನು ಅರಿತು ಸಹ, ತಮ್ಮ ಧರ್ಮ – ಕರ್ಮಕ್ಕೆ ಕಿಂಚಿತ್ತೂ ಚ್ಯುತಿ ಬರದಂತೆ ನೋಡಿಕೊಳ್ಳುತ್ತವೆ. ಇಷ್ಟೇ ಅಲ್ಲ, ಬಂಕಿಮ್‌ಚಂದ್ರರು, ಒಂದೆರಡು ಪ್ರಸಂಗಗಳಲ್ಲಿ ತಾತ್ಕಾಲಿಕ ವ್ಯಕ್ತಿಯ ಅಸ್ತಿತ್ವದ ಜಟಿಲತೆಯ ಆಧಾರವನ್ನು ಸಾಕಾರಗೊಳಿಸಿದ್ದಾರೆ. ವಿಷವೃಕ್ಷದ ದೇವೇಂದ್ರನಾಥ ಆಂಶಿಕವಾಗಿ ಮತ್ತು ರಜನಿ (1877)ಯ ಅಮರನಾಥ ವಿಶೇಷವಾಗಿ, ಅಸ್ತಿತ್ವದ ಜಟಿಲತೆಯ ನಿರರ್ಥಕತೆಯ ವಿರುದ್ಧ ಹೋರಾಡಿದ ಪಾತ್ರಗಳಾಗಿವೆ. ಬ್ರಿಟಿಷರ ವಸಾಹತು ಷಾಹಿಯ ಅವಶ್ಯಕತೆಗಳನ್ನು ಈಡೇರಿಸಲು ಹುಟ್ಟಿಕೊಂಡ ಮಧ್ಯಮ ವರ್ಗದ ಧಮನಿಗಳಲ್ಲಿ ಬೆರೆತುಹೋಗಿದ್ದ ವ್ಯರ್ಥ ಭಾವನೆಗಳಲ್ಲಿ ಒಂದು ಆಶಾಕಿರಣ, ಒಂದು ಪ್ರಕಾಶವಿದ್ದುದನ್ನು ಈ ಪಾತ್ರಗಳು ಸಾಬೀತುಪಡಿಸುತ್ತವೆ. ಈಗ್ಗೆ ಅನೇಕ ವರ್ಷಗಳ ಹಿಂದೆ, ಅಮರನಾಥ ಸ್ವಗತವಾಗಿ ಹೇಳಿದ "ನನಗೆ ಬೇಕಾದ ವಸ್ತು ನನಗೆ ಸಿಗದೇ ಇದ್ದುದೇ, ನನ್ನ ದುಃಖಕ್ಕೆ ಕಾರಣ" – ಎಂಬ ಮಾತು ಈಗಲೂ ನಿಜವಾಗಿದೆ.

ವ್ಯಕ್ತಿತ್ವದ ವಿಕಾಸದ ವಿಷಯವನ್ನು, ಎಲ್ಲರಿಗಿಂತ ಮೊದಲು, ಹೃದಯಂಗಮವಾಗಿ ನಿರೂಪಿಸಿದ ಶ್ರೇಯಸ್ಸು ರವೀಂದ್ರನಾಥರಿಗೆ ಸಲ್ಲುತ್ತದೆ. ಅವರು, ವಿಕ್ಟೋರಿಯಾ ಕಾಲದ ಬಂಗಾಳಿಗಳ ಮನಸ್ಸಿನಲ್ಲಿ, ಸ್ಥಿರತೆ – ಸ್ಥಾಯಿತ್ವಕ್ಕಾಗಿದ್ದ ಇಚ್ಛೆ–ಅಭಿಲಾಷೆಗಳು ಟೊಳ್ಳಾಗಿರುವುದನ್ನು ಸಹ ಎಲ್ಲರಿಗಿಂತ ಮುಂದಾಗಿ ಗುರುತಿಸಿದ್ದರು. ಅಂತಲೇ, ಅವರು ತಮ್ಮ ನಿಬಂಧಮಾಲಿಕೆ ಆತ್ಮಶಕ್ತಿ (1905)ಯಲ್ಲಿ ಬ್ರಿಟಿಷರ ಕಾನೂನುಗಳ ಬಂಧನದಿಂದ, ನಾವು ನಮ್ಮ ಸಮಾಜವನ್ನು ಅಪರಿವರ್ತನೀಯವಾಗಿಡಲು ಬಯಸುವುದು ತಪ್ಪಾಗುತ್ತದೆಂದು ತಿಳಿಸಿದರು. ನಮ್ಮ ಈ ತಪ್ಪಿನಿಂದ, ಭಾರತೀಯ ಸಮಾಜದಲ್ಲಿನ ಟೊಳ್ಳುಪೊಳ್ಳು ಬಯಲಿಗೆ ಬರುತ್ತದಲ್ಲದೆ, ಅದರಲ್ಲಿನ ಅಸಂಗತಿಗಳು ಸಹ ಬೆಳಕಿಗೆ ಬರುತ್ತವೆ. ಮಧ್ಯಮ ವರ್ಗದ ಜನರು ಮತ್ತು ಸಮಾಜದ ಬಹುಸಂಖ್ಯಾತ ಜನರ ನಡುವೆ ಯಾವುದೇ ಹೊಂದಾಣಿಕೆ – ಸಾಮರಸ್ಯ ಇಲ್ಲದೇ ಇರುವುದು ನಮ್ಮ ಸಮಾಜದಲ್ಲಿನ ಒಂದು ದೊಡ್ಡ ಅಸಂಗತಿಯಾಗಿದೆ ಎಂದು ರವೀಂದ್ರನಾಥರು ಪ್ರತಿಪಾದಿಸಿದರು.

ರವೀಂದ್ರನಾಥರ ಪ್ರಮುಖ ಕಾದಂಬರಿಗಳಲ್ಲಿ, ವ್ಯಕ್ತಿಯ ಸಂಕಟ – ಸಂಕಷ್ಟಗಳು ಮತ್ತು ಆ ಸಂಕಟ – ಸಂಕಷ್ಟಗಳಿಂದ ಮುಕ್ತಿಪಡೆಯಲು ವ್ಯಕ್ತಿ ನಡೆಸುವ ಸಂಗ್ರಾಮ – ಹೋರಾಟ ಒಂದು ಮುಖ್ಯ ವಿಷಯವಾಗಿದೆ. ಒಂದು ರೀತಿಯಲ್ಲಿ, ರವೀಂದ್ರನಾಥರ ಕೃತಿಗಳು, ಮಧ್ಯಮ ವರ್ಗದ ಅಸ್ತಿತ್ವದ ಏರಿಳಿತದ ಒಂದು ಕಲಾತ್ಮಕ ರೂಪವಾಗಿವೆ. ಬಂಕಿಮ್‌ಚಂದ್ರರು ಭವಿತವ್ಯ ವಿಧಿಯ ಆಟ ಬಲ್ಲವರಾಗಿದ್ದರು. ಅಂತಲೇ ಅವರ

ಕಾದಂಬರಿಗಳು ಒಂದು ರೀತಿಯಲ್ಲಿ ನಾಟಕೀಯವಾಗಿವೆ. ಅವರ ಕಾದಂಬರಿಗಳಲ್ಲಿನ ಪ್ರತಿಯೊಂದು ಭಾಗ ನಾಟಕದ ದೃಶ್ಯಗಳಂತೆ ರೂಪುಗೊಂಡಿವೆ. ರವೀಂದ್ರನಾಥರ ಕಾದಂಬರಿಗಳಲ್ಲಿ, ವ್ಯಕ್ತಿಯ ಅಸ್ತಿತ್ವದ ನೋವು ನಲಿವುಗಳ ರಹಸ್ಯವನ್ನು ಭೇದಿಸುವ ಪ್ರಯಾಸವಿದೆ. ಬಂಕಿಮ್‌ಚಂದ್ರರ ಕಾದಂಬರಿಗಳಲ್ಲಿ ವ್ಯಕ್ತಿ ಮತ್ತು ವಿಧಿ ಅಥವಾ ಘಟನೆಗಳ ಹೋರಾಟದಲ್ಲಿ ವ್ಯಕ್ತಿಯ ಅಸ್ತಿತ್ವ ಚಿತ್ತಾಕರ್ಷಕವಾಗಿ ರೂಪುಗೊಂಡಿದೆ. ರವೀಂದ್ರನಾಥರ ಕಾದಂಬರಿಗಳಲ್ಲಿ, ವ್ಯಕ್ತಿಯ ಅಸ್ತಿತ್ವ – ವ್ಯಕ್ತಿತ್ವದ ಪ್ರಕಾಶದಲ್ಲಿ, ಇಡೀ ಘಟನೆ ರೋಮಾಂಚನಕಾರಿಯಾದ ರೂಪತಾಳುತ್ತದೆ. ಅಂದರೆ, ವ್ಯಕ್ತಿಯ, ವ್ಯಕ್ತಿತ್ವರೂಪಿ ಘಟನೆಗೆ, ಅರ್ಥವತ್ತಾದ ಭಾಷೆಯ ರೂಪ ನೀಡಬಹುದಾಗಿದೆ. ಇದೇ ಕಾರಣಕ್ಕಾಗಿ ರವೀಂದ್ರನಾಥರು, ತಾವು ಹೇಳಬೇಕಾದುದನ್ನು ನೇರವಾಗಿ ಹೇಳಲು ಸಮರ್ಥರಾದರಲ್ಲದೆ, ಅವರು, ಆಗ ಪ್ರಚಲಿತವಾಗಿದ್ದ ನಾಟಕೀಯ ಶೈಲಿಗೆ ಮೊರೆಹೋಗಲಿಲ್ಲ. ಬಂಕಿಮ್‌ಚಂದ್ರರ ಕಾದಂಬರಿಗಳಲ್ಲಿನ ಪಾತ್ರಗಳ ಸಮಾಪ್ತಿ, ಅಭಿಜ್ಞಾನದ ಸಮಾಪ್ತಿಯಾಗಿದೆ. ಅಷ್ಟೇ ಅಲ್ಲದೆ ಅವರ ಕಾದಂಬರಿಗಳು ರುದ್ರವಾಗಿವೆ. ಆದರೆ ರವೀಂದ್ರನಾಥರ ಕಾದಂಬರಿಗಳಲ್ಲಿ ಘಟನೆಗಳು ಪಾತ್ರಗಳ ಸಮಗ್ರ ವ್ಯಕ್ತಿತ್ವದಲ್ಲಿ ಬೆರೆತು ಹರಡಿಕೊಳ್ಳುತ್ತವಾದ್ದರಿಂದ, ಪಾತ್ರಗಳ ಸಮಾಪ್ತಿ, ಅಭಿಜ್ಞಾನದ ಸಮಾಪ್ತಿಗೆ ನಾಂದಿ ಆಗುವುದಿಲ್ಲ. ರವೀಂದ್ರನಾಥರ ಕಾದಂಬರಿಗಳು ಸ್ವಚ್ಛಂದವಾಗಿವೆ, ಮುಕ್ತವಾಗಿವೆ. ಅಂತಲೇ ಅವುಗಳ ಅಂತಿಮ ಪರಿಣಾಮ, ಅಂತ್ಯವನ್ನು ಖಚಿತವಾಗಿ ಹೇಳಲಾಗದು. ರವೀಂದ್ರರ ಕಾದಂಬರಿಗಳಲ್ಲಿನ ಪಾತ್ರಗಳು ತಪ್ಪು ಮಾಡುವುದೇ ಇಲ್ಲ. ಅಂತಲೇ ಅವುಗಳು, ಒಂದು ಇದ್ದಂತೆ ಮತ್ತೊಂದಿಲ್ಲ; ಅವುಗಳಿಗೆ ಸದೃಶವಾದುದು ಇನ್ನೊಂದಿಲ್ಲವೆಂದೇ ಹೇಳಬಹುದು.

*ಆಂಖ್–ಕಿ–ಕಿರಿಕಿರಿ* (1903)ದಲ್ಲಿನ ಮಹೇಂದ್ರನ ಪಾತ್ರ, ಮತ್ತು *ಯೋಗಾ ಯೋಗ* (1929) ದಲ್ಲಿನ ಮಧುಸೂದನನ ಪಾತ್ರ ಮಧ್ಯಮ ವರ್ಗದ ಅಧಿಕಾರ ಷಾಹಿಯನ್ನು ಪ್ರತಿನಿಧಿಸುತ್ತವಾದರೂ, ಎರಡೂ ಪಾತ್ರಗಳಲ್ಲಿ ಅಜಗಜಾಂತರವಿದೆ. ಒಂದು ಪಾತ್ರ, ಮಧ್ಯಮ ವರ್ಗದಲ್ಲಿ ಹುಟ್ಟಿ ಬೆಳೆದದು, ಮಾನಸಿಕವಾಗಿ "ಪೆಟಿ ಬೂರ್ಜ್ವಾ" ಪ್ರವೃತ್ತಿಗಳನ್ನು ಹೊಂದಿದ ವ್ಯಕ್ತಿಗಳನ್ನು ಪ್ರತಿನಿಧಿಸುತ್ತದೆ. ಎರಡನೆಯ ಪಾತ್ರ, ಬ್ರಿಟಿಷರ ಛತ್ರಛಾಯೆಯಲ್ಲಿ ಬೆಳೆದ ಧನವಂತರನ್ನು ಪ್ರತಿನಿಧಿಸುತ್ತದೆ. *ಗೋರಾ* (1910) ಕಾದಂಬರಿಯಲ್ಲಿನ ನಾಯಕ ವಿರಹಿ ವ್ಯಕ್ತಿಯ ಪಾತ್ರವನ್ನು ಎದ್ದುಕಾಣುವಂತೆ ನಿರೂಪಿಸಲಾಗಿದೆ. ಆದರೆ *ಚತುರಂಗ* (1916) ಕಾದಂಬರಿಯಲ್ಲಿನ ಅದೇ ತೆರನಾದ ಪಾತ್ರವನ್ನು ತೀರ ಭಿನ್ನವಾದ ರೀತಿಯಲ್ಲಿ ನಿರೂಪಿಸಲಾಗಿದೆ. ಈ ಭಿನ್ನತೆಯೆ, ಈ ಎರಡೂ ಕಾದಂಬರಿಗಳ ನಡುವಣ ಅಂತರ ಮತ್ತು ವೈಚಿತ್ರ್ಯದ ಮೂಲವಾಗಿದೆ. *ಗೋರಾದ* ಗದ್ಯಶೈಲಿ, ಅನಾಸಕ್ತವಾದ, ಅಚಂಚಲವಾದ ಸರ್ವದರ್ಶಿ ಗಾಂಭೀರ್ಯದಿಂದ ಕೂಡಿದೆ. *ಚತುರಂಗದ* ಶೈಲಿಯಲ್ಲಿ ಕವಿತ್ವದ ಗೂಢ

ಸ್ಪರ್ಶವಿರುವುದು ಗೋಚರವಾಗುತ್ತದೆ. ಅವರು ಎಂದೇ ಆಗಲಿ ತಮ್ಮ ಕಾದಂಬರಿಗಳಲ್ಲಿನ ನ್ಯೂನತೆಯನ್ನು ಕವಿತ್ವದಿಂದ ಮರೆಮಾಚುವ ಪ್ರಯಾಸಕ್ಕೆ ಕೈಹಾಕಲಿಲ್ಲ. ಅದನ್ನು ಅವರು ಬಯಸಲೂ ಇಲ್ಲ. *ನೌಕಾಡೂಬಿ* (1906) ಅಂತಹ ದುರ್ಬಲ ಕಥೆಯುಳ್ಳ ರಚನೆಗಳನ್ನು ಬದಿಗಿಟ್ಟಲ್ಲಿ, *ಘರೆ ಬಾಹಿರೆ* (1916) *ಚಾರ ಅಧ್ಯಾಯ* (1934) ಅಥವಾ *ಶೇಷೇರಕವಿತಾ* (1929) ಕಾದಂಬರಿಗಳ ಪಾತ್ರಗಳು ಮೂಲತಃ ನೈಜವಾದ ಆಂತರಿಕ ತುಮುಲಕ್ಕೆ ಒಳಗಾದ ಪಾತ್ರಗಳಾಗಿವೆ. ಈ ದೃಷ್ಟಿಯಿಂದ ಈ ಕಾದಂಬರಿಗಳು ಇಂದಿನ ಅಧುನಿಕ ಬಂಗಾಳಿ ಸಾಹಿತ್ಯದೊಡನೆ ಸಂಬಂಧ ಹೊಂದಿವೆ.

ರವೀಂದ್ರರು ಸೃಷ್ಟಿಸಿದ ಸ್ತ್ರೀ ಪಾತ್ರಗಳ ಬಗ್ಗೆ ಪ್ರಸ್ತಾಪಿಸದೆ, ಅವರ ಕೃತಿಗಳ, ಕಾದಂಬರಿಗಳ ಅವಲೋಕನ ಅಪೂರ್ಣವೆಂಬುದು ನಿಜ. ರವೀಂದ್ರರ ಕಲ್ಪನೆಯ ಕೂಸುಗಳಾದ ಕನ್ನೆಯರು, ತಮ್ಮದೇ ಆದ ಛಂದಸ್ಸಿನಲ್ಲಿ, ಸರ್ವಸ್ವತಂತ್ರರಾಗಿ, ವ್ಯಕ್ತಿಯ ಅಸ್ತಿತ್ವದ ಸಾರ್ಥಕತೆಯ ಅನ್ವೇಷಣೆಯಲ್ಲಿ ತಲ್ಲೀನರಾಗಿದ್ದುದು ಗಮನಾರ್ಹವಾಗಿದೆ. ರವೀಂದ್ರರು ಕವಿಗಳಾಗಿದ್ದರು. ಆದ್ದರಿಂದಲೇ ವಿನೋದಿನಿ (*ಆಂಖ್-ಕಿ-ಕಿರಿಕಿರಿ*), ದಾಮಿನಿ (*ಚತುರಂಗ*) ಮತ್ತು ಕುಮು (*ಯೋಗಾಯೋಗ*) – ಅಂತಹ ಪಾತ್ರಗಳು, ಮುಕ್ತ ಛಂದದಲ್ಲಿ ಬರೆದ ಕವಿತೆಗಳಂತೆ ಗೋಚರಿಸುತ್ತವೆ. ವಸಾಹತುಷಾಹಿಗೆ ಪೂರಕವಾಗಿ ಹುಟ್ಟಿಕೊಂಡ ಮಧ್ಯಮವರ್ಗದ ಜನರ ಜೀವನದಲ್ಲಿ ಸಾಮಂತ ಯುಗದ ಅಳಿದುಳಿದ ಪ್ರಭಾವವಂತು ಇದ್ದೇ ಇತ್ತು. ಆದರೂ ಸಹ, ಈ ಸ್ತ್ರೀಪಾತ್ರಗಳು ಆ ಪ್ರಭಾವಗಳ ವಿರುದ್ಧ ಧೀಮಂತವಾಗಿ ಹೋರಾಡಿದವು. ಈ ಹಿನ್ನೆಲೆಯಲ್ಲಿ ದಾಮಿನಿಯ ಪಾತ್ರ ರಚನೆ ವಿಸ್ಮಯಕಾರಿಯಾಗಿದೆ. ದಾಮಿನಿ, ಉತ್ತರದ ಗಾಳಿಗೆ ಕಾಡಿ ಕಿಮ್ಮತ್ತು ಸಹ ಕೊಡಲಿಲ್ಲ.

ಎಲ್ಲರಿಗಿಂತ ಜನಪ್ರಿಯ ಕಾದಂಬರಿಕಾರ ಶರತ್‌ಚಂದ್ರರ ಬಹು ಪ್ರಶಂಸಿತ ಸ್ತ್ರೀ ಪಾತ್ರಗಳು, ರವೀಂದ್ರರ ವಿನೋದಿನಿಯಿಂದ ಪ್ರಭಾವಿತವಾಗಿ ಸೃಷ್ಟಿಯಾದವು. ಕಲ್ಪನೆಯ ಲೋಪದಿಂದಾಗಿ ಶರತ್‌ಚಂದ್ರರ ಕಾದಂಬರಿಗಳ ವಸ್ತು ದುರ್ಬಲವಾಗಿದೆಯಲ್ಲದೆ, ಅವುಗಳ ಕಥನ-ನಿರೂಪಣೆಯು ಕೂಡ ಸೀಮಿತವಾಗಿದೆ. ಆದಾಗಲು ಸಹ, ಅವರು ತಮ್ಮ ಕೃತಿಗಳಲ್ಲಿ, ಸ್ತ್ರೀ ಸ್ವಾತಂತ್ರ್ಯದ ಬಾವುಟವನ್ನು ಎತ್ತಿ ಹಿಡಿದದ್ದು ಸ್ತುತ್ಯವಾಗಿದೆ. 'ಭಾರತೀ'ಯುಗದ ರೊಮ್ಯಾಂಟಿಕ್ (ರೋಮಾಂಚಕ) ಉಪನ್ಯಾಸಗಳ ಧಾರೆಯಿಂದ ಬಂಗಾಳಿ ಕಾದಂಬರಿಗಳನ್ನು ಹೊರತಂದ ಶ್ರೇಯಸ್ಸು ಶರತ್‌ಚಂದ್ರರಿಗೆ ಸಲ್ಲುತ್ತದೆ. ತಮ್ಮ ಮುಂದಿರುವ ವಸ್ತುವಿಷಯದ ಬಗ್ಗೆ ಯಾವುದೇ ತೆರನಾದ ಭ್ರಾಂತಿಯನ್ನು ಇಟ್ಟುಕೊಳ್ಳದೆ, ಸ್ಪಷ್ಟವಾದ ನಿಲುವು ತಳೆದಿದ್ದರಿಂದಲೇ, ಶರತ್‌ಚಂದ್ರರಿಗೆ ಈ ಕ್ಷೇತ್ರದಲ್ಲಿ ಸಾಕಷ್ಟು ಯಶಸ್ಸು ಲಭಿಸಿತ್ತು. ಆದಾಗಲು, ಅಲ್ಲಲ್ಲಿ ಅವರ ಭಾವನೆಗಳು ಸಂಕೀರ್ಣವಾಗಿದ್ದುದು ಕಂಡು ಬರುತ್ತದೆ. ಶರತ್‌ಚಂದ್ರರ ಪುರುಷ ಪಾತ್ರಗಳು, ಬೌದ್ಧಿಕ

ದೃಷ್ಟಿಯಿಂದ ಸಾಧುವಾಗಿದ್ದರೂ ಜೀವಂತವಾಗಿವೆ. ಸ್ತ್ರೀ ಪಾತ್ರಗಳ ಆಚರಣೆ ನಿರರ್ಥಕವೆನಿಸಿದರೂ ಆವೇಗ ಭರಿತವಾಗಿವೆ. ಅವರ *ಶ್ರೀಕಾಂತ* (1917) ಪ್ರಥಮ ಪರ್ವ ಮತ್ತು *ಗೃಹದಾಹ* (1920) ಇದಕ್ಕೆ ಸಾಕ್ಷಿಯಾಗಿವೆ.

ಬಂಕಿಮ್ – ರವೀಂದ್ರ – ಶರತ್‌ರ ಪರ್ವ, ಬಂಗಾಳಿ ಸಾಹಿತ್ಯದ – ಕಾದಂಬರಿಗಳ ಪ್ರಥಮ ಪರ್ವವಾಗಿದೆ. 1930 ರಿಂದ 1950 ರ ವರೆಗಿನ ಅವಧಿಯನ್ನು ಎರಡನೆಯ ಪರ್ವವೆಂದು ಪರಿಗಣಿಸಲಾಗಿದೆ. ಈ ಅವಧಿಯಲ್ಲಿ, ಕಾದಂಬರಿಗಳ ಲೇಖಕರಲ್ಲಿ ಯಾರೇ ಆಗಲಿ, ತಮ್ಮದೇ ಆದ ಆಧಿಪತ್ಯ ಹೊಂದಿರಲಿಲ್ಲ. ಈ ಅವಧಿಯಲ್ಲಿ, ತಕ್ಕಮಟ್ಟಿನ ಪ್ರಾಮುಖ್ಯತೆ ಪಡೆದುಕೊಂಡ ಆರು ಮಂದಿ ಕಾದಂಬರಿಕಾರರು, ತಮ್ಮದೇ ಆದ ಶೈಲಿಯಲ್ಲಿ, ಭಿನ್ನವಾದ ರೀತಿಯಲ್ಲಿ, ಜೀವನದ ಆಗು–ಹೋಗುಗಳನ್ನು ನಿರೂಪಿಸಿದರು. ಇವರಲ್ಲಿ ತಾರಾಶಂಕರ, ವಿಭೂತಿಭೂಷಣ ಮತ್ತು ಮಾನಿಕ – ಈ ಮೂವರು ಬಂದೋಪಾಧ್ಯಾಯರು ಉಲ್ಲೇಖನೀಯರು. ಬನಫೂಲ್ ಮತ್ತು ಬುದ್ಧದೇವ ಬಸು ಅವರ ಕಾದಂಬರಿಗಳ ಶೈಲಿ ಮತ್ತು ಕಥಾನಕ ಕಲಾತ್ಮಕವಾಗಿದ್ದು, ಇದಕ್ಕಾಗಿಯೇ ಅವರು ಈಗಲೂ ಸಹ ಪ್ರಸಿದ್ಧಿಯಾಗಿದ್ದಾರೆ. ಮೂವರು ಬಂದೋಪಾಧ್ಯಾಯರ ಕನಿಷ್ಠ ಪಕ್ಷ ಎರಡೆರಡು ಕಾದಂಬರಿಗಳು/ ತಾರಾಶಂಕರರ *ಹಾಂಸುಲೀ ಬಾಂಕೇರ ಉಪಕಥಾ* (1947) ಮತ್ತು *ಕವಿ* (1942); ವಿಭೂತಿ ಭೂಷಣರ *ಪಥೇರ ಪಾಂಚಾಲಿ* (1929) ಮತ್ತು *ಆರಣ್ಯಕ* (1939); ಹಾಗೂ ಮಾನಿಕರ *ಪುತುಲ ನಾಚೇರ ಇತಿ ಕಥಾ* (1936) ಮತ್ತು *ಪದ್ಮಾನದೀರ ಮಾಂಝಿ* (1938) – ವಿಶ್ವ ಸಾಹಿತ್ಯದಲ್ಲಿ ಗೌರವಾನ್ವಿತ ಸ್ಥಾನ ಪಡೆಯುವುದಕ್ಕೆ ತಕ್ಕುವಾಗಿವೆ; ಯಾವುದೇ ಭಾಷೆಯಲ್ಲಿನ ಮೇರು ಕೃತಿಗಳಿಗೆ ಸಮ–ಸಮನಾಗಿವೆ. ತಾರಾಶಂಕರರ ಕಾದಂಬರಿಗಳಲ್ಲಿನ ಜಿಜ್ಞಾಸು, ಭಾರತ ಬೋಧ ಅನುಪಮವಾಗಿದೆ, ವಿಶಾಲವಾಗಿದೆ. ವಿಭೂತಿ ಭೂಷಣರ ಜಿಜ್ಞಾಸೆಯ ಪರಿಧಿ ಅಷ್ಟೊಂದು ವಿಶಾಲವಾಗಿರದಿದ್ದರೂ, ಅವರ ಕಥಾನಕ ಮಾರ್ಮಿಕವಾಗಿದೆ. ಮಾನಿಕರು, ಜೀವನದ ಜಟಿಲತೆಯನ್ನೆ ಅದೃಷ್ಟದ ಜಟಿಲತೆಯನ್ನಾಗಿ ಮಾಡಿ, ಅದನ್ನು ಹೃದಯಂಗಮವಾಗಿ, ಮನಮುಟ್ಟುವಂತೆ ನಿರೂಪಿಸುವಲ್ಲಿ ನಿಷ್ಣಾತರಾಗಿದ್ದರು. ಇದರಲ್ಲಿ ಅವರು ತಮ್ಮ ಪೂರ್ವಜ ಜಗದೀಶ ಗುಪ್ತರನ್ನು ಹಿಂದೆ ಹಾಕಿದ್ದರು.

ಬಂಗಾಳಿ ಕಾದಂಬರಿ ಯುಗದ ದ್ವಿತೀಯ ಮತ್ತು ತೃತೀಯ ಪರ್ವದ ನಡುವಣ ಸಂಪರ್ಕ ಸೇತುವೆ ಎಂಬ ಕೀರ್ತಿ ಮಾನಿಕ ಬಂದೋಪಾಧ್ಯಾಯ ಅವರಿಗೆ ಸಲ್ಲುತ್ತದೆ. ಇದಕ್ಕಾಗಿಯೇ ಅವರು ವಿಶೇಷ ಮರ್ಯಾದೆಗೆ ಪಾತ್ರರಾಗಿದ್ದಾರೆ. ಅವರು ಸಂಜ್ಞೆ–ಪ್ರಜ್ಞೆಯಿಂದ, ಜೀವನದ ಒಳ–ಹೊರಗುಗಳನ್ನು ಗುರುತಿಸಬಲ್ಲವರಾಗಿದ್ದರು.

ಐದನೆಯ ಮತ್ತು ಆರನೆಯ ದಶಕಕ್ಕೆ ಸೇರಿದ ಸತೀಶನಾಥ ಭಾಧುಡಿ ಅವರ ಕಾದಂಬರಿಗಳು ವಿಚಿತ್ರ ವಿಷಯ ಜ್ಞಾನದ ಪರಿಚಯ ನೀಡುತ್ತವೆ. ಅವರ ಅಚಿನರಾಗಿನಿ ಲಿರಿಕಲ್ ಕೃತಿಯಾಗಿದೆಯಾದರೂ, ಅದು *ಜಾಗರಿ* ಅಷ್ಟು ಕಳಪೆ ಏನಲ್ಲ. ಅವರ

*ಡೊಂಢಾಯಿ ಚರಿತ ಮಾನಸ* – ಪ್ರಥಮ ಖಂಡ, ಒಂದು ವಿಸ್ಮಯಕಾರಿ ಕೃತಿಯಾಗಿದೆ.

ಶೀರ್ಷೇಂದು ಮುಖೋಪಾಧ್ಯಾಯ ಮತ್ತು ಅವರ ಸಮಕಾಲೀನರು ಕಾದಂಬರಿಗಳನ್ನು ಬರೆಯಲು ಆರಂಭಿಸುವುದಕ್ಕೂ ಮುಂಚಿನ ಹತ್ತು – ಹನ್ನೆರಡು ವರ್ಷಗಳ ಕಾಲ ಬಂಗಾಳಿ ಕಾದಂಬರಿಗಳಲ್ಲಿ ಒಂದು ತೆರನಾದ ಜಡತೆ, ನಿರುತ್ಸಾಹ ತಲೆದೋರಿತ್ತು. ಎರಡನೆಯ ಮಹಾಯುದ್ಧದ ನಂತರ ಬಂಗಾಳಿ ಸಾಹಿತ್ಯದ ಪ್ರವೃತ್ತಿಯಲ್ಲಿ ಬದಲಾವಣೆ ಆದದ್ದು ಕಂಡು ಬರುತ್ತದಲ್ಲದೆ, ಕಾದಂಬರಿಗಳಲ್ಲಿನ ಒಲವು ಬೇರೆಯಾಗಿದ್ದುದು ಸ್ಪಷ್ಟವಾಗಿ ಗೋಚರಿಸುತ್ತದೆ. ಈ ಅವಧಿಯಲ್ಲಿನ ಕಾದಂಬರಿಗಳು, ಇತಿಹಾಸ ಮತ್ತು ಭೌಗೋಲಿಕ ಘಟನಾವಳಿಗಳ ಪ್ರಭಾವಕ್ಕೆ ಒಳಗಾದ ಕೃತಿಗಳಾಗಿದ್ದವು. ಎರಡನೆಯ ಮಹಾಯುದ್ಧದ ನಂತರ, ಮಧ್ಯಮ ವರ್ಗದ ಜನರಲ್ಲಿ ಶತಮಾನದಿಂದ ಬೆಳೆದು ಬಂದಿದ್ದ ಮೌಲ್ಯಗಳು ಧ್ವಂಸವಾದವು. ಜನರ ರುಚಿ ಬದಲಾಯಿತು. ವಿಭಜನೆಯ ಫಲಸ್ವರೂಪವಾಗಿ ಗ್ರಾಮಸ್ಥರ ಕನಸುಗಳು ನುಚ್ಚುನೂರಾದವು. ಆಶಾಗೋಪುರಗಳು ಕುಸಿದು ಬಿದ್ದವು. ಇಂತಹುದರಲ್ಲಿ, ತಮ್ಮ ಕಾಲದ ಮತ್ತು ತಮ್ಮ ವರ್ಗದ ಜನರ ಶೂನ್ಯ ಭವಿಷ್ಯದ ವಾಸ್ತವಿಕತೆಯನ್ನು ಎದುರಿಸದೆ, ಕಾದಂಬರಿಕಾರರು, ವಿಷಯ ವಸ್ತುವನ್ನೇ ಬದಲಾಯಿಸಿದರು. ಇದರ ಪರಿಣಾಮವಾಗಿ, ಈ ಯುಗದ ಈ ಅವಧಿಯಲ್ಲಿ ಇತಿಹಾಸಬೋಧ ಶೂನ್ಯವಾದ ಮತ್ತು ಅತೀತ ಧರ್ಮದ ಕಾದಂಬರಿಗಳು ಮತ್ತು ಅಪರಿಚಿತವಾದ ಲೇಬಲ್‌ಗಳನ್ನು ಹೊಂದಿದ ಕಥೆಗಳು ಮಾತ್ರ ಪ್ರಕಟವಾದವು. ಒಟ್ಟಿನಲ್ಲಿ, ಈ ಅವಧಿಯಲ್ಲಿ ಅರ್ಥವತ್ತಾದ, ಸಮಗ್ರವಾದ ಯಾವುದೇ ಸಾಹಿತ್ಯ ಬೆಳಕಿಗೆ ಬರಲಿಲ್ಲ.

ಈ ಮಧ್ಯೆ, ಬಂಗಾಳಿ ಕಾದಂಬರಿಕಾರರಲ್ಲಿ ಅನೇಕರು, ಮಧ್ಯಮ ವರ್ಗದ ಜನರ ಉತ್ಕಟ ಸಂಕಷ್ಟ ಸಮಸ್ಯೆಗಳಿಗೆ ಧ್ವನಿ ನೀಡಿ, ತಮ್ಮ ಕೃತಿಗಳಲ್ಲಿ ಅವನ್ನು ಕಲಾತ್ಮಕವಾಗಿ ಸಾದರ ಪಡಿಸಿದರು. ಈ ತೆರನಾದ ಕಾದಂಬರಿಗಳಲ್ಲಿ, ಜ್ಯೋತಿರಿಂದ್ರ ನಂದಿ ಅವರ *ಬಾರಹ ಕಮರೆ ಔರ್ ಏಕ ಆಂಗನ್* ಮತ್ತು ಸಂತೋಷಕುಮಾರ ಘೋಷ ಅವರ ಕಿನು *ಗ್ವಾಲೆ ಕೆಲಿಗಿ* ಉಲ್ಲೇಖನೀಯವಾಗಿವೆ. ವ್ಯಕ್ತಿಯ ಅಸ್ತಿತ್ವದ ಸಂಗ್ರಾಮ,-ಸಂಘರ್ಷದ ಚಿತ್ರಣದ ವಿಷಯದಲ್ಲಿ, ಆಸೀಮ್ ರಾಯ್ ಅವರ *ಗೋಪಾಲದೇವ* ಉಲ್ಲೇಖನೀಯವಾಗಿದೆ. ಅಮಿಯ ಭೂಷಣ ಮುಜುಮದಾರ ಮತ್ತು ಗುಣಮಯ ಮಾನಾ ಅವರ ಮಹಾಕಾವ್ಯ ರೂಪಿ ಕಾದಂಬರಿಗಳನ್ನು ಸಹ ಮರೆಯಲಾಗದು.

ಮತಿ ನಂದೀ, ಶೀರ್ಷೇಂದು ಮುಖೋಪಾಧ್ಯಾಯ, ದೇವೇಶರಾಯ್, ಶ್ಯಾಮಲ ಗಂಗೋಪಾಧ್ಯಾಯ, ವರೆನ ಗಂಗೋಪಾಧ್ಯಾಯ – ಇವರೇ ಮುಂತಾದವರು ತಮ್ಮ ಕಥೆಗಳ ಮೂಲಕ, ಆರನೆಯ ದಶಕದ ಆರಂಭದಲ್ಲೇ ವಸ್ತುಸ್ಥಿತಿ ಸ್ವತಃ ಬದಲಾಗಿರುವುದನ್ನು ತೀರ ಸ್ಪಷ್ಟಗೊಳಿಸಿದ್ದರು. ದೇವೇಶ ರಾಯ್ ಕಾದಂಬರಿಗಳ ಲೇಖಕರಾಗಿ ಮುಂದೆ ಬರಲಿಲ್ಲವಾದರೂ ಉಳಿದವರು ಆರನೆಯ ದಶಕದ

ಮಧ್ಯಾವಧಿಯ ವೇಳೆಗೆ, ಕಾದಂಬರಿಯನ್ನು, ತಮ್ಮ ಕಥಾನಕದ ಮಾಧ್ಯಮವನ್ನಾಗಿ ಮಾಡಿಕೊಂಡರು. ಈ ಲೇಖಕರ ಕಾದಂಬರಿಗಳಲ್ಲಿ, ತಾರಾಶಂಕರರ ಯೋಗ ಭ್ರಷ್ಟದಲ್ಲಿ ನಿರೂಪಿತವಾದಂತೆ, ಮಾನವ ಸಂಕಟ–ಸಂಕಷ್ಟದ ಚಿತ್ರಣಗಳಿರುವುದು ನಿಜವಾದರೂ ಈ ಯುಗದ ತರುಣ – ತರುಣೇತರ ಲೇಖಕರ ಕೃತಿಗಳಲ್ಲಿ, ಎರಡನೆಯ ಮಹಾಯುದ್ಧದ ನಂತರದ ಕಾಲದ ಸ್ಥಿತಿಗತಿಗಳು ಚೆನ್ನಾಗಿ ನಿರೂಪಿತಗೊಂಡಿರುವುದು ಗಮನಾರ್ಹವಾಗಿದೆ. ಇಷ್ಟೇ ಅಲ್ಲದೆ, ಈ ಲೇಖಕರಿಂದಾಗಿಯೇ, ಬಂಗಾಳಿ ಕಾದಂಬರಿ ಸಾಹಿತ್ಯ ಮರಳಿ ಕಲ್ಕತ್ತೆಗೆ ಬಂದಿತು. ಮಾನಿಕ ಬಂದೋಪಾಧ್ಯಾಯರ ಉತ್ತರಾಧಿಕಾರಿ ಮತ್ತು ಉತ್ತರ ಸಾಧಕರಾಗಿ ಹೊರಹೊಮ್ಮಿದ ಈ ಕಾದಂಬರಿಕಾರರು ಮತ್ತೆ ವ್ಯಕ್ತಿಯ ವಿಶ್ವವನ್ನು ಕಾದಂಬರಿಯ ವಸ್ತುವನ್ನಾಗಿ ಪ್ರತಿಷ್ಠಾಪಿಸಿದರು. ಸುನೀಲ್ ಗಂಗೋಪಾಧ್ಯಾಯ ಅವರ ವಿಶಿಷ್ಟ ಕಾದಂಬರಿ ಆತ್ಮ ಪ್ರಕಾಶ (1966) ದಲ್ಲಿ ವ್ಯಕ್ತಿಯ ಸಚೇತನ–ಜೀವಂತ ಜಗತ್ತಿನ ಪ್ರತಿಫಲನ, ಪ್ರತಿಬಿಂಬಕ್ಕೆ ಹೆಚ್ಚಿನ ಪ್ರಾಮುಖ್ಯತೆ ನೀಡಲಾಗಿದೆ. ಈ ಮಧ್ಯೆ, ಐದನೆಯ ದಶಕಕ್ಕೆ ಸೇರಿದ ಯುವ ಕಾದಂಬರಿಕಾರ ಸಮರೇಶ ಬಸು, ವಿವರ (1965) ಎಂಬ ಹೆಸರಿನಲ್ಲಿ ಬರೆದ ಕಾದಂಬರಿ, ಬಂಗಾಳಿ ಸಾಹಿತ್ಯದಲ್ಲಿ ಗದ್ದಲ ಎಬ್ಬಿಸಿ, ಭಾರಿ ವಿವಾದಕ್ಕೆ ಎಡೆಮಾಡಿ ಕೊಟ್ಟಿತು. ಈ ವಿವಾದದೊಡನೆ ಬಂಗಾಳಿ ಕಾದಂಬರಿಗಳ ತೃತೀಯ ಪರ್ವ ಆರಂಭವಾಯಿತು. ವಿವರದ ನಾಯಕ, ಅಥವಾ ಲೋಕನಾಥ ಭಟ್ಟಾಚಾರ್ಯರಂತಹ ಕವಿಶ್ರೇಷ್ಠರಿಂದ ರಚಿತವಾದ ಬಾಬು ಘಾಟಕೆ ಕುಂಆರಿ ಮ ಛಲಿ ಯ ಪ್ರತೀಕಾರಾತ್ಮಕ ಕಾದಂಬರಿಯ ನಾಯಕನನ್ನು ಗಮನಿಸಿದಲ್ಲಿ ನಾಯಕೋತ್ತಮರ ಕಾಲ ಮುಗಿದಂತೆ ಕಾಣುತ್ತದೆ. ಈ ಕಾದಂಬರಿಗಳಲ್ಲಿ ದೃಶ್ಯ ಮತ್ತು ವಿವರಣೆಯ ಅಪೂರ್ವ ಸಂಯೋಗದಿಂದ, ಮೂರನೆಯ ಒಂದು ವಿಶ್ವವನ್ನು ಸೃಷ್ಟಿಸಲಾಗಿದ್ದು, ವ್ಯಕ್ತಿಯ ಚೇತನ – ಅಚೇತನಗಳ ಜಟಿಲ ಆಲೋಕನ ಅಂಧಕಾರ ಈ ಮೂರನೆಯ ವಿಶ್ವದ ವಾಸ್ತವಿಕ ಅಸ್ತಿತ್ವವಾಗಿದೆ.

ಶೀರ್ಷೇಂಧು ತಮ್ಮ ಆತ್ಮಕಥೆಯ ರೂಪದಲ್ಲಿ ಬರೆದಿರುವ ಕಾದಂಬರಿ ಉಜಾನ (1972) ದಲ್ಲಿ ಅರ್ಥಪೂರ್ಣವಾದ ಒಂದು ಉಕ್ತಿ ಬರೆದಿದ್ದಾರೆ – "ಒಮ್ಮೆ, ಒಂದು ರೂಪ ತಳೆದು ಹುಟ್ಟಿದವರು, ಮತ್ತಾವುದೇ ರೂಪ ತಳೆಯಲಾರರು." ಅಪರಿಚಿತವಾದ ಹಿಂದು ಮುಂದುಗಳನ್ನು ಅರಿಯದ ಈ ವ್ಯಕ್ತಿಯನ್ನು ಶೋಧಿಸುವುದು, ಅವನ ಅಸ್ತಿತ್ವವನ್ನು ಪತ್ತೆ ಹಚ್ಚುವುದೇ ಕಾದಂಬರಿಕಾರರ ಕಾಯಕವಾಗಿದೆ. ಶೀರ್ಷೇಂಧು, ಈ ಶೋಧನೆಯಲ್ಲಿ ನಿರತರಾಗಿರುವ ಕಾದಂಬರಿಕಾರರಲ್ಲಿ ಒಬ್ಬರಾಗಿದ್ದಾರೆ. ಉಜಾನ ಕಾದಂಬರಿಯ ನಾಯಕ, ಕುಕು, ಶಾಲೆಗೆ ಹೋದ ಮೊದಲ ದಿನ, ಅವನ ತರಗತಿಯ ಅಧ್ಯಾಪಕರು ಅವನ ನಿಜವಾದ ಹೆಸರು ಮಧುಸೂದನ ಎಂದು ಕರೆದಾಗ, ಥಟ್ಟನೆ ಓಗೊಡದಾದ. ವಿಭಿನ್ನ ಹೆಸರುಗಳನ್ನು ಹೊಂದಿದ ವ್ಯಕ್ತಿಗೆ, ಯಾವ ಹೆಸರು ಕೂಗಿದಾಗ ಓಗೊಡಬೇಕು ಎಂಬುದು ಒಂದು ಗೊಂದಲದ ವಿಷಯವೇ ಸರಿ. ಶೀರ್ಷೇಂಧು, ಈ

ಗೊಂದಲವನ್ನು ಬಿಡಿಸುವ ಪ್ರಯಾಸ ಮಾಡಿದರು. ಅವರ ಕಾದಂಬರಿ ಫೇರಾ ದ ನಾಯಕ ಆತನು, ತನ್ನ ಎಲ್ಲಾ ಹೆಸರು–ನಾಮಾಂಕಿತಗಳನ್ನು ತ್ಯಜಿಸಿದನಾದರೂ, ತನ್ನ ಅಸ್ತಿತ್ವವನ್ನು ಅರಿಯಲು ಅವನಿಗೆ ಸಾಧ್ಯವಾಯಿತೆ? ಈ ರೀತಿ ತನ್ನತನವನ್ನು ಕಳೆದುಕೊಂಡು, ಮತ್ತೆ ಅದನ್ನು ಪಡೆದುಕೊಳ್ಳುವುದು ಶೀರ್ಷೇಂಧು ಅವರ ಕಾದಂಬರಿಗಳ ಒಂದು ವೈಶಿಷ್ಟ್ಯವಾಗಿದೆ.

ಶೀರ್ಷೇಂಧು ಅವರ ಘುನಪೋಕಾ (1967) ಮತ್ತು ಪಾರಾಪಾರ (1971) ಕಾದಂಬರಿಗಳು ಸ್ಥಾನಿಕವಾಗಿದ್ದು, ಪ್ರಾತಿನಿಧಿಕವಾಗಿವೆ. ಘುನ್‌ಪೋಕಾ, ಶೀರ್ಷೇಂಧು ಅವರ ಮೊದಲ ಕಾದಂಬರಿಯಾಗಿದೆ. ಈ ಎರಡೂ ಕಾದಂಬರಿಗಳಲ್ಲಿ, ವಿರಹದ ನೋವಿದೆ; ಕ್ರಮಬದ್ಧವಾದ ರೀತಿಯಲ್ಲಿ ಬೌದ್ಧಿಕ ಶೀಲತೆಯನ್ನು ಪ್ರಸ್ತಾಪಿಸಲಾಗಿದೆ. ಶೀರ್ಷೇಂಧು, ಮಣ್ಣಿನ ಬಣ್ಣವನ್ನು ವಿಶೇಷ ಅರ್ಥದಲ್ಲಿ ಪ್ರಯೋಗಿಸಿದ್ದಾರೆ. ಅವರು ಕಲ್ಪಿಸಿದ ಪಾತ್ರಗಳಲ್ಲಿ, ಒಂದು ತೆರನಾದ ಉದಾಸೀನತೆ ಹರಡಿಕೊಂಡಿದೆ. ಘುನಪೋಕಾದ ಶ್ಯಾಮ ಮತ್ತು ಪಾರಾಪಾರದ ಲಲಿತ, ಕಾದಂಬರಿಯ ಚರಿತ್ರದ ವಾಸ್ತವಿಕತೆಗೆ ಕಿಂಚಿತ್ತೂ ಚ್ಯುತಿಬರದಂತೆ, ಸಭ್ಯತೆಯ ದೃಶ್ಯಪಟದ ಮೇಲೆ ಆಧುನಿಕ ಮನುಷ್ಯರ ರೂಪಕವಾಗಿ ಹೊರಹೊಮ್ಮುತ್ತವೆ. ಈ ಪಾತ್ರಗಳಿಗೆ, ವಿಶ್ವದಲ್ಲಿನ ಆಗುಹೋಗುಗಳ ಬಗ್ಗೆ ಯಾವುದೇ ರೀತಿಯ ಆಗ್ರಹ, ಆಸಕ್ತಿಗಳಿಲ್ಲ. ವಿಶ್ವದ ಆಗುಹೋಗುಗಳಲ್ಲಿ ತಮ್ಮತನವನ್ನು ಕಳೆದುಕೊಳ್ಳುವ ದುಃಖವೂ ಇಲ್ಲ, ಆಸೆ ಆಕಾಂಕ್ಷೆಗಳನ್ನು ಈಡೇರಿಸಿಕೊಳ್ಳುವ ಪ್ರವೃತ್ತಿಯೂ ಇಲ್ಲ. ತನ್ನ ಯುಗದ ಇತಿಹಾಸ, ಸಮಾಜ ಮತ್ತು ರಾಜನೀತಿ ಜಡವಾಗಿದೆ, ಸುಪ್ತವಾಗಿದೆ ಎಂದು ಅರಿತೂ ಏನೂ ಮಾಡಲಾಗದ ಅಸಹಾಯಕ ವ್ಯಕ್ತಿ. ತನ್ನನ್ನು ತಾನು ಕಂಡುಕೊಳ್ಳುವ ಬಗ್ಗೆ ಕಾದಂಬರಿಗಳನ್ನು ಬರೆದಿರುವ ಪ್ರಮುಖರಲ್ಲಿ ಶೀರ್ಷೇಂಧು ಒಬ್ಬರಾಗಿದ್ದಾರೆ. ಅಂತಲೇ ಅವರ ಕಾದಂಬರಿಗಳಲ್ಲಿನ ಮಣ್ಣಿನ ಬಣ್ಣ ನೋಡು ನೋಡುತ್ತಿರುವಾಗಲೇ ಕಾವಿ ಬಣ್ಣದ ಅಂಚನ್ನು ಪಡೆದುಕೊಳ್ಳುವುದನ್ನು ನಾವು ಮನಗಾಣುತ್ತೇವೆ. ಅವರ ಕಥೆ–ಕಾದಂಬರಿಗಳಲ್ಲಿ ಹುಚ್ಚರು, ಅರೆಹುಚ್ಚರು ಒಂದಾದರೂ ಪಾತ್ರ ಇದ್ದೇ ಇರುತ್ತದೆ. ಆದರೆ, ಈ ಪಾತ್ರಗಳು ಕರುಣೆಯನ್ನು ಹುಟ್ಟಿಸುವುದಕ್ಕಾಗಿ ಸೃಷ್ಟಿಸಿದ ಪಾತ್ರಗಳಲ್ಲ ಎಂಬುದು ಗಮನಾರ್ಹವಾಗಿದೆ. ಶೀರ್ಷೇಂಧು ಅವರ ಉತ್ತಮ ಕಥೆಗಳಲ್ಲಿ ಒಂದಾದ ಉತ್ತರ ಕೆ ಬಾಲಕನಿ (ಉತ್ತರದ ಬಾಲಕನಿ) ನಲ್ಲಿನ ಹುಚ್ಚನ ಪಾತ್ರ, ಅವರು ಸೃಷ್ಟಿಸಿರುವ ಹುಚ್ಚರ ಪಾತ್ರಗಳ ಪ್ರತಿನಿಧಿ – ಪ್ರತೀಕದಂತಿದೆ. ಕೀರ್ತಿ– ಅಪಕೀರ್ತಿ, ಅರ್ಥ–ವ್ಯರ್ಥ, ಪಡೆಯುವುದು ಮತ್ತು ಕಳೆದುಕೊಳ್ಳುವುದು ಇವೆಲ್ಲವೂ ನಿರರ್ಥಕವಾಗಿ, ವಾಸ್ತವಿಕತೆಯಿಂದಲೂ ದೂರವಾದ ವ್ಯಕ್ತಿಯ ಪ್ರತಿರೂಪವನ್ನು ನಾವು ಶ್ಯಾಮ ಮತ್ತು ವಿಮಾನನಲ್ಲಿ ಕಾಣಬಹುದು. ಉತ್ತರ ಕೆ ಬಾಲಕನಿ ಯಲ್ಲಿನ ಅರುಣನ ಪಾತ್ರ ಈ ರೀತಿಯ ಪಾತ್ರ ಮತ್ತು ಪಾತ್ರ ಕಲ್ಪನೆಯ ಪರಾಕಾಷ್ಠೆಯಾಗಿದೆ. ಅರುಣ, ನಮ್ಮೆಲ್ಲರಿಗೂ

ಸುಪರಿಚಿತವಾದ ವಾಸ್ತವಿಕ ಜೀವನದ ಅಲ್ಲೋಲ-ಕಲ್ಲೋಲಗಳನ್ನು ಕಂಡೂ-ಕಾಣದಂತೆ, ಮೌನವಾಗಿ, ಬೆಟ್ಟದಂತೆ ನಿಂತಿದ್ದಾನೆ. ವಾಸ್ತವಿಕ ಜೀವನದ ಈ ನದಿ, ಹಿಮದಂತೆ ಕರಗಿ, ಬತ್ತಿ-ಇಂಗಿ ಹೋಗಬಹುದು ಎಂಬುದನ್ನು ಅರಿತೂ ಸಹ, ಆತ ಸುಮ್ಮನಿರುತ್ತಾನೆ. ಅಂತಸ್ಥ ವಾಸ್ತವಿಕತೆಯನ್ನು ಈ ರೀತಿಯ ಅನುಭವಕ್ಕೆ ಒಳಪಡಿಸುವುದು, ಸಾಕ್ಷಾತ್ಕರಿಸುವುದರಲ್ಲೇ ಇಂದಿನ ಕಾದಂಬರಿಗಳ ಲೇಖಕರ ಸಾರ್ಥಕತೆ ಅಡಗಿದೆ. ಎಷ್ಟಾದರೂ, ಹೊರಗಿನ ವಾಸ್ತವಿಕತೆಗಿಂತ, ಒಳಗಿನ-ಅಂತಸ್ಥ ವಾಸ್ತವಿಕತೆಯ ತುಮುಲವನ್ನು ಸಾದರಪಡಿಸುವುದೇ ಕಲಾವಿದರ ಧ್ಯೇಯ-ಅಲ್ಲವೆ.

ಘುನಪೋಕಾದ ಶ್ಯಾಮ, ಆಧುನಿಕ ಯುಗದ ಅನನ್ಯ ಮನುಷ್ಯನ ಪ್ರತಿನಿಧಿಯಾಗಿದ್ದಾನೆ. ವಾಸ್ತವಿಕತೆಯ ಪ್ರಭಾವಕ್ಕೆ ಒಳಗಾಗಿದ್ದರೂ, ಹೊರಗಿನ ವಾಸ್ತವಿಕತೆ ಆತನಿಗೆ ವಿರುದ್ಧವಾಗಿದೆ. ಸತ್ಯವೆಂಬುದು ಆತನ ಚೇತನದಲ್ಲಿ ಪ್ರತಿಬಿಂಬಿತಗೊಂಡಿರುವ ಒಂದು ವಾಸ್ತವಿಕ ಚಿತ್ರವಾಗಿದೆ. ಅಗಲಿಕೆ-ವಿರಹಗಳು ಆತನ ಅರಿವಿನ ಸಂಕೇತಗಳಾಗಿವೆ. ಈ ದೃಷ್ಟಿಯಿಂದ ನೋಡಿದಲ್ಲಿ ಮತ್ತು ಈ ಕಾರಣದಿಂದ ಆತ ಅನನ್ಯನಾಗಿದ್ದಾನೆ. ಯಾವುದೇ ಶ್ರೇಣಿಗೆ ಸೇರದೆ, ಯಾರನ್ನೇ ಆಗಲಿ ಪ್ರತಿನಿಧಿಸದ ಅನನ್ಯ ವ್ಯಕ್ತಿಯಾಗಿದ್ದಾನೆ. ಆತ, ಸ್ವಯಂ ಸಿದ್ಧನಾಗಿ, ಒಂಟಿಯಾಗಿದ್ದಾನೆ. ಅಂತಲೇ, ಆತ ತನ್ನ ಸ್ವಂತ ಇಚ್ಛೆಯಿಂದಲೇ ಇದ್ದ ಕೆಲಸ ಬಿಟ್ಟು ಬಿಡುತ್ತಾನೆ. ಆತ ಕೆಲಸ ಬಿಟ್ಟ ದಿನದಿಂದ, ಆತನ ಎಲ್ಲಾ ಸಂಪರ್ಕ-ಸಂಬಂಧಗಳು, ಒಂದೊಂದಾಗಿ ಕಳಚ ತೊಡಗುತ್ತವೆ. ಇತುವಿನೊಡನೆ ಇದ್ದ ತನ್ನ ಸಂಬಂಧದ ಬಗ್ಗೆ ಅವನು ಯೋಚಿಸುವುದೇ ಇಲ್ಲ, ಆದಾಗಲೂ, ಆತ, ನಿಧಾನವಾಗಿ, ಒಂದೊಂದಾಗಿ, ಈ ಸಂಬಂಧಗಳ ಸೂತ್ರಗಳನ್ನು, ತನ್ನೊಳಗೆ ತಾನು ಏಕೀಭವಿಸಿಕೊಳ್ಳುತ್ತಾನೆಂಬುದು ಹೆಚ್ಚು ವಾಸ್ತವಿಕವಾಗಿವೆ, ನಿಜವಾಗಿದೆ. ಮೋಟರ್ ಸೈಕಲಿಸ್ಟ್ ಮತ್ತು ಲೀಲಾ, ವಿಪರೀತ-ವಿರುದ್ಧವಾದ ರೀತಿಯಲ್ಲಿ, ಆತನ ಅಸ್ತಿತ್ವದ ಪರಿಧಿಯ ಹೊರಗೇ ಇರುತ್ತಾರೆ. ವಾಸ್ತಿವಿಕ ಜಗತ್ತಿನಲ್ಲಿ, ಆತನ ಪಾಲಿಗೆ, ಹೃದಯಹೀನರಾದ ಜನರ ಶತ್ರುತ್ವ ಸಿಗುತ್ತದೆ. ಈ ಎಲ್ಲ ಕಾರಣಗಳಿಂದಾಗಿಯೇ ಶ್ಯಾಮನ ಸಂಸಾರದಲ್ಲಿ, ವಾಸ್ತವಿಕತೆಯ ಪ್ರವಾಹ, ಎದಿರೇಟಿನ ರೂಪ, ತನ್ನದೇ ಆದ ಲಾಜಿಕ್-ತರ್ಕದಿಂದ ವ್ಯಕ್ತವಾಗಿ ಅರಳುತ್ತದೆ.

ಶ್ಯಾಮನ ಪಾತ್ರ, ಇಡೀ ಕಾದಂಬರಿಯನ್ನು ವ್ಯಾಪಿಸಿದೆ. ಶ್ಯಾಮನೆಂಬ ಒಬ್ಬ ವ್ಯಕ್ತಿ, ಒಂದಾದ ಮೇಲೊಂದರಂತೆ ಆಘಾತಗಳನ್ನು ಎದುರಿಸಿ, ಎಲ್ಲಿಂದಲೊ ತನ್ನ ಪಯಣ ಆರಂಭಿಸಿ, ಅದೆಲ್ಲಿಗೊ ಹೋಗಿ ಸೇರುತ್ತಾನೆ. ಕಾದಂಬರಿಯಲ್ಲಿನ ಕೊನೆ ಘಟನೆಯ ನಂತರ, ಶ್ಯಾಮ ಹುಚ್ಚನಾಗುವುದರಲ್ಲಿ ಅಚ್ಚರಿ ಏನಿಲ್ಲ. ಈ ಕಾದಂಬರಿಯಲ್ಲಿನ ಶ್ಯಾಮನ ಕಥೆ – ಶ್ಯಾಮನ ಪಾತ್ರದಲ್ಲಿ, ಮನೋವಿಶ್ಲೇಷಣೆಗೆ ಬೇಕಾದ, ಯೋಗ್ಯವಾದ ಎಲ್ಲಾ ಕಾರಣಗಳು ಇವೆ. ಮೋಟರ್ ಸೈಕಲ್‌ನ ಪ್ರಕರಣದಲ್ಲಿ ಆತಂಕದ ಕಲ್ಪನೆ ಇದೆ. ಇತುಳ ಜೊತೆಯ ಕಣ್ಣು ಮುಚ್ಚಾಲೆ ಆಟದಲ್ಲಿ ಅಸ್ವಾಭಾವಿಕತೆ ಅಸಹಜತೆ ಎದ್ದು ಕಾಣುತ್ತದೆ.

ಇತುಳ ಜೊತೆ ಆಡುವ ಈ ಆಟದ ಮೂಲಕ, ಶ್ಯಾಮ, ತನಗೆ ಅರಿವಿಲ್ಲದೆಯೇ, ಅದೇನೋ ಹೇಳ ಬಯಸುತ್ತಾನೆ. ವಾಸ್ತವಿಕತೆ, ಅದರಲ್ಲು ಕಾಮದ–ಬಯಕೆಯ ವಾಸ್ತವಿಕತೆ ತನ್ನನ್ನು ತಟ್ಟಲಾರದೆಂಬುದನ್ನು ಹೇಳ ಬಯಸುತ್ತಾನೆ. ಶ್ಯಾಮ ಸ್ವತಃ, ಅಂತಹ ವಾಸ್ತವಿಕತೆಯಿಂದ ದೂರವಿರುತ್ತಾನೆ. ಇದೆಲ್ಲಾ ಸ್ವಾಭಾವಿಕವೇ ಆಗಿದೆ. ಏಕೆಂದರೆ, ಶ್ಯಾಮನ ಸಭ್ಯತೆಯ ಆ ಗಳಿಗೆಯಲ್ಲಿ, ಅಸ್ವಾಭಾವಿಕವಾದುದೆಲ್ಲವು, ಸ್ವಾಭಾವಿಕವಾಗಿ ಪರಿಣಮಿಸಿದೆ. ಹಾಗೆ ನೋಡಿದರೆ, ಈ ಯುಗದಲ್ಲಿ ಸಂತೋಷ ಮತ್ತು ಸ್ವಾಭಾವಿಕತೆಗಳೇ ಅಸ್ವಾಭಾವಿಕವಾಗಿವೆ. ಪಾರಾಪಾರದ ವಿಮಾನನಿಗೆ, ತನ್ನ ತಲೆಯಲ್ಲಿ ಆಕಾಶದ ಪ್ರವಿಷ್ಟ–ಪ್ರವೇಶ ಆಗುವುದಿಲ್ಲವೆಂಬುದು ತಿಳಿದ ದಿನದಿಂದ, ಆತ 'ಸ್ಮಗ್' – ಅಂದರೆ ಒಂದು ರೀತಿಯಲ್ಲಿ ಸಂತುಷ್ಟನಾಗಿ, 'ಆವೆರೆಜ್' ಆಗುತ್ತಾನೆ.

ಶ್ಯಾಮನ ಅಪರಾಧ ಭಾವನೆ–ಕಲ್ಪನೆ, ಆಧುನಿಕ ವ್ಯಕ್ತಿಯ ಸಭ್ಯತೆಯ ಕ್ಷಣಿಕ ಭಾವನೆ–ಕಲ್ಪನೆಯಾಗಿದೆ. ಇದಕ್ಕೆ ನಾನೇ ಹೊಣೆಯಾಗಿರಬಹುದು, ನನ್ನದೇ ತಪ್ಪಿರ ಬಹುದು – ಎಂಬ ಸಂಶಯ, ಅಪರಾಧ ಭಾವನೆ ನಮ್ಮಲ್ಲಿ ಮೂಡುವುದಕ್ಕೆ ನಮ್ಮ ಸಭ್ಯತೆಯೇ ಕಾರಣವಾಗಿದೆ. ಆದಾಗಲು ಸಹ, ಶ್ಯಾಮನ ಕಥೆ, ನಿರಾಶಾದಾಯಕವಾದ ಕಥೆ ಅಲ್ಲ. ಎಲ್ಲ ವೇದನೆಗಳನ್ನು ಸಹಿಸಿ, ಸಂಕಷ್ಟಗಳನ್ನು ಎದುರಿಸಿದ ಮನುಷ್ಯ ತನ್ನ ಎರಡನೆಯ ಜನ್ಮದಲ್ಲಿ ಸಾಫಲ್ಯ ಪಡೆಯುತ್ತಾನೆ– ಎಂಬ ಭಾವನೆ, ಶ್ಯಾಮ ಮತ್ತು ಲಲಿತರ ಪಾತ್ರದಲ್ಲಿ ಅಷ್ಟೇ ಅಲ್ಲದೆ, ಶೂನ್ಯ ಉದ್ಯಾನ ಎಂಬ ಕಾದಂಬರಿಯ ಗೌರಹರಿ ಪಾತ್ರದಲ್ಲೂ ವ್ಯಕ್ತವಾಗಿದೆ. ಈ ಹೊಸ ಜನ್ಮ ಪಡೆಯುವುದಕ್ಕಾಗಿ, ಪುನಃ ತಾಯಿಯ ಒಡಲನ್ನು ಸೇರುವ ಆಕಾಂಕ್ಷೆ, ಹೊಸ ಜನ್ಮಕ್ಕಾಗಿ, ಮೃತ್ಯುವನ್ನು ಸ್ವೀಕರಿಸುವ ಆಕಾಂಕ್ಷೆಯಾಗಿದೆ. ಇದೇ ಕಾರಣಕ್ಕಾಗಿ, ಪಾರಾಪಾರದ ಲಲಿತ, ವ್ಯಾಧಿಗಳಿಂದ ಜರ್ಜಿತವಾದ ಮಾನವ ಜಾತಿಯ ಪರವಾಗಿ, ಈ ಆಕಾಂಕ್ಷೆ ವ್ಯಕ್ತಪಡಿಸಿದ್ದಾನೆ. ಘುನಪೊಕಾದ ಶ್ಯಾಮನು, ಇದೇ ಆಕಾಂಕ್ಷೆ ವ್ಯಕ್ತಪಡಿಸಿದ್ದಾನೆ. ಶೀರ್ಷೇಂಧು ಅವರ ಅನುಭವ–ಅನುಭೂತ ಅವರ ಪಾತ್ರ ಗೌರಹರಿಯಂತೆ, ಪ್ರೇಮ, ಪರಿಪೂರ್ಣತೆ ಮತ್ತು ಈಶ್ವರನತ್ತವಾಲಿದೆ, ಹೌದು, ಶೀರ್ಷೇಂಧು, ಬಹಿರಂಗವಾಗಿ –ವ್ಯಕ್ತವಾಗಿ,'ಈಶ್ವರ' – ಎಂಬ ಶಬ್ದವನ್ನು ಬಳಸಿದ್ದಾರೆ. ಆಗ, ಅವರ ವಯಸ್ಸು ಕೇವಲ ಮುವತ್ತೇಳು ವರ್ಷ ಎರಡು ತಿಂಗಳುಗಳಾಗಿತ್ತು

–ಸರೋಜ ಬಂದೊಪಾಧ್ಯಾಯ
ಅನುವಾದ : 'ಉಪೇಂದ್ರ'

# 1

ಜೂನ ತಿಂಗಳಲ್ಲಿ "ಸೇಂಟ್ ಎಂಡ್ ಮಿಲರ್" ಫರ್ಮಿನ ಕೆಲಸವನ್ನು ಶ್ಯಾಮ ಬಿಟ್ಟು ಬಿಟ್ಟ.

ಕೆಲಸ ಬಿಡಲು ವಿಶಿಷ್ಟವಾದ ಕಾರಣವೇನೂ ಇರಲಿಲ್ಲ. ಶ್ಯಾಮನ ಮೇಲಧಿಕಾರಿ ಹರಿ ಮಜುಮ್‌ದಾರ, ಎಲ್ಲರ ಎದುರಿನಲ್ಲೇ, ಶ್ಯಾಮನ ಡ್ರಾಯಿಂಗಿನಲ್ಲಿ ಇದ್ದ ಸಣ್ಣ ತಪ್ಪನ್ನು ಎತ್ತಿ ತೋರಿಸಿ "ಬ್ಯಾಸ್ಟರ್ಡ್" ಎಂದು ಬೈದಿದ್ದ. ಗಳಿಗೆಗೊಮ್ಮೆ ಮಜುಮ್‌ದಾರ ಯಾರನ್ನಾದರೂ ಬೈಯುತ್ತಲೇ ಇರುತ್ತಿದ್ದ. ಅಷ್ಟೇ ಏಕೆ ಶ್ಯಾಮ ಕೂಡಾ, ಅವನಿಂದ ಪ್ರಭಾವಿತನಾಗಿ, ಅವನ ಹಾವಭಾವಗಳನ್ನು ಅನುಕರಣೆ ಮಾಡುತ್ತಿದ್ದ. ಫರ್ಮಿನ ತರಪೇತಿಗೆಂದು ಬರುತ್ತಿದ್ದ ಡ್ರಾಫ್ಟ್ಸ್‌ಮನ್‌ರನ್ನೋ, ಕೆಲಸದವರನ್ನೋ ಶ್ಯಾಮ ಮಜುಮ್‌ದಾರನ ಅನುಕರಣೆ ಮಾಡಿ, ಅದೇ ಧ್ವನಿ ಹಾಗೂ ಭಂಗಿಯಲ್ಲಿ ಬೈಯುತ್ತಿದ್ದ. ಅದೂ ಅಲ್ಲದೆ ನಿರಂತರ ಪ್ರಯೋಗಗಳಿಂದಾಗಿ ಈ ಬೈಗಳು ಶಕ್ತಿಹೀನವಾಗಿ, ಮೊದಲಿನ ತಮ್ಮ ಜೋರನ್ನು ಕಳೆದುಕೊಂಡಿವೆ. ಆದುದರಿಂದ ಕೆಲವು ಹೊಸ ಬೈಗಳು ಆವಿಷ್ಕಾರವಾಗಿ, ಹಳೇ ಬೈಗಳ ಸ್ಥಾನವನ್ನು ಆಕ್ರಮಿಸದೇ ಇದ್ದರೆ ಮುಂದೆ ಕಷ್ಟ ಎಂಬ ಪೂರ್ಣ ವಿಶ್ವಾಸ ಅವನಲ್ಲಿ ಮೂಡಿತ್ತು.

ಆದರೂ ಮಜುಮ್‌ದಾರನಿಂದ ಆ ರೀತಿಯ ಮಾತು ಕೇಳಿದ ಮೇಲೆ, ಶ್ಯಾಮ ಎರಡು ಮೂರು ದಿನ ತುಂಬಾ ಯೋಚನೆ ಮಾಡಿದ. ಯೋಚನೆಯಿಂದ ಅನ್ಯಮನಸ್ಕನಾಗಿ, ಅವನು ತನ್ನ 'ಟೈಯ್' ಗಂಟು ಹಿಡಿದು ತಿರುಗಿಸುವುದೂ, ಕನ್ನಡಿಯ ಮುಂದೆ ನಿಂತು, ಅರ್ಥಹೀನ ಭಾವದಿಂದ ತನ್ನ ಮುಖವನ್ನು ನೀಡಿಕೊಳ್ಳುವುದೂ ಹಾಗೂ ಸಂಜೆಯ ಹೊತ್ತು ಹೊರಗೆಲ್ಲೂ ತಿರುಗಾಡಲು ಹೋಗದೆ, ಮನೆಯಲ್ಲೇ ಮಲಗಿರುವುದು ಅವನ ಅಭ್ಯಾಸವಾಯಿತು.ಆದರೂ ಇದ್ಯಾವುದರಿಂದಲೂ ಅವನ ಮನಸ್ಸು ಸ್ಥಿಮಿತಕ್ಕೆ ಬಂದಿರಲಿಲ್ಲ. "ಈ ಬೈಗಳಲ್ಲಿ ಏನೂ ಇಲ್ಲ" ಎಂದು ಶ್ಯಾಮ ತನಗೇ ತಾನು ಹಲವು ಬಾರಿ ಹೇಳಿಕೊಂಡ. ಮಜುಮದಾರ ಪದಗಳ ಅರ್ಥವನ್ನು ಅರಿತು ಎಂದೂ ಬೈಯುವುದಿಲ್ಲ. ಕೇವಲ ತನ್ನ ಕೋಪ ಪ್ರದರ್ಶಿಸುವುದಕ್ಕಾಗಿ ಪದೋಚ್ಛಾರಣೆ ಮಾಡುತ್ತಾನೆ/ಅಷ್ಟೇ ಅಷ್ಟಲ್ಲದೇ ಸ್ವತಃ ತಾನೇ ಎಷ್ಟು ಜನರನ್ನು ಬೈದಿಲ್ಲ? ಹೀಗಿದ್ದ ಮೇಲೆ ಬೇರೆಯವರಿಂದ ಬೈಯಿಸಿಕೊಳ್ಳಲು ಏತಕ್ಕೆ ಹಿಂಜರಿಯಬೇಕು? ಭವಿಷ್ಯದಲ್ಲಿ ನನ್ನನ್ನು ಈ ಕೆಲಸ ಮುಂದೆ ಉನ್ನತ ಮಟ್ಟಕ್ಕೆ

ಕೊಂಡುಯ್ಯುವುದರಲ್ಲಿ ಸಂಶಯವೇ ಇಲ್ಲ. ಈ ನಡುವೆ ಪೇಟೆ ಕಡೆಗೆ ಹೋಗಿ ರೇಡಿಯೋಗ್ರಾಮ್, ರೆಫ್ರೀಜರೇಟರ್, ಹಳೆಯ ಬಳಸಿದ ಸಣ್ಣ ಕಾರಿನ ಬೆಲೆ ತಿಳಿದುಕೊಳ್ಳುವ ಪ್ರಯತ್ನವನ್ನೂ ಸಹ ಮಾಡಿದ್ದ. ದೊಡ್ಡ ಶ್ರೀಮಂತರ ಶಾಂತ, ವಠಾರದಲ್ಲಿ ಎರಡು ಮೂರು ಮನೆಗಳನ್ನೂ ಸಹ ನೋಡಿಕೊಂಡು ಬಂದಿದ್ದ. ಆದರೂ ಈ ನಡುವೆ ಏನೋ ಒಂದು ರೀತಿಯ ಅಸಹಾಯಕತೆ ಅವನನ್ನು ಸುತ್ತುವರಿದಂತೆ ಅವನಿಗೆ ಅನ್ನಿಸಿತು. ಕೆಲಸ ಬಿಟ್ಟು ಬಿಡುವ ಯೋಚನೆಯನ್ನು ಅವನಿಂದ ಮಾಡಲೂ ಸಾಧ್ಯವಿರಲಿಲ್ಲ. ಯಾಕೆಂದರೆ ಇಷ್ಟು ದಿನ ಈ ಕೆಲಸವೇ ಅವನನ್ನು ಮುಂದೆ ತಂದಿತ್ತು.

ನಿಧಾನವಾಗಿ ಕ್ರಮೇಣವಾಗಿ ಶ್ಯಾಮನ ಮನಸ್ಸಿನ ಕ್ಷೋಭೆ ವರ್ಧಿಸುತ್ತಾ ಹೋಯಿತು. ಬಾಯಿ ತುಂಬಾ ಅಡಿಕೆ ಹಾಕಿಕೊಂಡು, ರಸ್ತೆಯಲ್ಲಿ ತಿರುಗಾಡುವುದರಲ್ಲಾಗಲೀ, ಭಾನುವಾರದಂದು ಶ್ಯಾಂಪು ಹಾಕಿಕೊಂಡು ಸ್ನಾನ ಮಾಡುವುದರಲ್ಲಾಗಲೀ, ಅಥವಾ ರಜೆಯ ದಿನಗಳಂದು ಮಧ್ಯಾಹ್ನ ಪಟ್ಟಾಗಿ ನಿದ್ದೆ ಹೊಡೆಯುವುದರಲ್ಲಾಗಲೀ, ಅವನಿಂದ ಹಿಂದಿನ ಸಂತೋಷವನ್ನು ಪಡೆಯಲು ಸಾಧ್ಯವಾಗುತ್ತಿರಲಿಲ್ಲ. ದೊಡ್ಡ ದೊಡ್ಡ ರೆಸ್ಟೋರೆಂಟ್‌ಗಳಿಗೋ, ಬಾರ್‌ಗಳಿಗೋ ಶ್ಯಾಮ ಹಿಂದೆ ಎಷ್ಟೋ ಸಲ ಭೇಟಿ ಕೊಡುತ್ತಿದ್ದ. ಆದರೆ ಈಗ ಆ ಸ್ಥಳಗಳಿಗೆ ಭೇಟಿಕೊಡಲು ಅವನಿಗೆ ಮೊದಲಿನ ಹುಮ್ಮಸ್ಸಿರಲಿಲ್ಲ. ಅದು ಅವನಿಗೆ ಬೇಕೂ ಆಗಿರಲಿಲ್ಲ. "ಸುಸ್ತು, ತಲೆನೋವಿನ" ನೆಪ ಮಾಡಿಕೊಂಡು ಮನೆಯಲ್ಲೇ ಮಲಗಿರುತ್ತಿದ್ದ. ರಾತ್ರಿಯ ಹೊತ್ತೂ ಕೂಡಾ ಅವನಿಗೆ ಚೆನ್ನಾಗಿ ನಿದ್ದೆ ಬರುತ್ತಿರಲಿಲ್ಲ. ಎರಡು ದಿನ ಮಧ್ಯ ರಾತ್ರಿಯಲ್ಲಿ ಎದ್ದು ಸ್ನಾನ ಮಾಡಿದ್ದ; ನಂತರ ಒಂದಾದ ಮೇಲೆ ಒಂದು ಸಿಗರೇಟು ಸೇದುತ್ತ ಮನೆಯೆಲ್ಲಾ ಠಳಾಯಿಸಿದ್ದ. ಶ್ಯಾಮ ಎಂದೂ ಭಾವುಕನಾಗಿರಲಿಲ್ಲ. ಆಳವಾಗಿ ಯೋಚಿಸುವುದೆಂದರೆ ಅವನಿಗೆ ಬೇಜಾರು. ಸದ್ದು ಗದ್ದಲಗಳಿಲ್ಲದೆ ಬದುಕುವುದು ತುಂಬಾ ಕಷ್ಟ ಎಂಬ ಭಾವನೆಯನ್ನೇ ಬೆಳೆಸಿಕೊಂಡು ಬಂದಿದ್ದ. ಕ್ರಮೇಣ ಬೈಗಳಿಂದ ಒಂದು ಭೂತ ಹೊರಬಂದು ತನ್ನ ತಲೆಹೊಕ್ಕು ತಲೆ ತಿನ್ನುತ್ತಿದೆ ಎಂದು ಅವನಿಗೆ ಅರ್ಥವಾಯಿತು. ಯಾವಾಗಲೂ ಕನ್ನಡಿಯ ಎದುರು ನಿಂತು ತನ್ನ ಮುಖನೋಡಿಕೊಳ್ಳುವ ಹೊಸ ಹುಚ್ಚು ಅವನಿಗೆ ಈಚೆಗೆ ಪ್ರಾರಂಭವಾಯಿತು. ಶೇವ್ ಮಾಡಿಕೊಳ್ಳುವಾಗ ಉಪಯೋಗಿಸುವ ಕೈಗನ್ನಡಿಯನ್ನು ಸದಾ ತನ್ನ ಬಳಿಯೇ ಇಟ್ಟುಕೊಂಡು, ಗಳಿಗೆಗೊಮ್ಮೆ ತನ್ನ ಮುಖವನ್ನು ನೋಡಿಕೊಳ್ಳುತ್ತಿದ್ದ. ಆಶ್ಚರ್ಯ, ಒಂದು ದಿನ ಇದೇ ರೀತಿ ನೋಡಿಕೊಳ್ಳುತ್ತಿರುವಾಗ, ಅದರಲ್ಲಿ ತನ್ನ ತುಟಿ ಅಲುಗಾಡುತ್ತಿರುವುದನ್ನು ಕಂಡು ಗಮನವಿಟ್ಟು ನೋಡಿದಾಗ, ತನಗೇ ಅರಿವಿಲ್ಲದಂತೆ ಅವನು "ಬ್ಯಾಸ್ಟರ್ಡ್" "ಬ್ಯಾಸ್ಟರ್ಡ್" ಎಂದು ಉಚ್ಚರಿಸುತ್ತಿದ್ದದ್ದು ತಿಳಿಯಿತು. ಒಮ್ಮೆಲೇ ತಾನು ಹುಚ್ಚನಾಗುತ್ತಾ ಇದ್ದೀನೇನೋ ಎಂಬ ಹೆದರಿಕೆಯಾಯಿತು.

ಶ್ಯಾಮ ಅಂತೂ ಕೊನೆಗೆ, ಜೂನ್ ತಿಂಗಳ ಒಂದು ಮಧ್ಯ ರಾತ್ರಿ ಎಚ್ಚೆತ್ತು ಟೇಬಲ್ ಲ್ಯಾಂಪ್ ಉರಿಸಿ, ತನ್ನ ರಾಜೀನಾಮೆಯ ಪತ್ರವನ್ನು ಬರೆದು ಮುಗಿಸಿದ. ಹಾಗೇ ಮತ್ತೊಂದು ಪತ್ರವನ್ನು ತಾಯಿಗೆ ಬರೆದ. "ನಾನು ಕೆಲಸ ಕಳೆದುಕೊಂಡಿದ್ದೇನೆ, ಒಂದೆರಡು

ತಿಂಗಳು ನೀನು ತುಂಬಾ ಕಷ್ಟಪಡಬೇಕಾಗುತ್ತದೆ. ಇನ್ನು ಮೇಲೆ ನನ್ನ ಮೇಲೆ ತುಂಬಾ ಭರವಸೆ ಇಟ್ಟುಕೊಳ್ಳಬೇಡ.'' ಎರಡೂ ಪತ್ರ ಬರೆದು ಮುಗಿಸಿದ ಮೇಲೆಯೇ ಅಂದು ಅವನಿಗೆ ಅನೇಕ ದಿನಗಳಿಂದ ಇಲ್ಲದಿದ್ದ ನಿದ್ದೆ ಬಂತು.

ಮನೆಯಲ್ಲಿ ಉಪಯೋಗಕ್ಕಾಗಿ, ಬಾಡಿಗೆಗೆ ತಂದಿದ್ದ ಸಾಮಾನುಗಳ ಪೈಕಿ ಒಂದು ''ವಾರ್ಡ್‌ರೋಬ್'' ಹಾಗೂ ಒಂದು ''ಬುಕ್ ಕೇಸ್'' ಇದ್ದವು. ರೂಪಶ್ರೀ ಫರ್ನೀಚರ್ಸ್‌ನಿಂದ ಆಳುಗಳು ಒಂದು ದಿನ ಬಂದು ಅವೆರಡನ್ನೂ ಗಾಡಿಯಲ್ಲಿ ಸಾಗಿಸಿಕೊಂಡು ಹೋದರು. ಸಾಮಾನುಗಳು ಹೊರಟು ಹೋದ ಮೇಲೆ ಶ್ಯಾಮನಿಗೆ ಮನೆ ತುಂಬಾ ದೊಡ್ಡದಾಗಿರುವಂತೆ ಕಾಣಿಸಿತು. ಬಹಳ ಸುಸ್ತಾಗಿದ್ದರೂ ಒಮ್ಮೆಲೇ ಭಾವನಾ ಮುಕ್ತನಾದಂತೆ ಅವನಿಗೆ ಅನ್ನಿಸಿತು. ಫರ್ಮಿನಿಂದ ಬರಬಹುದಾದ ಪ್ರಾವಿಡೆಂಟ್ ಫಂಡಿನ ಹಣವನ್ನು ಮನದಲ್ಲೇ ಅಂದಾಜು ಮಾಡಿ ನೋಡಿ, ಬರುವ ಹಣದಲ್ಲಿ, ಇನ್ನೂ ಸ್ವಲ್ಪ ದಿನ ನಿಶ್ಚಿಂತೆಯಿಂದ ಈ ಮನೆಯನ್ನು ಇಟ್ಟುಕೊಳ್ಳಬಹುದು ಎಂದು ಯೋಚಿಸಿದ.

ಬಹಳ ದಿನಗಳಿಂದ ಅವನು ಟೆರಲೀನ್, ಟ್ರಾಪಿಕಲ್, ಸಿಲ್ಕು ಬಟ್ಟೆಗಳನ್ನೇ ಸಾಮಾನ್ಯವಾಗಿ ತೊಡುತ್ತಿದ್ದರಿಂದ, ಕಾಟನ್ ಬಟ್ಟೆಗಳನ್ನು ಹೆಚ್ಚಾಗಿ ಬಳಸುತ್ತಿರಲಿಲ್ಲ. ಈಗ ಪೆಟ್ಟಿಗೆ ತೆಗೆದು ತನ್ನ ಬಟ್ಟೆಗಳನ್ನು ನೋಡಿದಾಗ ಟೆರಲೀನ್ ಬಟ್ಟೆಗಳನ್ನು ಹಾಕಿಕೊಳ್ಳಲು ಅವನ ಮನಸ್ಸು ಒಪ್ಪಲಿಲ್ಲ. ಅಂತೂ ತುಂಬಾ ಹುಡುಕಾಡಿ, ಪೆಟ್ಟಿಗೆ ಅಡಿಯಿಂದ ಕೆಲವು ಹಳೇ ಕಾಟನ್ ಪ್ಯಾಂಟ್, ಶರ್ಟುಗಳನ್ನು ಹೊರತೆಗೆದ. ಪ್ಯಾಂಟಿನ ಸುತ್ತಳತೆ ಹದಿನೆಂಟು ಇಂಚು, ಶರ್ಟಿನ ಕಾಲರು ತೀರಾ ಹಳೇ ಕಾಲದ್ದಾದರೂ ಅದನ್ನೇ ಧರಿಸಿದ. ತನ್ನ ಈ ವೇಷ ನೋಡಿಕೊಂಡು ನಗು ಬಂದರೂ, ನಗು ತಡೆದುಕೊಂಡು, ಅದೇ ಉಡುಪಿನಲ್ಲೇ ಕೆಲಸಾರ್ಜನೆಗಾಗಿ ಹೊರ ಹೊರಟ.

ಕೆಲಸ ಸಿಕ್ಕೇನೋ ಸಿಗುತ್ತೆ. ಶ್ಯಾಮನಂತಹ ತರುಣ ಜಾಣನ ಕೆಲಸವನ್ನು ಯಾರೂ ತಡೆಹಿಡಿಯಲು ಸಾಧ್ಯವಿಲ್ಲ. ಆದರೂ ಸಿಕ್ಕುವುದು ತಡವಾಗುತ್ತೆ. ಕಾರಣ, ಹರಿ ಮಜುಮದಾರನ ಕೆಲಸ ಬಿಟ್ಟದ್ಯಾಕೆ? ಅಲ್ಲಿ ಗಲಾಟೆ ಏನಾದರೂ ಆಯಿತಾ? ಇವನಂತಹ ಬುದ್ಧಿವಂತ ಎಂಜೀನಿಯರ್, ಶೆಲ್ ಡಿಸೈನಿನಲ್ಲಿ ಇವನಿಗೆ ಸಾಟಿ ಯಾರೂ ಇರಲಿಲ್ಲ; ಅಂಥವನನ್ನು ಫರ್ಮಿನವರು ಯಾಕೆ ಬಿಟ್ಟುಕೊಟ್ಟಾರು? ಈ ಪ್ರಶ್ನೆಗಳಿಗೆ ಉತ್ತರ? ಕ್ರಮೇಣ ಶ್ಯಾಮನಿಗೆ ಅರ್ಥವಾಯಿತು. ಈ ನೂರೆಂಟು ಫರ್ಮುಗಳ ನಡುವೆ, ಹರಿ ಮಜುಮದಾರನ ಫರ್ಮು ಯಾವ ಲೆಕ್ಕಕ್ಕೆ? ಮೂರು ತಿಂಗಳ ನಂತರ ಪುನಃ ಸುಸ್ತು, ಪ್ರಖರವಾದ ತಲೆನೋವು ಶ್ಯಾಮನನ್ನು ಬಾಧಿಸತೊಡಗಿತು. ಪ್ರಖರವಾದ ಮಧ್ಯಾಹ್ನ, ರಸ್ತೆಯ ಚೌಕದಲ್ಲಿ ಸಿಗರೇಟು ಸೇದುತ್ತ, ತೀಕ್ಷ್ಣವಾದ ಸೂರ್ಯನನ್ನು ನೋಡುತ್ತಾ ಶ್ಯಾಮ ತನಗೇ ತಾನು ಹೇಳಿಕೊಂಡ, ''ನಾನು ನಾಶವಾಗುತ್ತಾ ಇದ್ದೇನೆ''. ತಕ್ಷಣ ತಾನು ನಿಂತಿರುವ ಜಾಗದ ಅರಿವಾಗಿ, ಎಚ್ಚರಗೊಂಡು ಅಡ್ಡ ರಸ್ತೆಯಲ್ಲಿ ಬೇಗನೆ ನಡೆದು ಎಲ್ಲರ ಕಣ್ಣು ತಪ್ಪಿಸಿ ಮರೆಯಾದ.

ಮುಂದೊಂದು ದಿನ ಕೈಗನ್ನಡಿಯನ್ನು ಮುಖದೆದುರು ಹಿಡಿದು, ಜಿರಾಫೆಯಂತೆ ಕುತ್ತಿಗೆ

ಹಿಗ್ಗಿಸಿ, ಹರಿತವಾದ ಹೊಳೆಯುವ ಬ್ಲೇಡನ್ನು ಗಲ್ಲದ ಮೇಲಿಟ್ಟು ಬಲಗೈಯಿಂದ ಜೋರಾಗಿ ಒತ್ತಿದ. ಏನೋ ಒಂದು ರೀತಿಯ ಸಮಾಧಾನವಾದಂತಾಯಿತು. ಸ್ವಲ್ಪ ಹೊತ್ತಿನ ನಂತರ ರಕ್ತಧಾರೆ ಅವನ ಅಂಗಿಯನ್ನು ಒದ್ದೆಮಾಡಿ, ಅವನೆದೆಯ ಮೇಲಿಂದ ಹರಿಯಿತು. ಕೈಲ್ಲಿದ್ದ ಬ್ಲೇಡನ್ನು ಬಿಸಾಕಿ ಅನ್ಯಮನಸ್ಕನಾಗಿ ನಕ್ಕು "ತತ್ ನಾಟಕಕಾರ" ಎಂದ. ನಂತರ ಕೈ ಚೌಕದಿಂದ ಗಲ್ಲ ಒರೆಸಿಕೊಂಡು, ಡೆಟಾಲ್ ಸವರಿಕೊಂಡು ಕಿಟಕಿಯಿಂದ ಜೀವಂತ ಜನ ಸಮೂಹವನ್ನು ನೋಡುತ್ತ, ಬಟ್ಟೆಯಿಂದ ಗಾಯವನ್ನು ಜೋರಾಗಿ ಒತ್ತಿ, ತನಗೇ ತಾನು ಹೇಳಿಕೊಂಡ "ತುಂಬಾ ಹಾಯಾಗಿದೆ."

ಅವನಿಗೆ ಎರಡು ಆಡಂಬರದ ಹವ್ಯಾಸಗಳಿದ್ದವು. ಒಂದು ಟೆಲಿಫೋನ್ ಮಾಡುವದು, ಮತ್ತೊಂದು ದಿನ ಬೆಳಗಾಗೆದ್ದು ಶೇವ್ ಮಾಡಿಕೊಳ್ಳವುದು. ಆಫೀಸಿನಲ್ಲಿ ಅವನಿಗೆಂದೇ ಒಂದು ಫೋನ್ ಇಟ್ಟಿದ್ದರು. ವಿನಾಕಾರಣ ಅವರಿಗೆ ಇವರಿಗೆ ಎಂದು ಫೋನ್ ಮಾಡುತ್ತಿದ್ದ. ತನ್ನ ಫೋನ್ ನಂಬರನ್ನು ಅದೆಷ್ಟು ಜನಕ್ಕೆ ಕೊಟ್ಟಿದ್ದನೋ ಅದರ ಲೆಕ್ಕವಿರಲಿಲ್ಲ. ಟೆಲಿಫೋನಿನಲ್ಲಿ ಜನರ ಧ್ವನಿ ಕೇಳಿ, ಫೋನಿನಲ್ಲಿ ಮಾತನಾಡಲೆಂದೇ, ತನ್ನ ಧ್ವನಿಯನ್ನು ಕೃತ್ರಿಮವಾಗಿಸಿಕೊಂಡು ಮಾತನಾಡುವುದೆಂದರೆ ಅವನಿಗೆ ತುಂಬಾ ಇಷ್ಟ. ಆದರೆ ಈಗ ಕೆಲಸ ಕಳೆದುಕೊಂಡು ಆರು ತಿಂಗಳಿಗೆ ಅವನು ಫೋನು ಮಾಡಿರುವುದು ಕೇವಲ ಎರಡೇ ಸಲ. ತನ್ನ ಪ್ರಾವಿಡೆಂಟ್ ಫಂಡಿನ ಹಣ ಎಷ್ಟು ಸಿಗುತ್ತದೆ ಎಂದು ವಿಚಾರಿಸಲು, ಕಾಲೇಜ್ ಸ್ಟ್ರೀಟಿನ ವೈ. ಎಮ್. ಸಿ. ಎ. ನಿಂದ ಆಫೀಸಿಗೆ ಫೋನು ಮಾಡಿದ್ದ. ಮತ್ತೊಂದು ಸಲ ಸಿಯಾಲ್‌ದಾನಲ್ಲಿರುವ ಸ್ವಯಂಚಾಲಕ ಬೂತಿನಿಂದ ಇತುಗೆ ಫೋನ್ ಮಾಡಿದ್ದ. ದಕ್ಷಿಣ ಕಲಕತ್ತೆಯ ರೆಸ್ಟೋರೆಂಟ್ ಒಂದರಲ್ಲಿ ಇತುವಿನ ಪ್ರಥಮ ಪರಿಚಯ ಅವನಿಗಾಗಿತ್ತು. ತಾನು ವಾಸಿಸುವ ಮನೆಗೂ ಸಹ ಅವಳು ಅನೇಕ ಸಲ ಬಂದಿದ್ದಳು. ಅವರ ಆಟ ಪ್ರೇಮ ಎಂದು ಕರೆಯಲಾಗದಿದ್ದರೂ, ಮದುವೆಯ ಹಂತದವರೆಗೂ ಮುಟ್ಟಿತ್ತು. ಅವಳೊಡನೆ ಈ ರೀತಿ ಮಾತುಕತೆಯಾಯಿತು.

ಶ್ಯಾಮ: ಇತು ಹೇಗಿದ್ದೀಯಾ?

ಇತು: ನಿನ್ನ ನೋಡಿ ಎರಡು ತಿಂಗಳಾಯಿತು.

ನನಗೋಸ್ಕರ ನೀನು ತುಂಬಾ ಹುಡುಕಾಡಿರಬೇಕು.

ಹೌದು ಎರಡು ತಿಂಗಳ ಹಿಂದೆ ನಿಮ್ಮ ಆಫೀಸಿಗೆ ಫೋನು ಮಾಡಿದ್ದೆ.

ಅವರೇನು ಹೇಳಿದರು?

ಅವರು... ಅವರು ನಿನ್ನ ಕೆಲಸದಿಂದ ತೆಗೆದು ಹಾಕಿದ್ದಾರೆ ಎಂದು ಹೇಳಿದರು. ಸ್ವಲ್ಪ ಯೋಚಿಸಿ ಶ್ಯಾಮ ಹೇಳಿದ – ಅವರು ಹೇಳಿರುವುದು ಸುಳ್ಳು. ನಾನೇ ಕೆಲಸ ಬಿಟ್ಟು ಬಿಟ್ಟೆ.

ಯಾಕೆ?

ಹೀ ಕಾಲ್ಡ ಮಿ ನೇಮ್ಸ್

ಹುಂ.

ಡಿ... ಡಿ.... ಡಿ.. ಬ್ಯಾಸ್ಟರ್ಡ್.

ಇತು ಸ್ವಲ್ಪ ಹೊತ್ತು ಸುಮ್ಮನಿದ್ದು ಹೇಳಿದಳು –ಇಷ್ಟು ದಿನ ಏನು ಮಾಡುತ್ತಾ ಇದ್ದಿ? ಕೆಲಸ ಹುಡುಕುತ್ತಾ ಇದ್ದೀಯಾ?

ಹುಂ.

ಎಲ್ಲಾದರೂ ಸಿಕ್ಕಿತಾ?

ಇಲ್ಲ.

ಈಗ ಏನ್ಮಾಡಬೇಕೂಂತ.

ಶ್ಯಾಮ ಮೃದುವಾಗಿ ನಕ್ಕು ಹೇಳಿದ – ಮದುವೆ ಮಾಡಿಕೊಂಡರೆ ಹೇಗೆ ಎಂದು ಯೋಚಿಸುತ್ತಾ ಇದ್ದೀನಿ. ಇಟ್ಸ್ ಹೈ ಟೈಮ್ ಈಗಾಗಲೇ–

ಒಳ್ಳೆಯದು ಯಾರೊಂದಿಗೆ–

ನೀನೇನನ್ನುತ್ತೀಯಾ?

ಹುಂ ಈಗ್ಲೇ?

ಈ ರೀತಿ ಹೇಳುವಾಗ ಇತುವಿನ ಧ್ವನಿ ಆವೇಶದಿಂದ ತುಂಬಿ ಬಂದಿತ್ತು. ದಿಟ್ಟ ಮಹಿಳೆಯ ಧ್ವನಿಯಂತೆ ಅವಳ ಧ್ವನಿ ಕೇಳಿ ಬಂತು. "ಶ್ಯಾಮ ನಾನು ಹೇಗಿದ್ದರೂ ಒಂದು ಚಿಕ್ಕ ಕೆಲಸದಲ್ಲಿ ಇದ್ದೇನೆ. ಅದೂ ಅಲ್ಲದೆ ನನ್ನ ಹತ್ತಿರ ಸ್ವಲ್ಪ ಒಡವೇನೂ ಇದೆ.. ನಮ್ಮಿಬ್ಬರ..."

ಶ್ಯಾಮ ಅವಳ ಮಾತು ಕೇಳುತ್ತ ತುಂಬಾ ಮೆಲ್ಲಗೆ ಫೋನನ್ನು ಕಿವಿಯಿಂದ ತೆಗೆದು, ನಿದ್ದೆ ಮಾಡಿದ್ದ ಮಗುವನ್ನು ತಾಯಿ ತನ್ನ ತೊಡೆಯಿಂದ ಹಾಸಿಗೆಯ ಮೇಲೆ ಮಲಗಿಸುವ ಹಾಗೆ ಫೋನನ್ನು ಕ್ರೆಡಲ್ ಮೇಲೆ ಇಟ್ಟುಬಿಟ್ಟ.

ಪ್ರಾಯಶಃ ಈಗ ಶ್ಯಾಮನ ಮುಖದ ಮೇಲಿನ ಗಡ್ಡ ಕ್ರಮೇಣ ವರ್ಧಿಸುತ್ತಾ ಇದೆ. ಅವನನ್ನು ಆಕರ್ಷಣೀಯನನ್ನಾಗಿ ಮಾಡಿದ್ದ, ಅವನ ಹೊಳೆಯುವ ಮುಖ, ಹಲವು ದಿನಗಳಿಂದಾಗಿ ಬೆಳೆದ ಗಡ್ಡದ ಹಿಂದೆ ಅಡಗಿ ಹೋಗಿತ್ತು. ಈಗ ಶ್ಯಾಮ ತುಂಬಾ ಅಸಹಾಯಕನಂತೆ ಕಾಣಿಸುತ್ತಿದ್ದ. ಕಾರ್ಯ ಕಾರಣ ಸೂತ್ರ ಶ್ಯಾಮನಿಗೆ ತಿಳಿಸಿದಿರಲಿಲ್ಲವಾದರೂ ಅವನಿಗೆನಿಸುತ್ತಾ ಇತ್ತು. ಒಂದು ವೇಳೆ ಈ ಗಡ್ಡ ಬೆಳೆಯದೇ ಇರದಿದ್ದರೂ, ತನ್ನ ಕಣ್ಣೆರಡೂ ಈಗ ಉಜ್ವಲತೆಯನ್ನು ಕಳೆದುಕೊಂಡು ಕಾಂತಿಹೀನವಾಗಿದೆ ಎಂದು.

ಸಮಯ ಕಳೆಯಲು ಕಷ್ಟವಾಗುತ್ತದೆ ಎಂದು ಶ್ಯಾಮ ಈ ನಡುವೆ, ಯಾವುದಾದರೂ ಬಸ್ಸು ಹತ್ತಿ ಒಂದು ಟರ್ಮಿನಸ್‌ನಿಂದ ಮತ್ತೊಂದು ಟರ್ಮಿನಸ್‌ವರೆಗೂ ಸುತ್ತಾಡಿಕೊಂಡು ಬರುತ್ತಾನೆ. ಇದರಿಂದ ಬಹುಬೇಗ ಸಮಯ ಕಳೆದಂತೆ ಅವನಿಗೆ ಅನಿಸುತ್ತೆ. ಒಂದು ದಿನ ಶ್ಯಾಮ ಬಾಲೀಗಂಜ್‌ನಿಂದ ಶ್ಯಾಮ ಬಜಾರ್‌ಗೆ ಹೋಗುವ ಬಸ್ ಹತ್ತಿ ಕುಳಿತಿದ್ದ. ಭವಾನೀಪುರದ ಬಳಿ ಬಸ್ ಕೆಟ್ಟು ನಿಂತಿತು. ಶ್ಯಾಮ ಬೇಜಾರು ಮಾಡಿಕೊಳ್ಳದೇ ಬಸ್ಸಿನಿಂದಿಳಿದು ಕೈಗಡಿಯಾರವನ್ನು ನೋಡಿಕೊಂಡ. ಗಂಟೆ ಆಗಿನ್ನೂ ಎರಡೂವರೆ. ಎದುರಿನಲ್ಲಿ ಒಂದು ಚಿತ್ರಮಂದಿರ ಕಾಣಿಸುತ್ತಿತ್ತು. ಸಿನೀಮಾದ ಹೆಸರಾಗಲೀ, ಹೊರಗೆ ಅಂಟಿಸಿದ ಭಿತ್ತಿ ಚಿತ್ರಗಳನ್ನಾಗಲೀ ನೋಡದೆ, ನೇರವಾಗಿ ಟಿಕೇಟುಕೊಂಡು ಚಿತ್ರಮಂದಿರದ

ಒಳಗೆ ಪ್ರವೇಶಿಸಿದ. ಚಿತ್ರ ಮಂದಿರದೊಳಗೆ ಪ್ರವೇಶಿಸುತ್ತಲೆ ಅರೆಗತ್ತಲಲ್ಲಿ, ಟಾರ್ಚಿನ ಬೆಳಕಿನೊಂದಿಗೆ, ಭೂತದಂತೆ ಕೈಯೊಂದು ಚಾಚಿ ಬಂತು. ನಿಶ್ಚಿಂತನಾಗಿ ಶ್ಯಾಮ ಆ ಕೈಯೊಳಗೆ ಟಿಕೇಟನ್ನು ತುರುಕಿ, ಆ ವ್ಯಕ್ತಿಯ ಹಿಂದೆ ನಡೆದ. ಶ್ಯಾಮನಿಗೆ ಸ್ಥಳ ತೋರಿಸಿ ಇನ್ನೇನು ಆ ವ್ಯಕ್ತಿ ಹಿಂತಿರುಗುತ್ತಿದ್ದ. ಶ್ಯಾಮ ಗುರುತು ಹಿಡಿದವನಂತೆ ಕೂಗಿ ಕರೆದ "ಮಾನೂ ಮಾನೂ ಅಲ್ವಾ." ಟಾರ್ಚನ್ನು ಕೈಯಲ್ಲಿ ಹಿಡಿದ ವ್ಯಕ್ತಿ ಹಿಂತಿರುಗಿ ನೋಡಿ "ಅರೇ ಶ್ಯಾಮ" ಎಂದು ಗುರುತಿಸಿದ. ಮಾನು ಮಾಮ ಈ ಚಿತ್ರಮಂದಿರದಲ್ಲೇ ಕೆಲಸ ಮಾಡುವುದು ಎಂಬುದನ್ನು ಶ್ಯಾಮ ಮರೆಯುತ್ತಾ ಇರುವುದು ಇದು ಎಷ್ಟನೇ ಸಲವೋ ಏನೋ? ಕೆಲವು ತಿಂಗಳ ಹಿಂದೆ ಇದೇ ಚಿತ್ರಮಂದಿರಕ್ಕೆ ವೃಂದ ಎಂಬ ಹುಡುಗಿಯೊಂದಿಗೆ, ಸಿನೇಮಾ ನೋಡಲು ಬಂದಿದ್ದ. ಅಂದೂ ಇದೇ ರೀತಿ ಮಾನು ಮಾಮ ಸ್ಥಳ ತೋರಿಸಿದ್ದರು. ಆದರೆ ಮಾನು ಮಾಮ ಇಲ್ಲೇ ಕೆಲಸ ಮಾಡುವುದು ಎಂಬುದನ್ನು ಅವನು ಮರೆತಿದ್ದ. ಬುದ್ಧಿವಂತ ಮಾನು ಮಾಮ ಅಂದೂ ಇವನನ್ನು ಗುರುತಿಸುವುದಾಗಲೀ, ಅಥವಾ ಇವನೊಡನೆ ಮಾತನಾಡುವ ಪ್ರಯತ್ನವನ್ನಾಗಲೀ ಮಾಡಿರಲಿಲ್ಲ. ಆದಾಗ್ಯೂ ಶ್ಯಾಮ ಅಂದು ಹೆದರಿಕೆಯಿಂದ ಪೂರ್ಣ ಬೆವತು ಹೋಗಿದ್ದ. ಮುಂದೆಂದೂ ಈ ಚಿತ್ರಮಂದಿರಕ್ಕೆ ಬರಕೂಡದೆಂದು ಅಲ್ಲೇ ನಿಶ್ಚಯ ಮಾಡಿದ್ದ. ಕೈಯಲ್ಲಿ ಟಾರ್ಚನ್ನು ಹಿಡಿದು ನಿಂತಿದ್ದ ಮಾನು ಮಾಮನನ್ನು ನೋಡಿ, ನಕ್ಕು, ಶ್ಯಾಮ ಹೇಳಿದ "ಮಾಮೂ ಹೇಗಿದ್ದೀಯಾ?" ಸ್ವಲ್ಪ ಹೊತ್ತು ಯೋಚಿಸಿ, ಮನದ ಸಂಕೋಚವನ್ನು ಒತ್ತರಿಸಿ, ಅಭ್ಯಾಸವಿಲ್ಲದಿದ್ದರೂ ಮಾನು ಮಾಮನಿಗೆ ಬಗ್ಗಿ ಪ್ರಣಾಮ ಮಾಡಿದ. ಇದನ್ನು ಇಪ್ಪತ್ತು ಜನರಾದರೂ ಕಣ್ಣಾರೆ ನೋಡಿದ್ದನ್ನು ಕಂಡು ಮಾನು ಮಾಮ ತುಂಬಾ ಖುಷಿಯಾದರು. "ಮುಖ ಇಳಿದು ಹೋಗಿದೆ, ಖಾಯಿಲೆ ಬಂದವನಂತೆ ಇದ್ದೀಯಲ್ಲೋ ನಿನ್ನ ಗುರುತೇ ಸಿಗಲಿಲ್ಲ, ಈ ಗಡ್ಡ ಇವೆಲ್ಲ ಏನು ವೇಷ?" ಎಂದರು ಮಾನು ಮಾಮ. ಶ್ಯಾಮ ಮನಸಾರೆ ನಕ್ಕು, ಅನಾಯಾಸವಾಗಿ ಹೇಳಿದ "ಈಗ ತಾನೇ ಬಂದೀಖಾನೆಯಿಂದ ಹೊರಬಿದ್ದಿದ್ದೀನಿ ಮಾಮೂ". "ಯಾವ ಬಂದೀಖಾನೆ?" ಮಾಮು ಆಶ್ಚರ್ಯದಿಂದ ವಿಚಾರಿಸಿದರು. "ಹುಚ್ಚರ" ಎಂದ ಶ್ಯಾಮ. ಮಾನುಮಾಮ ತುಂಬ ಚಡಪಡಿಸಿ ಕೇಳಿದರು "ಕೆಲಸ?" "ಕೆಲಸ ಕಳೆದುಕೊಂಡಿದ್ದೀನಿ" ಎಂದ ಶ್ಯಾಮ. ಬಾಗಿಲ ಕಡೆ ನೋಡುತ್ತ ಮಾನು ಮಾಮ ಶ್ಯಾಮನಿಗೆ ಹೇಳಿದರು "ನೀನು ಇಲ್ಲೇ ಕುಳಿತುಕೊಂಡಿರು, ನಾನು ಆಮೇಲೆ ಬಂದು ಮಾತನಾಡುತ್ತೇನೆ." ಶ್ಯಾಮ ಅನ್ಯಮನಸ್ಕನಾಗಿ ನಕ್ಕು ಕುಳಿತುಕೊಂಡ. ಸುಳ್ಳು ಹೇಳಿದುದಕ್ಕಾಗಿ ಅವನಿಗೆ ಬೇಜಾರಾಯಿತು. ಆದರೂ ಮಾನುಮಾಮನಿಗೆ ಅದರಿಂದ ಸಂತೋಷವೇ ಆಗಿರಲೂ ಬಹುದು ಎಂದುಕೊಂಡ ಶ್ಯಾಮ. ಯಾವಾಗಲೂ ಶ್ಯಾಮ ಆತ್ಮೀಯ ಸ್ವಜನರಿಂದ ತಪ್ಪಿಸಿಕೊಳ್ಳೋದನ್ನೇ ನೋಡುತ್ತಿದ್ದ. ಅವರೂ ಹಾಗೇ ಇರುತ್ತಿದ್ದರು. ಶ್ಯಾಮನಿಗೇನಾದರೂ ಕೆಟ್ಟದ್ದಾದರೂ, ಅವನ ಬಳಗದಲ್ಲಿ ಸಂತೋಷಪಡುವವರು ಯಾರಾದರೂ ಇಲ್ಲದೇ ಇರಲಿಲ್ಲ. ಮಧ್ಯಾಂತರದ ನಂತರ ಚಿತ್ರಮಂದಿರದಲ್ಲಿ ಸಂಪೂರ್ಣ ಕತ್ತಲಾವರಿಸಿತು. ಕಗ್ಗತ್ತಲೆಯಲ್ಲೇ, ತನ್ನ ಬಲಗೈಗೆ, ಯಾರೋ ದೊನ್ನೆಯೊಂದನ್ನು ತುರುಕುತ್ತಿರುವ ಅನುಭವ

ಶ್ಯಾಮನಿಗಾಯಿತು. ಕತ್ತಲಲ್ಲೇ ಕಣ್ಣರಳಿಸಿ ನೋಡಿದ, ಮಾನುಮಾಮ ಕಡಲೇಕಾಯಿ ತುಂಬಿದ ದೊನ್ನೆಯನ್ನು ಅವನ ಕೈಯಲ್ಲಿ ತುರುಕಿ, ಅವನ ಸೀಟಿನ ಪಕ್ಕದ ಪ್ಯಾಸೇಜಿನಲ್ಲೇ, ನೆಲದ ಮೇಲೆ ಮೊಣಕಾಲೂರಿ, ಕುಳಿತು ನಗುತ್ತಿದ್ದರು. ಆಮೇಲೆ ಮಾನುಮಾಮ ಶ್ಯಾಮನಿಗೆ ಹೇಳಿದರು. "ನನ್ನ ದೊಡ್ಡ ಮಗ ವಿಶೂನ ಒಂದು ದಿನ ಕಳಿಸುತ್ತೀನಿ. ಅವನ ಜೊತೆಗೆ ನಮ್ಮ ಮನೆಗೆ ಬಾ. ನಮ್ಮ ಮನೆ ಹತ್ತಿರದ ಕೋಟೆಯಲ್ಲಿ ಒಬ್ಬ ದೊಡ್ಡ ಮಾಂತ್ರಿಕ ಇದ್ದಾನೆ, ಯಾವ ಖಾಹಿಲೇ ಬೇಕಾದರೂ ವಾಸಿ ಮಾಡುತ್ತಾನೆ. ನಿನ್ನನ್ನೂ ಬೇಕಾದರೆ ಅವನಿಗೆ ತೋರಿಸೋಣವಂತೆ." ಶ್ಯಾಮ ನಗುತ್ತ ಹೇಳಿದ "ಆಗಲಿ ನೋಡೋಣವಂತೆ." ಪುನಃ ಮಾನುಮಾಮ ಕತ್ತಲಲ್ಲಿ ಭೂತದಂತೆ ಕರಗಿ ಹೋದರು. 'ತನ್ನ ಕೊಳೆಯಾದ ಅಂಗಿ, ಕೆಂಪಾದ ಕಣ್ಣು, ತನ್ನ ಈ ದುರ್ದಶೆ ನೋಡಿ ಮಾನುಮಾಮ ಸಂತೋಷಗೊಂಡಿರಲೂಬಹುದು' ಎಂದು ಶ್ಯಾಮ ತನ್ನ ಗಡ್ಡದ ಮೇಲೆ ಬೆರಳಾಡಿಸುತ್ತಾ ಯೋಚಿಸಿದ. ತನ್ನ ಕೆಲಸ ಮಾಡದೆ ತೆಪ್ಪಗೆ ಇಲ್ಲಿ ಕುಳಿತಿರೋ ಮಾನುಮಾಮ ತಪ್ಪನ್ನು ಹೊರಗೆಡಹಬೇಕು ಎಂದು ಅಂದುಕೊಂಡು, ಕತ್ತಲಲ್ಲೇ ಅಂದಾಜಿನ ಮೇಲೆ "ಮಾನುಮಾಮ" ಎಂದು ಕೂಗಿದ. ಅದರೊಂದಿಗೇ ಹಿಂದಿನಿಂದ ಮೆಲ್ಲನೆ ದಪ್ಪನಾದ ಕೈಯೊಂದು ಅವನ ಭುಜದ ಮೇಲೆ ಬಿತ್ತು. ಕ್ಷೀಣವಾದ ಧ್ವನಿಯೊಂದು ಕೇಳಿ ಬಂತು 'ನಿನ್ನ ಮಾಮೂನ ಆಮೇಲೆ ಹುಡುಕುವಿಯಂತೆ, ಮೊದಲು ಗಲಾಟೆ ಮಾಡದೆ ಸಿನೇಮಾ ನೋಡು.' ಶ್ಯಾಮ ಸಿಟ್ಟಿನಿಂದ ಬೈದ. ಶುದ್ಧ ತಲೆಹರಟೆ.ಆಮೇಲೆ ಸುಮ್ಮನೆ ಕುಳಿತು, ಅರ್ಥಹೀನ ಕಣ್ಣುಗಳಿಂದ ಸಿನೇಮಾ ನೋಡತೊಡಗಿದ. ಹಾಗೇ ಯೋಚಿಸಿದ ಒಂದು ವೇಳೆ ಮಾಮೂನ ತಪ್ಪನ್ನು ಎತ್ತಿ ತೋರಿಸಲು ಹೋದರೆ ದೊಡ್ಡ ಗಲಾಟೆಯಾಗುತ್ತೆ ಅಷ್ಟೆ. ಇನ್ನೆರಡು ದಿನಗಳಿಗೆ ಇವನಿಗೆ ಹುಚ್ಚು ಹಿಡಿದಿದೆ ಅಥವಾ ಹುಚ್ಚು ಹಿಡಿದಿತ್ತು ಅನ್ನೋ ಸಮಾಚಾರ ಬಳಗದವರಿಗೆಲ್ಲ ಡಂಗುರವಾಗುತ್ತದೆ ಅಷ್ಟೇ. ಶ್ಯಾಮ ಅನ್ಯಮನಸ್ಕನಾಗಿ ನಕ್ಕು ಸೀಟಿಗೊರಗಿ ಮೆಲ್ಲನೆ ನಿದ್ದೆ ಮಾಡಿದ.

ಕೆಲಸ ಹೋದ ಮೇಲೆ ಶ್ಯಾಮ ಎರಡೂ ಹೊತ್ತು ಪೈಸ್ ಹೋಟೇಲಿನಲ್ಲಿಯೇ ಊಟ ಮಾಡುತ್ತಿದ್ದ. ಅಲ್ಲಿ ಸುಬೋದ್ ಮಿತ್ರ ಎಂಬವನೊಡನೆ ಮಾತುಕತೆ ಆಡುತ್ತಿದ್ದ. ಒಂದು ದಿನ ಮಿತ್ರನ ಎದುರಿಗೆ ಶ್ಯಾಮ ಊಟಕ್ಕೆ ಕುಳಿತಿದ್ದಾಗ ಮಿತ್ರ ಕೇಳಿದ "ಏನು ಸ್ವಾಮಿ ಸಂಸಾರ ಗಿಂಸಾರ ಬಿಡೋ ಆಲೋಚನೆ ಏನಾದರೂ ಇದೆಯಾ? ಗಡ್ಡ ಬೆಳೆಸಿರೋದರಿಂದ ತುಂಬಾ ಉದಾಸೀನವಾಗಿ ಕಾಣಿಸುತ್ತೀರಾ." ಶ್ಯಾಮ ನಗುತ್ತ ಹೇಳಿದ "ಸಂಸಾರ ಇದ್ದರೆ ತಾನೇ ಬಿಡೋದಿಕ್ಕೆ. " "ನಿಮ್ಮ ಅಮ್ಮ ಅಪ್ಪ ಇದಾರಲ್ಲಾ ಅವರಿಗೋಸ್ಕರನಾದರೂ, ಈ ಸಲ ಒಂದು ಒಳ್ಳೇ ಪ್ರಾಯದ ಹುಡುಗಿಯನ್ನು ನೋಡಿ ಮದುವೆ ಮಾಡಿಕೊಂಡು ಬಿಡಿ" ಎಂದು ಮಿತ್ರ ಸಲಹೆ ನೀಡಿದ. " ಆ ಕೆಲಸ ಬೇಕಾದರೆ ನೀವೂ ಮಾಡಬಹುದಲ್ಲಾ " ಎಂದ ಶ್ಯಾಮ. ಈ ಸಲ ಮಾತ್ರ ಮಿತ್ರ ತುಂಬಾ ಗಂಭೀರನಾಗಿ, ಒಂದು ನಿಮಿಷ ಸುಮ್ಮನೆ ಇದ್ದು ದೀರ್ಘ ನಿಟ್ಟುಸಿರು ಬಿಟ್ಟ. "ನನ್ನ ಜೀವನಾನೇ ಒಂದು ಟ್ರಾಜಿಡೀ ಸ್ವಾಮಿ" ಎಂದು ಹೇಳಿ ನಕ್ಕು ಮೇಲುಧ್ವನಿಯಲ್ಲಿ ಮುಂದುವರೆಸಿದ, "ನನಗೂ ಒಂದು ಭಾರೀ ಅಫೇರ್ ಇತ್ತು ಸ್ವಾಮಿ, ಆ

ಹುಡುಗಿ ತನ್ನ ಮದುವೆಯಾದ ಮೇಲೆ, ಅತ್ತೂ ಕರೆದು ಮಾಡಿ, ನನ್ನಿಂದ ನಾನು ಮುಂದೆ ಮದುವೆ ಮಾಡಿಕೊಳ್ಳೋಲ್ಲ ಅಂತ ಪ್ರತಿಜ್ಞೆ ಮಾಡಿಸಿಕೊಂಡಳು. ಆಗಿನ್ನೂ ತುಂಬಾ ಸೆಂಟಿಮೆಂಟಲ್ ವಯಸ್ಸು ನೋಡಿ, ನಾನೂ ಅದೇ ರೀತಿ ಪ್ರತಿಜ್ಞೆ ಮಾಡಿದ್ದೆ. ಆದರೆ ಈಗ, ಒಂದೊಂದು ಸಲ ಯೋಚನೆ ಮಾಡಿದರೆ, ಅದೆಲ್ಲ ಎಷ್ಟು ಹುಚ್ಚು ಅಂತ ಅನ್ನಿಸುತ್ತೆ. ಈ ಪ್ರತಿಜ್ಞೆ, ಭಾಷೆ ಇವುಗಳಲ್ಲಿ ಏನೂ ಅರ್ಥ ಇಲ್ಲ ಏನಂತೀರಾ ನೀವು?'' ಎಂದು ಮಿತ್ರ ಶ್ಯಾಮನನ್ನು ಪ್ರಶ್ನಿಸಿದ. ಶ್ಯಾಮ ಮೃದುವಾಗಿ ಹೇಳಿದ " ಸರಿ,'' "ನನ್ನ ಮನಸ್ಸು ಯಾವ ರೀತಿ ಕಚ ಕಚ ಅಂತ ಹೊಡೆದುಕೊಳ್ಳುತ್ತೆ ಅನ್ನೋದು ನಿಮಗೇನು ಗೊತ್ತು ಸ್ವಾಮಿ?'' ಪ್ರಶ್ನಿಸುವ ಧ್ವನಿಯಲ್ಲಿ ಮಿತ್ರ ಕೇಳಿದ. ಶ್ಯಾಮ ಆಶ್ಚರ್ಯಗೊಂಡವನಂತೆ ಕೇಳಿದ, "ಭಾರೀ ಶಬ್ದವಾಗುತ್ತಾ?'' ಅನ್ಯಮನಸ್ಕನಾಗಿ ಬೇರೆ ಇನ್ನೇನೋ ಯೋಚನೆ ಮಾಡುತ್ತಾ, ಇವನ ಮಾತಿಗೆ ಲಕ್ಷ್ಯಗೊಡದೆ ಮಿತ್ರ ಎತ್ತಲೋ ನೋಡುತ್ತ ಕೇಳಿದ "ಹುಂ? ಏನಂದಿರಿ? ''

ಶ್ಯಾಮ ತಲೆ ಅಲ್ಲಾಡಿಸಿ ಹೇಳಿದ ಏನೂ ಇಲ್ಲ.

ಅನಂತರ ಮಿತ್ರ ಶ್ಯಾಮನ ಹತ್ತಿರ ಕೊಂಚ ಬಲವಂತವಾಗಿಯೇ ಜಾಸ್ತಿ ಬಗ್ಗಿ ಹೇಳಿದ "ನನಗೆ ಇನ್ನೂ ಮೂವತ್ತುಮೂರು ವರ್ಷ, ನನಗೆ ಒಬ್ಬಳೇ ತಂಗಿ, ಅವಳನ್ನ ಪಕ್ಕದೂರಿಗೇ ಮದುವೆ ಮಾಡಿಕೊಟ್ಟಿದ್ದೇವೆ. ಸಹ್ರಾನಪುರದಲ್ಲಿ ಇರುವವನೊಬ್ಬನೇ ತಮ್ಮ 'ಫಿಟ್ಟರ್' ಆಗಿದ್ದಾನೆ. ಅವನು ಒಳ್ಳೇ ಫುಟ್‌ಬಾಲ್ ಆಟಗಾರ ಕೂಡಾ. ನಾನು ನಮ್ಮಮ್ಮ ಜೊತೆಯಾಗಿ ಇದ್ದೆವು. ನಮ್ಮಮ್ಮ ಸತ್ತಮೇಲೆ ಒಬ್ಬ ಕೆಲಸದ ಆಳನ್ನು ಇಟ್ಟುಕೊಂಡು ಎಲ್ಲ ನಿರ್ವಹಿಸುತ್ತಿದ್ದೆ, ಆದರೆ ಯಾವಾಗ ಆ ಕೆಲ್ಸದಾಳು ಕಳ್ಳತನ ಮಾಡಲು ಪ್ರಾರಂಭಿಸಿದನೋ ಅವನನ್ನು ಓಡಿಸಿಬಿಟ್ಟೆ. ಈ ಹೋಟೇಲಿಗೆ ಸೇರಿಕೊಂಡೆ. ಆದರೆ ಈ ಹೋಟೆಲೂಟ ಹೊಟ್ಟೆ ಸಹಿಸೋದಿಲ್ಲ. '' ಈ ಮಾತನ್ನು ಮಿತ್ರ ದುಃಖದಿಂದ ಹೇಳಿದ. ಆಮೇಲೆ ಪೆದ್ದಾಗಿ ನಕ್ಕು ಮಿತ್ರ ಹೇಳಿದ "ನಮ್ಮಮ್ಮ ಸತ್ತ ಮೇಲೆ ಮನೆಯೆಲ್ಲಾ ಬಿಕೋ ಅನ್ನುತ್ತೆ. ಈ ಕಡೆ ನೋಡಿ ಸ್ವಾಮಿ ನಾನೇನು ದೊಡ್ಡ ಅಪೀಲು ಮಾಡಿಕೊಳ್ಳುತ್ತಾ ಇಲ್ಲ.'' ನಿಜವಾಗಿ ನೋಡಿದರೆ ಶ್ಯಾಮ ಮಿತ್ರ ಹೇಳಿದುದನ್ನೆಲ್ಲಾ ಕೇಳಿಕೊಂಡೇ ಇರಲಿಲ್ಲ. "ಮಿತ್ರನ ವಯಸ್ಸಿನ'' ಮಾತಿನ ಮೇಲೆ ಅವನ ಮನಸ್ಸು ನಾಟಿತ್ತು. ಶ್ಯಾಮನಿಗನಿಸಿತು ಅವನೆಲ್ಲೋ ಮದುವೆ ಮಾಡಿಕೊಳ್ಳಬೇಕು ಎನ್ನುವ ಆಸೆಯಿಂದ ತನ್ನ ವಯಸ್ಸಿನಲ್ಲಿ ಏಳೆಂಟು ವರ್ಷ ಕಡಿಮೆ ಮಾಡಿ ಹೇಳಿರಬೇಕು. ಶ್ಯಾಮನಿಗೆ ಸುಬೋದ್ ಮಿತ್ರನ ವಯಸ್ಸಿನ ಬಗ್ಗೆ ಸಂಶಯವಾಯಿತು.

ಮಿತ್ರ ಊಟ ಮುಗಿಸಿದ್ದ. ಅವನ ಕೈ ಒಣಗುತ್ತಾ ಬಂದಿತ್ತು. ಶ್ಯಾಮ ಅವನ ಕಡೆ ತಿರಸ್ಕಾರದ ದೃಷ್ಟಿ ಬೀರಿ, ಕೈತೊಳೆಯಲು ಬೇಸಿನ್ ಕಡೆ ಎದ್ದು ಹೊರಟ, ಬೇಸಿನ್ ಮೇಲೆ ತೂಗು ಹಾಕಿದ್ದ ದೊಡ್ಡ ಕನ್ನಡಿಯಲ್ಲಿ ಶ್ಯಾಮ ಒಂದು ಕ್ಷಣ ತನ್ನ ಮುಖವನ್ನು ನೋಡಿಕೊಂಡ. ಎಣ್ಣೆಣ್ಣೆ ಮುಖ ಒತ್ತಾಗಿ ಬೆಳೆದಿದ್ದ ತಲೆ ಕೂದಲು, ಹಾಗೂ ಗಡ್ಡ, ಎಣ್ಣೆ ಕಾಣದೆ ಕೆಂಪಡರಿತ್ತು. ಅವನೊಬ್ಬ ಥೇಟ್ ಹುಚ್ಚನಂತೆ ಕಾಣಿಸುತ್ತಿದ್ದ. ತನ್ನ ಚಿಕ್ಕ ಕೈಗನ್ನಡಿಯಲ್ಲಿ, ಅವನು ಮರೆಯದೆ ಪ್ರತಿದಿನ ಮುಖ ನೋಡಿಕೊಳ್ಳುತ್ತಿದ್ದ. ಆದರೆ ಈ ದೊಡ್ಡ ಕನ್ನಡಿಯಲ್ಲಿ ತನ್ನ ಕಣ್ಣಗಳಲ್ಲಿ ಒಂದು ರೀತಿಯ ಪರಿವರ್ತನೆ ಉಂಟಾಗಿರುವುದು, ಅವನ ಗಮನಕ್ಕೆ ಬಂತು.

ಕೈತೊಳೆದುಕೊಂಡು ಬಂದು, ಅಡಿಕೆ ಬಾಯಿಗೆ ಹಾಕಿಕೊಂಡು ಶ್ಯಾಮ ಹೋಟೆಲಿನಿಂದ ಹೊರ ನಡೆದ. ಡಿಸೆಂಬರಿನ ಚಳಿಯ ರಾತ್ರೆಯಂದು, ಸಾಲಾಗಿ ಫುಟ್‌ಪಾತಿನ ಮೇಲೆ ಮಲಗಿದ ಹಲವು ಕಜ್ಜೀನಾಯಿಗಳನ್ನು ದಾಟಿಕೊಂಡು ಮುನ್ನಡೆದ. ಅಂಗಡಿಗಳ ಜಗುಲಿಯ ಮೇಲೆ ಮಲಗಿದ ಹಲವು ಭಿಕ್ಷುಕರನ್ನು ಹಾದು ಹೋದ. ಹಾಗೇ ಯಾವುದೋ ಮನೆಯ ಗೋಡೆಗೊರಗಿ ಪುನಃ ಅವನು ಅಡಿಕೆ ಬಾಯಿಗೆ ಹಾಕಿಕೊಂಡ. ಎದುರಿನಲ್ಲಿ ಒಂದು ಪಾರ್ಕು ಕಾಣಿಸುತ್ತಿತ್ತು. ಪಾರ್ಕು ಚಳಿ ಹಾಗೂ ಗಾಢ ಮಂಜಿನಿಂದ ಆವರಿಸಿತ್ತು. ರೇಲಿಂಗ್ಸ್ ಸರಿಸಿ ಶ್ಯಾಮ ಒಳಹೊಕ್ಕ. ಕಾಲಿನ ಸ್ಯಾಂಡಲ್ ಒದ್ದೆ ಹುಲ್ಲಿನಿಂದಾಗಿ ತೊಯ್ದು ಕಾಲೆಲ್ಲಾ ತಣ್ಣಗಾಗಿ ಚಳಿಚಳಿಯಾಯಿತು. ಮಂಜಿನ ನಡುವೆ ಉಸಿರುಗಟ್ಟಿಸುವ ಹೊಗೆ, ಇದ್ದಲೋ ಅಥವಾ ಕಟ್ಟಿಗೆಯ ವಾಸನೆಯಿಂದ ತುಂಬಿತ್ತು. ತನ್ನ ಗಡಿಯಾರವನ್ನು ನೋಡಿಕೊಳ್ಳದೇ ಶ್ಯಾಮ ನಿಶ್ಚಿಂತನಾಗಿ ಕುಳಿತೇ ಇದ್ದ. 'ನೀನು ಈಗ ತುಂಬಾ ಉದಾಸೀನನಾಗುತ್ತಾ ಇದ್ದೀಯಾ' ಎಂದಿತು ಅವನ ಒಳ ಮನಸ್ಸು.

ಆಕಾಶದಲ್ಲಿ ಮೋಡಗಳಿಲ್ಲ, ತಾರೆಗಳಿಲ್ಲ, ಏನೂ ಕಂಡು ಬರುತ್ತಿರಲಿಲ್ಲ. ಕೇವಲ ಹೊಗೆಯಂತಹ ಮಂಜು ಎಲ್ಲೆಡೆಯೂ ಆವರಿಸಿತ್ತು. ಬಹು ದೂರದಲ್ಲಿ ಎಲ್ಲೋ ಟ್ರಾಮ್ ಚಲಿಸುತ್ತಿರುವ ಶಬ್ದ ಕೇಳಿ ಬರುತ್ತಿದೆ. ಅಂಧಕಾರದಲ್ಲಿ ಎಲ್ಲೋ ಮರದ ಎಲೆಗಳಿಂದ ಮಂಜಿನ ಹನಿ ಟಪ್ ಟಪ್ ಎಂದು ಉದುರುತ್ತಿರುವ ಶಬ್ದ ಕೇಳಿ ಬರುತ್ತೆ. ದೂರದ ದೀಪದ ಕಂಬದ ಕ್ಷೀಣ ಬೆಳಕಿನಲ್ಲಿ ಮಂಜು ಹಳದಿ ಬಣ್ಣವಿರುವಂತೆ ಕಂಡು ಬರುತ್ತದೆ. ಬೆಳಕು ಎಷ್ಟು ಕ್ಷೀಣವಾಗಿ ಬೀಳುತ್ತಿತ್ತು ಎಂದರೆ, ಶ್ಯಾಮನ ನೆರಳು ಕೂಡ ಬೀಳೂವುದಿಲ್ಲ. ಶ್ಯಾಮನಿಗೆ ಅನ್ನಿಸುತ್ತೆ "ತಾನು ಕಳೆಯುತ್ತಿರುವ ಈ ಘಳಿಗೆ ತನ್ನ ಜೀವನದ ಅತ್ಯುತ್ತಮ ಘಳಿಗೆ" ಎಂದು, ಹಾಗೆ ಯೋಚಿಸಿ ನೋಡಿದರೆ ಈಗ ಅವನ ಮನಸ್ಸು ಆಸೆಯಿಂದ ಮುಕ್ತವಾಗಿದೆ. ಅವನು ಕೆಲಸ ಕಳೆದುಕೊಂಡು ಆರು ತಿಂಗಳು ಕಳೆದಿದೆ. ಕೂಡಿಟ್ಟ ಹಣ ಖರ್ಚಾಗುತ್ತಾ ಬಂದಿದೆ. ಆದರೂ ಅವನ ಮನಸ್ಸಿನಲ್ಲಿ ಯಾವ ರೀತಿ ಉದ್ವೇಗವೂ ಇಲ್ಲ. ಯಾವ ಕೆಟ್ಟ ಯೋಚನೆಯೂ ಅವನನ್ನು ಈಗ ಕಾಡುತ್ತಿಲ್ಲ. ತೊಟ್ಟ ಬಟ್ಟೆಗಳೆಲ್ಲ ಹಳೆಯವಾಗಿ, ಕೊಳೆಯಾಗಿತ್ತು. ಆರು ತಿಂಗಳ ಮೊದಲು ಈ ಬಟ್ಟೆಗಳನ್ನು ಹೊರ ತೆಗೆದು ಹಾಕಿಕೊಳ್ಳಬೇಕೂ ಎಂದೂ ಅವನಿಗೆ ಅನ್ನಿಸಿರಲಿಲ್ಲ. ಆಫೀಸಿನಲ್ಲಿ ಮಧ್ಯಾಹ್ನ ಲಂಚ್ ಕೊಡುತ್ತಿದ್ದರು. ಅವನಿಗೆ ರಾತ್ರಿ ಊಟ ಮಾಡಲೇಬೇಕೆಂಬ ನಿಯಮವೇನೂ ಇರಲಿಲ್ಲ. ಹೇಗಿದ್ದರೂ ಕಂಪೆನಿಯ ಗಿರಾಕಿಗಳಲ್ಲಿ ಯಾರಾದರೊಬ್ಬರು ಸಂಜೆ ಹೊತ್ತು ದೊಡ್ಡ ಹೋಟೇಲುಗಳಿಗೆ ಕರೆದುಕೊಂಡು ಹೋಗೇ ಹೋಗುತ್ತಿದ್ದರು.

ಶ್ಯಾಮನಿಗೆ ಈಗ ತನ್ನ ಅಸ್ಥಿತ್ವದಲ್ಲಿ ನಂಬಿಕೆಯಿರಲಿಲ್ಲ. ಅವನು ಹಿಂದೆ ಎಂದೂ ಒಳ್ಳೆಯವನಾಗಿರಲಿಲ್ಲ. ಈಗಲೂ ಅವನಿಗೆ ತನ್ನ ಒಳ್ಳೆಯತನದ ಬಗ್ಗೆ ಯಾವ ಮೋಹವೂ ಇರಲಿಲ್ಲ. ಒಂದು ವೇಳೆ ಆವಶ್ಯಕತೆ ಬಿದ್ದರೆ, ಇಚ್ಛೆಯಾದರೆ, ಈಗಲೂ ಬೇಕಾದರೆ ಯಾವುದಾದರೂ ಕೆಲಸವನ್ನು ಮಾಡಲು ಸಾಧ್ಯವಿದೆ. ಬೇಕೆನಿಸಿದರೆ ಪಾಪವನ್ನೂ ಕೂಡಾ. ಆದರೆ ಆಶ್ಚರ್ಯದ ಮಾತೆಂದರೆ ಅವನಿಗೆ ಯಾವ ನಿರ್ದಿಷ್ಟ ಆವಶ್ಯಕತೆಯೂ ಕಂಡು

ಬರುತ್ತಿಲ್ಲ. ಯಾವ ರೀತಿ, ಹೇಗೆ, ಯಾವಾಗ ಅವನ ಆಕಾಂಕ್ಷೆಗಳು ಅವನ ಮನದಿಂದ ನಷ್ಟವಾದವು, ಯಾವ ರೀತಿ ಬತ್ತಿ ಹೋದವು ಎಂಬುದರ ಸುಳಿವೂ ಅವನಿಗೆ ಹತ್ತುವುದಿಲ್ಲ. ತಾನು ತುಂಬಾ ಉದಾಸೀನನಾಗಿರುವಂತೆ ಅವನಿಗನ್ನಿಸುತ್ತದೆ. ಶ್ಯಾಮನಿಗೆ ಒಮ್ಮೆಲೇ ಸುಭೋದ್ ಮಿತ್ರನ ಮಾತು ನೆನಪಿಗೆ ಬರುತ್ತದೆ. ಕತ್ತಲಲ್ಲೇ ಶ್ಯಾಮ, ಮಿತ್ರನನ್ನು ಜ್ಞಾಪಿಸಿಕೊಂಡು ಜೋರಾಗಿ ನಗುತ್ತಾನೆ. ನಲ್ವತ್ತರ ಗಡಿ ಸಮೀಪಿಸುತ್ತಾ ಇರುವ ಮಿತ್ರ ಪೈಸ್ ಹೋಟೇಲಿನಲ್ಲಿ ತನ್ನ ಎದುರು ಊಟಕ್ಕೆ ಕುಳಿತು ಅಡ್ಡಾದಿಡ್ಡಿಯಾಗಿ ಮದುವೆಯ ಮಾತನ್ನಾಡುತ್ತಾನೆ. ಆ ಕಂಗಾಲ ಮಿತ್ರನ ಬಳಿ ಹೋಗಿ ಹೇಳಬೇಕು.

"ಎಲ್ಲಾ ಹುಡುಗಿಯರ ವಿಷಯ ನಿಮ್ಮಿಂದ ಯೋಚಿಸಲು ಸಾಧ್ಯವಿಲ್ಲ ಸ್ವಾಮಿ, ನನ್ನ ಹುಡುಗಿಯರ ಬಗ್ಗೆ ಹೇಳುತ್ತೇನೆ ಕೇಳಿ" ಎಂದು ನಾನು ವೃಂದಳನ್ನು ಮೊದಲ ಸಲ ಕಂಡದ್ದು ಪಾರ್ಕ್ ಸ್ಟ್ರೀಟಿನ ರೆಸ್ಟೋರೆಂಟ್ ಒಂದರಲ್ಲಿ, ಯಾವುದೋ ಹುಡುಗನೊಂದಿಗೆ ಬಂದಿದ್ದಳು. ಅವಳು ನನ್ನನ್ನು ಕೇವಲ ಎರಡೇ ಸಲ ತಿರುಗಿ ನೋಡಿದ್ದಳು. ನಾನು ಅಲ್ಲೇ ದೇವರಿಗೆ ವಂದಿಸಿದ್ದೆ. ಎಡ ಪಾರ್ಶ್ವದಿಂದ ನನ್ನ ಮುಖ ತುಂಬಾ ಚೆನ್ನಾಗಿ ಕಾಣಿಸುತ್ತೆ. ನೇರವಾಗಿ ಆ ಹುಡುಗನ ಬಳಿ ಹೋಗಿ, ಬೆಂಕಿ ಪೆಟ್ಟಿಗೆ ಇದೆಯೇ ಎಂದು ಕೇಳಿದ್ದೆ. ಆ ಹುಡುಗ ಸಿಟ್ಟಿನಿಂದಲೇ ಬೆಂಕಿ ಪೆಟ್ಟಿಗೆ ತೆಗೆದುಕೊಟ್ಟಿದ್ದ ಸುಮ್ಮನೇ ಸಿಗರೇಟು ಸೇದುತ್ತ ವೃಂದಳ ಕಡೆ ನೋಡಿ ನಕ್ಕಿದ್ದೆ. ಕಲ್ಕತ್ತೆಯ ಬಹು ದೊಡ್ಡ ಘಟಿಂಗನಿಂದ ನಾನು ಆ ನಗುವನ್ನು ಕಲಿತಿದ್ದೆ. ಅದರ ಮರು ದಿನ ವೃಂದ ಒಬ್ಬಳೇ ರೆಸ್ಟೋರೆಂಟಿಗೆ ಬಂದಿದ್ದಳು. ಒಂಟಿಯಾಗಿ ಆ ಹುಡುಗನನ್ನು ಬಿಟ್ಟು ಅವಳು ಯಾಕೆ ಬಂದಿದ್ದಳು ಎನ್ನುವುದು ಅಂದೂ ತಿಳಿದಿರಲಿಲ್ಲ, ಇಂದಿನವರೆಗೂ ತಿಳಿದಿಲ್ಲ. ನೋಡಿ ಸ್ವಾಮಿ ಆಮೇಲೆ ನಾನು ವೃಂದಳನ್ನು ತುಂಬಾ ಕಡೆ ಸುತ್ತಾಡಿಸಿದ್ದೆ. ಬೇಕಿದ್ದರೆ ಮಾಧವಿ ಮಾತನ್ನೇ ತೆಗೆದುಕೊಳ್ಳೋಣ. ನಾನು ಅವಳನ್ನು ಕಂಡದ್ದು ಫಿಲಂ ಸೊಸೈಟಿಯ ಒಂದು ಶೋನಲ್ಲಿ. ನನ್ನ ಬಾಡಿಗೆ ಟ್ಯಾಕ್ಸಿ ಅವಳ ನೀಲ ಬಣ್ಣದ ಪ್ಲೈಮೋತ್ ಕಾರನ್ನು ಹುಲಿಯಂತೆ ಅಡ್ಡಗಟ್ಟಿತ್ತು. ಆಮೇಲೆ ಒಂದು ದಿನ ಮಾಧವೀನೇ ಹೇಳಿದ್ದಳು. "ಶ್ಯಾಮ ನೀನೂ ಅನ್ಯರಂತೆ ದಿನೇ ದಿನೇ ಏನಾಗುತ್ತಾ ಇದ್ದೀಯಾ? ನೀನೂ ಅನ್ಯರಂತೆ ನೋಡುವುದನ್ನು ಕಲಿತುಕೊಂಡುಬಿಟ್ಟಿದ್ದೀಯಾ? ಎಂದು ಹೇಳುತ್ತ ಅವಳು ತನ್ನ ಮೃದುವಾದ ಬೆನ್ನನ್ನು ಬಾಗಿಸುತ್ತ, ಹಸಿರು ದಿವಾನಿನ ಮೇಲೆ ಒರಗಿದ್ದಳು. " ಅದಕ್ಕೇನೇ ಸ್ವಾಮಿ ನಾನು ಹೇಳಿದ್ದು ನನ್ನ ಮನಸ್ಸು ಹಂಸದ ಶರೀರದ ತರಹ ಅಂತ. ನನ್ನ ಈ ಶರೀರದೊಳಗೆ ಹರಿಯುತ್ತಾ ಇರುವುದು ಶುದ್ಧವಾದ ಗಾಳಿ ಹಾಗೂ ಉಜ್ವಲವಾದ ರಕ್ತ.

ನಾನು ಎಂದೂ ಹುಡುಗಿಯರನ್ನು ಬಾಯಿಬಿಟ್ಟು "ದಯಮಾಡಿ ನೀವು ನನ್ನನ್ನು ಪ್ರೀತಿಸಿ" ಎಂದು ಕೇಳಿಕೊಂಡಿಲ್ಲ. ಅಥವಾ ಬಾಯ್‌ಬಾಯ್ ಬಿಟ್ಟುಕೊಂಡು ಯಾವುದಾದರೂ ಹುಡುಗಿಗೋಸ್ಕರ ದೇವರಲ್ಲಿ ಪ್ರಾರ್ಥಿಸಿಲ್ಲ ಯಾಕೇ ಅಂತಿರಾ, ಯಾಕೋ ಏನೋ ನನಗೆ ಅದರ ಆವಶ್ಯಕತೆಯೇ ಇರಲಿಲ್ಲ ನೋಡಿ. ಆದರೆ ಕೇವಲ ಆ ಹುಡುಗಿ, ಅದೇ ಸಾಧಾರಣ ಹುಡುಗಿ ಇತುವಿಗೆ ಮಾತ್ರ ಮದುವೆಯ ವಿಷಯ ಮರೆಯಲು ಅವಳಿಂದ ಸಾಧ್ಯವಾಗಿಲ್ಲ. ಯಾವ ರೀತಿ

ಅದು ನಿಮ್ಮಿಂದಲೂ ಸಾಧ್ಯವಾಗಿಲ್ಲವೋ ಅದೇ ತರಹ. ಯಾವ ಹುಡುಗಿಯ ಪ್ರೇಮದಲ್ಲಿ ನೀವು ನಲವತ್ತು ವರುಷ ಸಿಕ್ಕಿಬಿದ್ದಿದ್ರೀ ಅದೇ ರೀತಿ ನಾನು ಪ್ರೇಮದ ಹೆಸರಿನಲ್ಲೇನೇ, ಸ್ವಾಮಿ, ಅಡಿಕೆ ಬಾಯಿಗೆ ಹಾಕಿಕೊಳ್ಳೋದು. ಅದರಿಂದ ನನ್ನ ಕಣ್ಣುಗಳಲ್ಲಿ ಒಂದು ರೀತಿಯ ಪರಿವರ್ತನೆಯಾಗಿ, ತುಟಿಗಳ ಮೇಲೆ ಹಿಂದಿನ ನಗು ತಾನಾಗೇ ಮೂಡಿ ಬರುತ್ತದೆ. ನಾನು ಪ್ರೇಮವನ್ನು ಅರ್ಥೈಸುವುದು ಇದೇ ರೀತಿ ಸ್ವಾಮಿ. ಕೇವಲ ನನಗೆ ಅಸಾಧಾರಣ ಹುಡುಗಿಯ ಬಗ್ಗೇ ತುಂಬಾ ಭಯ... ಒಂದು ನಾಲಕ್ಕು ದಿನ ಮಾತುಕತೆ ಆಡಿದ ಮೇಲೆ, ಐದನೇ ದಿನ ಅವಳು ಮೆಲ್ಲನೆ ಪಿಸುಗುಟ್ಟಿದ್ದಳು 'ಮತ್ತೇ ಅಪ್ಪಾ ಹೇಳಿದರು, ಒಂದು ಸಲ ಆ ಹುಡುಗನನ್ನು ಮನೆಗೆ ಕರೆದುಕೊಂಡು ಬಾರಮ್ಮಾ, ನಾವೂ ನೋಡ್ತೋಣವಂತೆ' ಅಂತ.

ಅದೆಲ್ಲ ಇರಲಿ ಮಿತ್ರ ಮಹಾಶಯರೇ ನಿಮ್ಮ ಜ್ಯೂಲಿಯಟ್ ಯಾವ ರೀತಿ ಇದ್ದಳು? ಅದೇ ಆ ಸಾಧಾರಣ ಹುಡುಗಿಯ ತರಹಾನೇನಾ? ಕೊನೆಯವರೆಗೂ ನೋಡಿ ನಿಮ್ಮನ್ನು ಹಾಫ್ ಸನ್ಯಾಸಿ ಮಾಡಿ ಇಟ್ಟುಬಿಟ್ಟಿದ್ದಾಳೆ. ನೀವು ಮದುವೆ ಮಾಡಿಕೊಳ್ತೀರಾ? ಹಾಗಾದರೆ, ಯಾವಳೋ ಒಬ್ಬಳು, ಬೇರೆಯವನನ್ನು ಸನ್ಯಾಸಿ ಮಾಡಿ, ನಿಶ್ಚಿಂತ ಮುಖದಿಂದ ನಿಮ್ಮೊಂದಿಗೆ ಸಂಸಾರ ಹೂಡಲು ಬರುತ್ತಾಳೆ. ನಿಮ್ಮ ಹಣೆಬರಹದಲ್ಲಿ ಈ ರೀತಿಯ ಸಾಧಾರಣ ಹುಡುಗಿ ಸಿಗುವ ಸಂಭವವೇ ಹೆಚ್ಚು. ಆಕೆ ತನ್ನ ಪ್ರಿಯತಮನ ಸ್ಮೃತಿಯನ್ನು, ತನ್ನ ಚಂದನದ ಕೈ ಪೆಟ್ಟಿಗೆಯ ಮೂಲಕವೋ ಅಥವಾ ಪ್ರೇಮ ಪತ್ರದ ಮೂಲಕವೋ, ಹಲವೊಮ್ಮೆ ವೀಳೆದೆಲೆಯ ತಟ್ಟೆಯ ಮುಂದೆ ಕುಳಿತಿರುವಾಗಲೋ ಅಥವಾ ಮಕ್ಕಳನ್ನು ದೊಡ್ಡವರನ್ನಾಗಿಸಿ ಲಾಲನೆ, ಪಾಲನೆ ಮಾಡುವಾಗಲೋ, ತನ್ನ ಮನದಲ್ಲಿ ಜತನದಿಂದ ಕಾಪಾಡಿಕೊಂಡು, ಹಲವೊಮ್ಮೆ ಆತನನ್ನು ಜ್ಞಾಪಿಸಿಕೊಳ್ಳಬಹುದು. ದೇವರೇ ನನ್ನ ಭಾಗ್ಯ ತುಂಬಾ ದೊಡ್ಡದು. ಸಧ್ಯ ಒಳ್ಳೆಯದಾಯಿತು ನನ್ನ ದೇಹದಲ್ಲಿ ಈಗಲೂ ಅದೇ ಶುದ್ಧವಾದ ಗಾಳಿ, ಉಜ್ವಲವಾದ ರಕ್ತಾನೇ ಹರಿಯುತ್ತಾ ಇರುವುದು. ಅದಕ್ಕೆ ನೋಡಿ ನಾನು ಎಂದೂ, ಬಾಯಿ ಬಿಟ್ಟು ಹುಡುಗಿಯರಿಗಾಗಿ ದೇವರಲ್ಲಿ ಮೊರೆ ಇಟ್ಟಿಲ್ಲ. ಅದಕ್ಕೇ ನಾನು ಹೇಳೋದು ನನ್ನ ಮನಸ್ಸು ಹಂಸದ ಶರೀರದಂತೆ ಅಂತ, ಅದರಿಂದಲೇ ನಾನು ಹುಡುಗಿಯರ ಸೆರಗಿಗೆ ಸಿಕ್ಕಿಕೊಳ್ಳದೆಯೇ, ಬಹಳ ಚಮತ್ಕಾರವಾಗಿ ಅವರೊಂದಿಗೆ ವ್ಯವಹರಿಸುತ್ತಾ ಇದ್ದೇನೆ. ಅದರಿಂದಲೇ ನಾನು ಇಂದು ನಿಷ್ಕಲಂಕನಾಗಿ, ಶುದ್ಧನಾಗಿದ್ದೇನೆ. ಇಂದು ನನ್ನ ಈ ದುರವಸ್ಥೆಯನ್ನು ನೋಡಿ ಮರುಗಬೇಡಿ. ಆ ಕಲ್ಲಂಗಡಿ ಹಣ್ಣು ಮಾರುವವನು ಹೇಳುವುದಿಲ್ಲವೇ 'ನಿಮ್ಮ ಅದೃಷ್ಟ–ದೇವರ ದಯೆಯಿಂದ ನೀವು ಒಳ್ಳೇ ಹಣ್ಣನ್ನೇ ಪಡೆಯುವುದು'ಅಂತ. ಹಾಗೇನೇ ನನ್ನ ಅವಸ್ಥೆ ಅಷ್ಟೇನು ಕೆಟ್ಟಿಲ್ಲ. ಸಧ್ಯಕ್ಕೆ ನನಗೆ ಕೆಲಸ ಬಂದಿಲ್ಲ, ಅಷ್ಟೇ. ಮುಂದೆ ಕೆಲಸ ಸಿಕ್ಕಿದರೆ ಮಾಡುವ ಎಲ್ಲಾ ಸಾಧ್ಯತೆಗಳೂ ಇದೆ. ಈಗ ನನಗೆ ಮುಖ್ಯವಾಗಿ ಬೇಕಾಗಿರುವುದೆಂದರೆ ಎಲ್ಲಾ ಕಡೆ ಸುತ್ತಾಡಿ ಬರಲು ಮೊದಲಿನ ಉತ್ಸಾಹ. ಈ ಗಡ್ಡವನ್ನು ಬೋಳಿಸಿ ಆರು ತಿಂಗಳ ಹಿಂದಿನ ಆ ಟೆರಲೀನ ಪ್ಯಾಂಟು, ಶರಟು ಹಾಕಿಕೊಂಡರೆ, ಹಿಂದಿನ ಆ ನಗು, ಕಣ್ಣಿನ ಹೊಳಪು ತಿರುಗಿ ಪಡೆದುಕೊಂಡರೆ, ನೋಡುತ್ತಾ ಇರಿ, ಸ್ವಲ್ಪವೇ ದಿನದಲ್ಲಿ ನನ್ನ ಸುತ್ತ ಎಲ್ಲಾ ಯಾವ

ರೀತಿ ಕುಣಿಯುತ್ತೇ ಅಂತ. ಆದರೆ ಏನು ಮಾಡುವುದು ಸ್ವಾಮಿ, ನನಗೆ ಯಾವುದರಲ್ಲೂ ಏನೂ ಮಾಡಲೂ ಮೊದಲಿನ ಉತ್ಸಾಹವೇ ಇಲ್ಲ. ಹಾ, ನನಗೆ ತುಂಬಾ ಆಕಳಿಕೆ ಬರುತ್ತಿದೆ. ನಿಜವಾಗಿಯೂ ಈಗ ಶ್ಯಾಮನಿಗೆ ಆಕಳಿಕೆ ಬರುತ್ತಿತ್ತು. ಮಂಜು ಇನ್ನೂ ದಟ್ಟವಾಗುತ್ತಾ ಇತ್ತು. ಅವನಿಂದ ಈಗ ಚಳಿ ತಡೆಯಲಾಗಲಿಲ್ಲ. ದೂರದಲ್ಲೆಲ್ಲೋ ಕಾವಲುಗಾರನ ಲಾಠೀ ಶಬ್ದ ಕೇಳಿ ಬರುತ್ತಿತ್ತು. ಒಂದು ವೇಳೆ ಈ ಕಗ್ಗತ್ತಲಲ್ಲಿ ಗಡಿಯಾರವನ್ನು ನೋಡಿಕೊಂಡರೂ ಏನೂ ಕಾಣಿಸುತ್ತಾ ಇರಲಿಲ್ಲ. ಗಂಟೆ ಎಷ್ಟಾಗಿರಬಹುದು ಎಂದು ಅವನು ಅಂದಾಜಿನ ಮೇಲೆಯೇ ತರ್ಕಿಸಿದ, ಅವನಿಂದ ಏನೂ ತಿಳಿಯಲಾಗಲಿಲ್ಲ. ನಿಶ್ಶಬ್ದವನ್ನು ಭೇದಿಸಿಕೊಂಡ ನಾಯಿಗಳ ಬೊಗಳುವಿಕೆಯು ಕೇಳಿ ಬರುತ್ತಿತ್ತು. ದೂರದಲ್ಲಿ ಯಾರೋ ಕ್ಷೀಣ ಧ್ವನಿಯಲ್ಲಿ ಹಾಡುತ್ತಿದ್ದರು.

ಅಂದೇ ರಾತ್ರಿ ಶ್ಯಾಮ ಎಚ್ಚೆತ್ತು, ಪವಿತ್ರ ಗ್ರಂಥವನ್ನು ಓದುವಂತೆ, ತನ್ನ ಚಿಕ್ಕ ಕೈಗನ್ನಡಿಯಲ್ಲಿ ಹಲವು ಬಾರಿ ಮುಖ ನೋಡಿಕೊಂಡ. ತನ್ನನ್ನು ತಾನೇ ಬಹಳ ಉದಾಸೀನನಾಗಿರುವಂತೆ ಕಂಡ. ದೀಪವಾರಿಸದೇ ಯೋಚನೆ ಮಾಡುತ್ತಾ, ಹಾಸಿಗೆ ಮೇಲೆ ಉರುಳಿಕೊಂಡು ನಿದ್ದೆ ಮಾಡಿದ.

ಚಳಿಗಾಲ ಪ್ರಾರಂಭವಾಯಿತು. ಕಲ್ಕತ್ತೆಯ ಚಳಿಗಾಳಿಯ ನಮೂನೆಯೇ ಒಂದು ರೀತಿಯದು. ಮುಂಜಾಫಿನಲ್ಲಿ ಎಲ್ಲೆಡೆಯೂ ದಟ್ಟ ಮಂಜು ಮುಸುಕಿರುತ್ತದೆ. ಮೊದಲಾಗಿದ್ದರೆ, ಬೆಳಿಗ್ಗೆ ಎಂಟೂವರೆಗೆಲ್ಲಾ ಶ್ಯಾಮ ಆಫೀಸಿಗೆ ಹೊರಟುಬಿಡಬೇಕಾಗುತ್ತಿತ್ತು. ಅದೇ ಹಿಂದಿನ ಅಭ್ಯಾಸದಿಂದ, ಶ್ಯಾಮುಗೆ ಈಗಲೂ ಬಹು ಬೇಗ ಎಚ್ಚರವಾಗಿ ಬಿಡುತ್ತಿತ್ತು. ಬೇಗ ಎದ್ದು, ಒಂದು ಕ್ಷಣ ಕಿಟಕಿಯ ಕಡೆ ನೋಡಿ, ಕಿಟಕಿಯಿಂದ ನುಗ್ಗಿಬರುವ ಬೆಳಕನ್ನು, ತಲೆ ತುಂಬಾ ಮುಸುಕು ಹಾಕಿಕೊಂಡು ತಲೆದಿಂಬನ್ನು ಕಣ್ಣಿಗಡ್ಡವಾಗಿಟ್ಟುಕೊಂಡು ಮರೆಮಾಡುತ್ತಿದ್ದ. ಶ್ಯಾಮನಿಗೆ ಜ್ವರ ಬಂದಂತಾಗಿತ್ತು. ಎಚ್ಚರವಾಗಿದ್ದರೂ ಚಳಿ ಹಾಗು ತಲೆನೋವಿನಿಂದ ಪುನಃ ಹಾಗೇ ಮಲಗೇ ಇದ್ದ. ಮೊದಲಾಗಿದ್ದಿದ್ದರೆ ತನ್ನ ದೇಹಸ್ವಾಸ್ಥ್ಯವನ್ನು ಕಾಪಾಡಿಕೊಳ್ಳಬೇಕೆಂಬ ಹುಮ್ಮಸ್ಸಿನಿಂದ, ಬೆಳಗ್ಗೆ ಬೇಗೆದ್ದು ಒಂದೆರಡು ಫ್ರೀಹ್ಯಾಂಡ್ ವ್ಯಾಯಾಮ, ನಾಲಕ್ಕೈದು ತರಹದ ಯೋಗಾಸನ ಬೆಂಡಿಗ್ಸ್ ಮಾಡುತ್ತಲಿದ್ದ. ಅದನ್ನು ಈಗ ಜ್ಞಾಪಿಸಿಕೊಂಡರೆ ಶ್ಯಾಮನಿಗೆ ಸಿಟ್ಟಿನಿಂದ ಆಕಳಿಕೆ ಬರುತ್ತೆ. ಹಾಗೇ ಕಣ್ಣುಮುಚ್ಚಿ ಹಿಂದಿನ ವ್ಯಾಯಾಮ ನಿರತ ಶ್ಯಾಮನನ್ನು ಜ್ಞಾಪಿಸಿಕೊಳ್ಳುತ್ತಾನೆ. ಹಿಂದೆ ಶ್ಯಾಮ ವ್ಯಾಯಾಮ ಮಾಡುವಾಗ, ಬಗ್ಗಿ ತನ್ನ ಕಾಲಿನ ಹೆಬ್ಬೆಟ್ಟನ್ನು ಹಿಡಿಯುವ ಪ್ರಯತ್ನ ಮಾಡುತ್ತಿದ್ದ. ಹಲವೊಮ್ಮೆ ಅದೃಶ್ಯ ಪ್ರತಿಸ್ಪರ್ಧಿಗೆ ಏಟು ಕೊಡುವಂತೆ, ಗಾಳಿಗೆ ಮುಷ್ಟಿ ಏಟು ಕೊಡುತ್ತಾ ಮನೆಯೆಲ್ಲಾ ಸುತ್ತುತ್ತಿದ್ದ. ಒಂದು ಸಲ ಇದೇ ರೀತಿಯ ಮುಷ್ಟಿ ಏಟಿನಿಂದ, ರೂಪಶ್ರೀ ಫರ್ನಿಚರ್ಸ್‌ನ 'ವಾರ್ಡರೋಬು' ಜೋರಾಗಿ ಪೆಟ್ಟು ತಿಂದು, ಅದರ ಬಾಗಿಲ ಪಟ್ಟಿ ಕಿತ್ತುಕೊಂಡು ಬಂದಿತ್ತು. ಅದೇ ರೀತಿ ಗೋಡೆಯ ಒಂದು ದುರ್ಬಲವಾದ ಕಡೆ ಗಾರೆ ಕಿತ್ತುಕೊಂಡು ಬಂದಿತ್ತು. ಅಂದಿನಿಂದ ಶ್ಯಾಮನಿಗೆ ತನ್ನ ಶಕ್ತಿಯ ಬಗ್ಗೆ ತುಂಬಾ ಹೆಮ್ಮೆಯುಂಟಾಗಿತ್ತು. ಹಿಂದಿನ ಶ್ಯಾಮ ತನ್ನ ಶರೀರವನ್ನು ಎದ್ದೂ ಬಗ್ಗಿಸಿ ಮಾಡುವುದನ್ನು,

ಇಂದಿನ ಶ್ಯಾಮ ಅದನ್ನು ಜ್ಞಾಪಿಸಿಕೊಂಡು ನಕ್ಕು ಗೋಡೆ ಕಡೆ ಮಗ್ಗಲಾಗಿ ಮಲಗಿಕೊಂಡ. ಹಿಂದಿನಿಂದಲೂ ಅಷ್ಟೆ ಶ್ಯಾಮನಿಗೆ ತನ್ನ ದೇಹದ ಮೇಲೆ ಅಪಾರ ಮಮತೆ. ಕಣ್ಣಲ್ಲಿ ಕಣ್ಣಿಟ್ಟು ತನ್ನ ದೇಹವನ್ನು ಕಾಪಾಡಿಕೊಳ್ಳುತ್ತಿದ್ದ. ರಸ್ತೆಯನ್ನು ದಾಟುವಾಗಲೂ ಅಷ್ಟೇ, ಅವಸರ ಪಡದೆ ನಿಧಾನವಾಗಿ ದಾಟುತ್ತಿದ್ದ. ಸುಂದರವಾದ ಭಂಗಿಯಲ್ಲಿ ಮೆಟ್ಟಲು ಹತ್ತಿ ಇಳಿಯೋದನ್ನು ಮಾಡುತ್ತಿದ್ದ. ಟೆಲಿಫೋನ್ ಹಿಡಿದು ಮಾತನಾಡುವುದೂ ಅಷ್ಟೇ ಅವನದೇ ಒಂದು ರೀತಿಯ ವಿಶಿಷ್ಟವಾದ ಭಂಗಿ. ಪ್ರತಿಯೊಂದು ಕಾರ್ಯದಲ್ಲೂ ಅಷ್ಟೇ ವೈಶಿಷ್ಟ್ಯ ಎದ್ದು ಕಂಡು ಬರುತ್ತಿತ್ತು. ಹಿಂದೆ ಅವನಿಗೆ ಎಲ್ಲದರಲ್ಲೂ ತುಂಬಾ ಉತ್ಸಾಹ, ಅವನೆಂದೂ ಉದಾಸೀನನಾಗಿ ಕಂಡು ಬರುತ್ತಿರಲಿಲ್ಲ.

ಹಾಸಿಗೆಯಲ್ಲಿ ಒಂದು ರೀತಿಯ ಹಳ್ಳ ತೋಡಿಕೊಂಡು ಮಲಗುವುದು ಶ್ಯಾಮನ ಪದ್ಧತಿ. ಬಿಸಿಲೇರಿದಂತೆ ಅವನ ನಿಶ್ವಾಸ ಹಾಗೂ ಮೈಯ ಕಾವಿನಿಂದ ಹಳ್ಳದಲ್ಲಿ ಶಾಖ ತುಂಬಿಕೊಳ್ಳುತ್ತದೆ. ಅವನು ಎಚ್ಚೆತ್ತು ಮುಖದಿಂದ ಹೊದಿಕೆ ಸರಿಸಿದ ತಕ್ಷಣ, ಬೆಳಕು ಸರಳವಾಗಿ ಕಿಟಕಿಯಿಂದ ಹರಿದು, ಅವನ ಕಣ್ಣ ಮೇಲೆ ಬೀಳುತ್ತದೆ. ಆಗ ಅವನು ಆ ಅವಸ್ಥೆಯಿಂದ ಪಾರಾಗಲು ಹಾಸಿಗೆಯಿಂದ ಏಳಲೇಬೇಕಾಗುತ್ತದೆ. ಹಾಸಿಗೆ ಬಿಟ್ಟು ಎದ್ದು, ಅವನು ಸ್ನಾನ ಮಾಡುತ್ತಿರಲಿಲ್ಲ. ಸಿಗರೇಟು ಸೇದುತ್ತಾ ಮನೆಯೆಲ್ಲಾ ಠಳಾಯಿಸುತ್ತಿದ್ದ. ಒಮ್ಮೊಮ್ಮೆ ಚಹ ಕುಡಿಯಬೇಕು ಎಂದು ಅನಿಸುತ್ತಿತ್ತು. ಶ್ಯಾಮ ಚಹಕ್ಕೆ ಬೇಕಾಗುವ ಸಾಮಾನುಗಳನ್ನೆಲ್ಲಾ ಮನೆಯಲ್ಲೇ ತಂದಿಟ್ಟುಕೊಂಡಿದ್ದಾನೆ. ಸೀಮೆ ಎಣ್ಣೆ ಸ್ಟೌವ್, ನೀರಿನ ಕೆಟಲ್, ಚಹದ ಪುಡಿ, ಸಕ್ಕರೆ, ಹಾಲಿನ ಪುಡಿ ಡಬ್ಬ. ಕೆಲಸಕ್ಕೆ ಬೇಗ ಎದ್ದು ಹೋಗುತ್ತಿದ್ದಾಗ, ಚಹ ಮಾಡಿಕೊಂಡು, ಮೊಟ್ಟೆ ಬೇಯಿಸಿ ತಿಂದುಕೊಂಡು ಹೊರಡುತ್ತಿದ್ದ. ಈಗ ಪುರಸೊತ್ತಿದ್ದರೂ ಬೇಕಿಲ್ಲ. ಹಲವು ತಿಂಗಳಿಂದ ಡಬ್ಬಿಯಲ್ಲಿಟ್ಟಿದ್ದ ಚಹಾ ಹಾಗೂ ಹಾಲಿನ ಪುಡಿ ಭೂಸಲು ಹಿಡಿದಿರಬೇಕು. ಅದನ್ನು ಅವನು ಈ ನಡುವೆ ತೆಗೆದೂ ನೋಡಿರಲಿಲ್ಲ. ಈಗ ಆಂಗ್ಲ ಸಮಾಚಾರ ಪತ್ರಿಕೆ, ಮೇಜಿನ ಕಾಲಿನ ಬುಡದಲ್ಲಿ ದಿಕ್ಕಿಲ್ಲದೆ ಅನಾಥವಾಗಿ ಹೊರಳುತ್ತಾ ಬಿದ್ದಿರುತ್ತದೆ. ಮೊದಲಾಗಿದ್ದಿದ್ದರೆ ಆ ಮೇಜಿನ ಮೇಲೆ, ಪತ್ರಿಕೆಗೆ ವಿಶಿಷ್ಟವಾದ ಒಂದು ಸ್ಥಾನವಿರುತ್ತಿತ್ತು. ಶ್ಯಾಮ ಬೆಳಗಾಗಿ ಎದ್ದು ಅವಸರದಲ್ಲೇ ಪತ್ರಿಕೆಯನ್ನು ಮೊದಲಿನಿಂದ ಕೊನೆಯವರೆಗೆ ಕಣ್ಣಾಡಿಸಿ, ಪುನಃ ರಾತ್ರಿ ಮಲಗುವ ಮೊದಲು ಒಂದಕ್ಷರವನ್ನು ಬಿಡದೆ ಓದಿ ಮುಗಿಸಿಯೇ ಮಲಗುತ್ತಿದ್ದ. ಹೊತ್ತು ಏರಿದ ಮೇಲೆಯೇ ಶ್ಯಾಮ ಈಗ ಹೊಟೇಲಿನ ಕಡೆ ಹೊರಡುತ್ತಿದ್ದ. ಹೋಟೆಲಿನಿಂದ ನೇರವಾಗಿ ಮಧ್ಯಾಹ್ನ ಯಾವುದಾದರೂ ಬಸ್ಸೋ, ಟ್ರಾಮೋ ಟರ್ಮಿನಸ್ ಕಡೆ ಹೋಗುತ್ತಿದ್ದ. ದಾರಿಯಲ್ಲಿ ಸಾಮಾನ್ಯವಾಗಿ ಗುರುತು ಪರಿಚಯದವರ ಭೇಟಿಯಾಗುತ್ತಿರಲಿಲ್ಲ. ಒಂದು ವೇಳೆ ಭೇಟಿಯಾದರೂ ಶ್ಯಾಮನಿಗೆ ಅವರಿಂದ ತಪ್ಪಿಸಿಕೊಂಡು ಹೋಗುವ ಚಾಕಚಕ್ಯತೆ ಇದೆ. ಅದೂ ಅಲ್ಲದೆ ಅವನ ಮುಖದ ಮೇಲೆ ತುಂಬಾ ದಿನಗಳಿಂದ ಬೆಳೆದ ಗಡ್ಡ, ಉದ್ದುದ್ದ ಕೂದಲು, ಖಾಯಿಲೆ ಬಂದವರಂತಿರುವ ಮುಖದಿಂದ, ಅವನ ಓಡಾಟದಲ್ಲೂ ಒಂದು ಬಗೆಯ ಪರಿವರ್ತನೆ

ಕಂಡು ಬರುತ್ತಿತ್ತು. ಚೆನ್ನಾಗಿ ಯೋಚನೆ ಮಾಡಿ ಒಂದು ತಂಪು ಕನ್ನಡಕವನ್ನು ಬೇರೆ ಕೊಂಡುಕೊಂಡಿದ್ದ. ಇವೆಲ್ಲದರಿಂದ ಅವನ ವೇಷ ತೀರಾ ಸ್ವಾಭಾವಿಕವಾಗಿ ಕಂಡು ಬರುತ್ತಿತ್ತು. ಈ ಹೊಸ ವೇಷದಿಂದಾಗಿ ಒಮ್ಮೊಮ್ಮೆ ಗುರುತಿನವರೂ ಶ್ಯಾಮನನ್ನು ಗುರುತಿಸಲು ಸಾಧ್ಯವಾಗುತ್ತಿರಲಿಲ್ಲ.

ಶ್ಯಾಮ ಒಂದು ದಿನ ಟ್ರಾಮಿನಲ್ಲಿ ಮಾಧುವನ್ನು ಕಂಡ. ಮೈ ಕೈ ತುಂಬಿಕೊಂಡು ಮಾಧು ಈಗ ದಪ್ಪಗಾಗಿದ್ದ. ಈ ಛಳಿಯಲ್ಲೂ ಮಾಧು ಬೆವರುತ್ತಿದ್ದ. ಬೆವರಿನಿಂದಾಗಿ ಅವನ ಕನ್ನಡಕ, ಮೂಗಿನ ಮೇಲಿಂದ ಸ್ವಲ್ಪ ಸರಿದು ಬಂದಿತ್ತು. ಮಾಧುವಿನ ಕಾಲಿನ ಚಪ್ಪಲಿಯ ಪಟ್ಟಿ ಕಿತ್ತುಹೋಗಿದೆ. ಪಟ್ಟಿ ಕಿತ್ತ ಚಪ್ಪಲಿಯನ್ನು ಕೈಯಲ್ಲಿ ಹಿಡಿದು, ಮಾಧು ಚಿಂತಾಕ್ರಾಂತನಾಗಿ ಕುಳಿತುಕೊಂಡಿದ್ದ. ಶ್ಯಾಮ ಇನ್ನೊಮ್ಮೆ ಮಾಧುವನ್ನು ಸರಿಯಾಗಿ ನೋಡಿದ. ಹೊಸ ಜುಬ್ಬ, ಒಗೆದ ಪಂಚೆ, ಹೆಗಲ ಮೇಲೆ ಶಾಲು, ಹೆಗಲಿನಿಂದ ಇಳಿಬಿದ್ದಿದ್ದ ಶಾಂತಿನಿಕೇತನದ ತೂಗುಚೀಲ. ಶ್ಯಾಮ ಮಾಧುವನ್ನು ಕೆಲವು ವರ್ಷಗಳ ಹಿಂದೆ ಕಂಡಿದ್ದಾಗ, ಮಾಧು ಊರ ಹೊರಗಿನ ಹೊಸ ಬಡಾವಣೆಯೊಂದರಲ್ಲಿ ಮೇಷ್ಟ್ರ ಕೆಲಸ ಮಾಡುತ್ತಿದ್ದ. ಆಗ ಕಲ್ಕತ್ತೆಯಲ್ಲಿದ್ದ ಅವನ ತಾಯಿಗೆ ಕ್ಯಾನ್ಸರ್ ರೋಗ. ಇಂದೋ ನಾಳೆಯೋ ಎಂಬಂತಿತ್ತು ಅವರ ಸ್ಥಿತಿ. ಶ್ಯಾಮನನ್ನು ಮಾಧು ಎಷ್ಟೋ ಸಲ ಕೇಳಿಕೊಂಡಿದ್ದ. 'ಶ್ಯಾಮ ನನಗೆ ಕಲ್ಕತ್ತೆಯಲ್ಲೇ ಯಾವುದಾದರೂ ಒಂದು ಕೆಲಸ ಕೊಡಿಸಿಕೊಡು. ಕಲ್ಕತ್ತೆಯ ಹೊರಗೆ ಲೈಫೇ ಇಲ್ಲ, ಅದೂ ಅಲ್ಲದೆ ನಮ್ಮಮ್ಮನಿಗೆ ಕ್ಯಾನ್ಸರ್ ಬೇರೆ.' ಮಾಧು ತುಂಬಾ ಸಂಪನ್ನನಂತೆ ಕಂಡು ಬರುತ್ತಿದ್ದ. ಶ್ಯಾಮನೊಂದಿಗೆ ಮಾಧು ಸ್ನೇಹಿತನಂತೆ ವರ್ತಿಸುತ್ತಿರಲಿಲ್ಲ, ಆ ರೀತಿ ವರ್ತಿಸಲೂ ಅವನಿಂದ ಸಾಧ್ಯವಿರಲಿಲ್ಲ. ಅವನು ಶ್ಯಾಮನೊಡನೆ ನಮ್ರತೆಯಿಂದ, ಕೆಲಸದವರು ವರ್ತಿಸುವಂತೆ ವ್ಯವಹರಿಸುತ್ತಿದ್ದ. ಹಿಂದೆ ಶ್ಯಾಮನಿಗೆ ಮಾಧು ಸಿಕ್ಕಿದಾಗ, ಶ್ಯಾಮ ಕೇವಲ ಮುಗುಳ್ನಕ್ಕು ಅವನಿಂದ ಬೇಗ ಪಾರಾಗಿ ಬಿಡುತ್ತಿದ್ದ. ಮಧ್ಯಾಹ್ನದ ಟ್ರಾಮಿನಲ್ಲಿ, ಗುಂಪಿನ ಮಧ್ಯೆ ರಾಡ್ ಹಿಡಿದುಕೊಂಡು ಶ್ಯಾಮ ಮಾಧುವನ್ನು ಗಮನವಿಟ್ಟು ನೋಡಿದಾಗ ಅವನಿಗನಿಸಿತು 'ಈಗ ಮಾಧು ತುಂಬಾ ಸಂತೃಪ್ತನಂತೆ ಕಂಡು ಬರುತ್ತಾನೆ ಅವನ ಚಿಂತೆ ಕೇವಲ ಚಪ್ಪಲಿಕಿತ್ತು ಹೋಗಿರುವುದಕ್ಕಾಗಿ ಮಾತ್ರ.' ಶ್ಯಾಮನಿಗೆ ಎಂದೂ ಸಾಲ ಕೊಟ್ಟದ್ದಾಗಲೀ ಅಥವಾ ಕೊಟ್ಟ ಸಾಲವನ್ನು ಹಿಂತಿರುಗಿ ಪಡೆಯಬೇಕೆಂಬುದಾಗಲೀ ನೆನಪಿರುತ್ತಿರಲಿಲ್ಲ. ಅವನು ಎಂದೂ ಬೇರೆಯವರಿಂದ ಸಾಲ ಪಡೆಯುತ್ತಾ ಇರಲಿಲ್ಲ. ಆದರೆ ಅದೇನೋ ಇಂದು ಇದ್ದಕ್ಕಿದ್ದಂತೆ ಶ್ಯಾಮನಿಗೆ ತಾನು ಮಾಧುವಿನಿಂದ, ಸಾಲದ ಹಣವನ್ನು ಹಿಂದಕ್ಕೆ ಪಡೆಯಬೇಕಾಗಿರುವುದು ಬಾಕಿ ಇದೆ ಎಂದು ನೆನಪಾಯಿತು. ಮಾಧುವಿನ ಸ್ಥಿತಿ ಈಗಂತೂ ತುಂಬಾ ಸುಧಾರಿಸಿದೆ ಎಂದು ಕಾಣಿಸುತ್ತೆ. ಈಗ ಅವನನ್ನು 'ನನ್ನ ಹಣ ನನಗೆ ಹಿಂತಿರುಗಿಸು ಅಂತ ಕೇಳಿದರೆ ಹೇಗಿರುತ್ತೆ? ಈ ರೀತಿ ಯೋಚಿಸುವಾಗ ಅವನಿಗೆ ಜೋರಾಗಿ ನಗು ಬಂತು. ಈ ಟ್ರಾಮಿನ ಗುಂಪಿನಲ್ಲೇ ಜೋರಾಗಿ ಹಣದ ವಿಷಯ ಮಾತನಾಡಬೇಕು ಈ ರೀತಿ ಆಲೋಚಿಸಿ ಶ್ಯಾಮ ಗುಂಪನ್ನು ಭೇದಿಸಿಕೊಂಡು ಮಾಧು ಕುಳಿತಿದ್ದ ಜಾಗದ ಕಡೆ ಸರಿದು ಬರಲು ಪ್ರಯತ್ನಿಸಿದ. ಒಮ್ಮೆಲೇ

ಮಧ್ಯೆ ನಿಂತು ಮನದಲ್ಲೇ ಜೋರಾಗಿ ಬೈದ "ಕತ್ತೇ ನನ್ನ ಮಗನೇ", "ಬಿಟ್ರೇಯರ್" ಎಂದು. ಗುಂಪಿನ ಮಧ್ಯದಿಂದಲೇ ಶ್ಯಾಮ ನೋಡಿದ. ಮಾಧುವಿನ ಪಕ್ಕದಲ್ಲಿ, ತಲೆಯ ಮೇಲೆ ಸೆರಗು ಹೊದ್ದು ಹೊಸ ಸೀರೆಯುಟ್ಟು, ಕಿಟಕಿಯ ಬದಿಯಲ್ಲಿ ಒಬ್ಬ ಹುಡುಗಿ ಕುಳಿತುಕೊಂಡಿದ್ದಾಳೆ. ಗುಂಪಿನ ಗಲಾಟೆಯಿಂದಾಗಿ ಇಷ್ಟರವರೆಗೆ ಶ್ಯಾಮನಿಗೆ ಅವಳು ಕಾಣಿಸಿರಲಿಲ್ಲ. ಆ ಹುಡುಗಿ ಕಿಟಕಿಯ ಕಂಬಿಯಲ್ಲಿ ಕೈಯನ್ನಿಟ್ಟುಕೊಂಡು, ಹೊರಗಡೆ ಮುಖ ತಿರುಗಿಸಿ ಹೊರಗೆಲ್ಲೋ ನೋಡುತ್ತಿದ್ದಳು. ಅವಳನ್ನು ಸರಿಯಾಗಿ ಇನ್ನೊಮ್ಮೆ ನೋಡಲೆಂದು ಶ್ಯಾಮ ತನ್ನ ತಲೆ ಎತ್ತರಿಸಿ ನೋಡಿದ. ತನ್ನ ಗಡ್ಡ ಮುಂದಿನವನನ್ನು ಚುಚ್ಚಬಹುದೆಂಬ ಕಲ್ಪನೆಯೂ ಅವನಿಗಿರಲಿಲ್ಲ. ಶ್ಯಾಮನ ಮುಂದಿದ್ದ ವ್ಯಕ್ತಿ ಮುಖ ಸಿಂಡರಿಸಿ ಶ್ಯಾಮನನ್ನು ಗದರಿಸಿದ. "ಸ್ವಲ್ಪ ಸರಿದು ನಿಲ್ಲು." ಶ್ಯಾಮನಿಗನಿಸಿತು - ಮಾಧುವಿನ ತೃಪ್ತ ಮುಖವನ್ನು ನೋಡಿದರೇ ಹೇಳಬಹುದು ಅವರಮ್ಮ ಬದುಕಿಲ್ಲ ಅಂತ. ಬಹುಶಃ ಮಾಧುವಿನ ಪಕ್ಕದಲ್ಲಿ ಕುಳಿತಿರುವ ಹುಡುಗಿ, ಮಾಧುವಿನ ತಾಯಿಯ ಕೊನೇ ಬಯಕೇ ಅಂತ ಕಾಣಿಸುತ್ತದೆ. ಮಗನ ಹೆಂಡತಿಯನ್ನು ಕಾಣದೆ ನಾನು ಸಾಯಲಾರೆ ಎಂದು ಆಕೆ ಹಟ ಹಿಡಿದಿದ್ದರು ಎಂದು ಕಾಣಿಸುತ್ತದೆ. ಇಲ್ಲದಿದ್ದರೆ ಮಾಧುವಿಗೆ ಬರೋ ಸಂಬಳದಲ್ಲಿ, ಅವನಿಂದ ಮದುವೆಯ ಬಗ್ಗೆ ಯೋಚಿಸಲೂ ಸಾಧ್ಯವಿರಲಿಲ್ಲ. ಮಾಧುವಿಗೆ ಅವರಮ್ಮ ಸತ್ತುದರಿಂದಲೇ ಸ್ವಲ್ಪ ಖರ್ಚು ಕಡಿಮೆಯಾಗಿರಬೇಕು. ಅಥವಾ ಯಾರಿಗೆ ಗೊತ್ತು ಹೇಗಿದ್ದರೂ ತಾಯಿ ಸತ್ತೇ ಸಾಯುತ್ತಾಳಲ್ಲಾ ಎಂದು ಧೈರ್ಯಮಾಡಿ ಮದುವೆ ಮಾಡಿಕೊಂಡಿರಲೂಬಹುದು. ಪುನಃ ಶ್ಯಾಮ ಮಾಧುವನ್ನು ಮನದಲ್ಲೇ ಬೈದ. "ಬಿಟ್ರೇಯರ್" ಆ ಕಾರಣವಾಗಿ ಮಾಧುವಿಗೆ ಶ್ಯಾಮನ ಮೇಲೆ ತುಂಬಾ ಸಿಟ್ಟು ಬಂದಿತು. ಆಮೇಲೆ ಸ್ವಲ್ಪ ತಲೆ ತಣ್ಣಗಾಗಿಸಿಕೊಂಡು ಯೋಚನೆ ಮಾಡಿ ನೋಡಿದ. ಮಾಧುವನ್ನು ಈಗ ಬೇಕಿದ್ದರೆ ಎರಡು ವಿಧದಿಂದ ಸಂಕಟಕ್ಕೆ ಗುರಿ ಮಾಡಬಹುದು. ಮೊದಲನೆಯದಾಗಿ ನೇರವಾಗಿ ಅವನ ಬಳಿ ಹೋಗಿ "ಏನಯ್ಯಾ ಮಾಧು" ಎಂದು ಮಾತನಾಡಿಸುವುದು. ಆಶ್ಚರ್ಯದಿಂದ ಮಾಧು ತನ್ನ ಗುರುತು ಸಿಗದೇ ತಡವರಿಸಿ, ಆಮೇಲೆ ಗುರುತು ಸಿಕ್ಕವನಂತೆ ನಗುತ್ತ ಹೇಳುತ್ತಾನೆ "ನಿನ್ನ ಗುರುತೇ ಹತ್ತಲಿಲ್ಲವಲ್ಲಯ್ಯಾ." ಆಮೇಲೆ ತಾನು ನಕ್ಕು ನೀನು ಎಷ್ಟು ದಪ್ಪಗಾಗಿ ಬಿಟ್ಟಿದ್ದೀಯಲ್ಲೋ ಎಂದು ಹೇಳಿ, ಕಣ್ಣಸನ್ನೆಯಿಂದಲೇ ಆ ಹುಡುಗಿಯನ್ನು ತೋರಿಸಿ, ಹುಬ್ಬು ಕೊಂಕಿಸಿ, ಕೇಳುವುದು. 'ಯಾರು ಈಕೆ' ಅಂತ. ಆಗ ಮಾಧು "ನಿನಗೆ ತಿಳಿಸೇ ಇರಲಿಲ್ಲ ಅಂತ ಕಾಣಿಸುತ್ತೆ, ಇವಳು ನನ್ನ ಹೆಂಡತಿ ಮಾಧುರಿ" ಆಮೇಲೆ ಮಾಧು ತನ್ನ ಹೆಂಡತಿಯ ಕಡೆ ತಿರುಗಿ "ಇವರು ಶ್ಯಾಮ, ನನ್ನ ಸ್ನೇಹಿತರು" ಅಂತ ಹೇಳುತ್ತಾನೆ. ಆಮೇಲೆ ನನ್ನ ಕಡೆ ತಿರುಗಿ ನಿನ್ನ ಆಫೀಸಿಗೆ ಸುದ್ದಿ ತಿಳಿಸೋಣ ಅಂತ ಹೋಗಿದ್ದೆ, ಆದರೆ ಅವರು ನಿನ್ನ ಕೆಲಸ ಹೋಗಿ ಬಿಟ್ಟಿದೆ ಎಂದು ತಿಳಿಸಿದರು ಎಂದು ಹೇಳಬಹುದು. ಇಷ್ಟೇ ಕಾರಣ ಸಾಕು ಶ್ಯಾಮನಿಗೆ ಮಾಧುವನ್ನು ಅವಮಾನ ಮಾಡಲು. 'ಎಲ್ಲರ ಎದಿರೂ ಅವನು ನನ್ನ ಕೆಲಸ ಹೋಗಿರುವ ವಿಷಯ ಯಾಕೆ ಹೇಳಬೇಕಿತ್ತು? ಆಗ ತಾನು 'ಹುಂ' ಕಣಯ್ಯಾ ಕೆಲಸ ಹೋಗಿ ಬಿಟ್ಟಿರೋದರಿಂದ ತುಂಬಾ ಕಷ್ಟ' ಎಂದು ಹೇಳಿ ಸ್ವಲ್ಪ ಗಂಟಲು ಸರಿಪಡಿಸಿಕೊಂಡು,

ಅಕ್ಕಪಕ್ಕದವರಿಗೂ, ಮಾಧುವಿನ ಹೆಂಡತಿಗೂ ಕೇಳುವಂತೆ ಮಾಧುವನ್ನು ಕೇಳುವುದು. "ನಿನ್ನಿಂದ ನನ್ನ ಬಾಕಿ ಹಣ ಬರೋದು ಇದೆ, ಅಲ್ವೇನಯ್ಯಾ" ಎಂದು. ಮಾಧು ಗಲಿಬಿಲಿಗೊಂಡು ಕೇಳುತ್ತಾನೆ. "ಯಾವ ಹಣಾ?" ಆಗ ತಾನೇ "ಅದೇ ಹೋದ ಸಲ ಚಳಿಗಾಲದಲ್ಲಿ ಒಂದು ದಿನ ಗುಂಡು ಹಾಕಿಕೊಂಡು ಬರೋಣ ಬಾ ಅಂತ ನೀನೇ ನನ್ನನ್ನು ಕರೆದುಕೊಂಡು ಹೋಗಿರಲಿಲ್ಲವೇ? ನೀನು ಮರೆತೇಬಿಟ್ಟಿದ್ದೀಯಾ?" ಎಂದು, ಹೇಳಿ ಮಾಧುವಿನ ಹೆಂಡತಿಯನ್ನು ಗಮನಿಸುವುದು. "ಆಕೆ ಪಾಪ ಹೆದರಿಕೆಯಿಂದ ನಡುಗುತ್ತಿರುತ್ತಾಳೆ" ಮಾಧು ತುಂಬಾ ಹೆದರಿಕೊಂಡು ಕೇಳುತ್ತಾನೆ. 'ನಾನು ನಿನ್ನನ್ನು ಕರೆದುಕೊಂಡು ಹೋಗಿದ್ದೆನಾ?" "ಹುಂ ನೀನೇ ಶನಿವಾರ ರೇಸ್ ಗ್ರೌಂಡ್ಸ್‌ನಲ್ಲಿ ಪವನಂದನ ಹಾಗೂ ಟಿಟಾನಿಕ್ ಮೇಲೆ ಡಬ್ಬಲ್ ಕಟ್ಟಿ ಅರವತ್ತೈದು ರೂಪಾಯಿ ನೀನು ಅಂದು ಕಳೆದುಕೊಂಡಿದ್ದಿ. ಏನು ನೀನು ಎಲ್ಲಾ ಮರೆತಿದ್ದೀಯಾ? ಆಮೇಲೆ..."

ಶ್ಯಾಮನಿಗೆ ಮಾಧು ತನ್ನ ಜೀವಮಾನದಲ್ಲೇ ಎಂದಾದರೂ ಹೆಂಡ ಕುಡಿದಿರಬಹುದೆಂದು ಅನ್ನಿಸುವುದಿಲ್ಲ. ಶ್ಯಾಮನಿಗೆ ಗೊತ್ತು ತಾನು ಮಾಡುತ್ತಿರುವುದು ಎಲ್ಲವೂ ಮಾಧುವನ್ನು ವಿಪತ್ತಿಗೆ ಸಿಲುಕಿಸಲು ಮಾತ್ರ ಅಂತ. ಆಮೇಲೆ ಮಾಧು ಕಷ್ಟದಿಂದ ನಕ್ಕು ಹೇಳಬಹುದು. "ಶ್ಯಾಮ ಯಾಕೆ ನೀನು ಇಷ್ಟು ಸಣ್ಣಗಾಗಿ ಬಿಟ್ಟಿದ್ದೀಯಾ? ನನಗೆ ಈಗ ಕಲ್ಕತ್ತೆಯಲ್ಲೇ ಕೆಲಸವಾಗಿದೆ. ಇಲ್ಲೇ ಮನೆ ಮಾಡಿದ್ದೇನೆ. ಒಂದು ದಿನ ನಮ್ಮ ಮನೆಗೆ ಬಾ."

ತಕ್ಷಣ ಶ್ಯಾಮ ಕೇಳುತ್ತಾನೆ. ನೀನು ಇರೋದು ಎಲ್ಲಿ? ಅಂತೂ ಯೋಚಿಸಿ ಶ್ಯಾಮನಿಗೆ ಮಾಧು ವಿಳಾಸ ಕೊಟ್ಟು ಹೇಳುತ್ತಾನೆ, "ಈ ಹಾಳು ಟ್ಯೂಷನ್ ಗಲಾಟೆಗಳಲ್ಲಿ, ನನಗೆ ಮನೆಯಲ್ಲಿರೋದಿಕ್ಕೇ ಸಾಧ್ಯವಾಗುವುದಿಲ್ಲ. ರಜೆಯ ದಿನ ಮೊದಲೇ ನೀನು ನಮಗೆ ತಿಳಿಸಿ ಬಂದರೆ ಒಳ್ಳೆಯದು. ಇಲ್ಲದಿದ್ದರೆ ನಾವು ಸಿನೇಮಾ ಅಂತ ಎದ್ದು ಬಿಟ್ಟಿದ್ದರೆ ಕಷ್ಟ."

ನಿಜವಾಗಿ ನೋಡಿದರೆ ಮಾಧು ತನ್ನ ವಿಳಾಸ ಶ್ಯಾಮನಿಗೆ ಕೊಟ್ಟು ಇನ್ನೊಂದು ವಿಪತ್ತಿನಲ್ಲಿ ಸಿಕ್ಕು ಬೀಳುತ್ತಾನೆ. ಈ ವಿಪತ್ತು ಸಿಹಿಯಾದ ವಿಷದ ತರಹ. ಶ್ಯಾಮ ಯಾವ ರೀತಿ ಹುಡುಗಿಯರೊಂದಿಗೆ ವ್ಯವಹರಿಸುತ್ತಾನೆ ಎನ್ನುವುದು ಮಾಧುವಿಗೆ ಗೊತ್ತಿಲ್ಲದ ವಿಷಯ ವೇನೂ ಅಲ್ಲ. ಅದೂ ಅಲ್ಲದೆ ಶ್ಯಾಮನಿಗೆ ಪಾಪ ಪುಣ್ಯ, ಧರ್ಮ ಕರ್ಮಗಳ ಹೆದರಿಕೆಯಿಲ್ಲ. ಅಂಥಹವರಿಗೆ ನಾನು ವಿಳಾಸ ಕೊಟ್ಟೆನಲ್ಲಾ ಎಂದು ಮಾಧುವಿಗೆ ತುಂಬಾ ದಿಗಿಲಾಗುತ್ತೆ. ಹೆಂಡತಿ ಒಂದು ವೇಳೆ ಸತೀ ಸಾವಿತ್ರಿನೇ ಆಗಿದ್ದರೂ ಕೂಡಾ ಏನೂ ಪ್ರಯೋಜನವಿಲ್ಲ. ಹೆಂಡತಿಗೆ ತಿಳಿಸಿ ಹೇಳೋ ಅಷ್ಟು ಧೈರ್ಯ ಮಾಧುವಿಗೆ ಎಲ್ಲಿಂದ ಬರಬೇಕು?

ಮಾಧುವಿನ ಬಗ್ಗೆ ಯೋಚಿಸುತ್ತಾ ಶ್ಯಾಮ ಅನ್ಯಮನಸ್ಕನಾಗಿ ಜೋರಾಗಿ ನಕ್ಕ. ಅವನ ಪಕ್ಕದಲ್ಲಿ ಕುಳಿತಿದ್ದವರೆಲ್ಲಾ, ಅವನನ್ನೇ ಒಂದು ರೀತಿ ದಿಟ್ಟಿಸಿ ನೋಡಿದರು. ಗೋಯಲೆಂದರಿನ ಸ್ಟೀಮರಿನಂತೆ ಮಾಧು ಮುಂದೆ ಮುಂದೆ, ಗುಂಪಿನ ಮಧ್ಯೆ ಸರಿಯುತ್ತಾ, ಕೈಯಲ್ಲಿ ಹರಿದ ಚಪ್ಪಲಿಯನ್ನು ಸಂಕೋಚದಿಂದ ಹಿಡಿದುಕೊಂಡು ತನ್ನನ್ನು ಹಿಂಬಾಲಿಸುವ ಹೆಂಡತಿಯೊಡನೆ ಕಾಲೀಘಾಟ್ ಸ್ಟಾಪಿನಲ್ಲಿ ಟ್ರಾಮಿನಿಂದ ಇಳಿದು ಹೊರಟು ಹೋದ. ಇಳಿದು ಹೋಗುವಾಗ

ಶ್ಯಾಮನನ್ನು ಮಾಧು ಒಮ್ಮೆಯಾದರೂ ಹಿಂದೆ ತಿರುಗಿ ನೋಡಲಿಲ್ಲ. ಆದರೆ ಅವನ ಹೆಂಡತಿ ಮಾತ್ರ ತಲೆ ಮೇಲೆ ಸೆರಗು ಹೊದ್ದು ಶ್ಯಾಮನನ್ನು ಹಾದುಕೊಂಡೇ, ಅವಳ ಗಂಡನ ಹಿಂದೆ ಇಳಿದು ಹೊರಟು ಹೋದಳು.

ಶ್ಯಾಮ ಅವರಿಬ್ಬರೂ ಟ್ರಾಮಿನಿಂದ ಇಳಿದು ಹೋಗುವುದನ್ನು ತಲೆ ಎತ್ತಿ ನೋಡಿದ. ಮಾಧುವಿನ ಹೆಂಡತಿ ಮಾಧುವಿನಷ್ಟೇ ಎತ್ತರ. ಟ್ರಾಮು ಇನ್ನೇನು ಸ್ಟಾಪಿನಿಂದ ಕದಲಬೇಕು ಎನ್ನುತ್ತಿರುವಾಗ ಶ್ಯಾಮ ಈಗಲೇ ಏನಾದರೂ ಮಾಡಬಹುದಾಗಿತ್ತು ಎಂದು ಪೇಚಾಡಿಕೊಂಡ. ಶ್ಯಾಮನ ಪಕ್ಕದಲ್ಲಿದ್ದ ಧಡೂತಿ ಆಸಾಮಿ ಶ್ಯಾಮನನ್ನು ಬಿಗಿಯಾಗಿ ಒತ್ತಿ ನಿಂತಿದ್ದ. ಶ್ಯಾಮನಿಗೆ ಪುನಃ ತನ್ನ ಗಡ್ಡ ಅವನ ಮುಖಕ್ಕೆ ಚುಚ್ಚಬೇಕು ಎಂದು ಅನಿಸಿತು, ಅನಂತರ ಶ್ಯಾಮ ಮಾಧುವಿಗೆ ಮನದಲ್ಲೇ ಮುಕ್ತಿ ದಯಪಾಲಿಸಿದ. "ಓ ಮಾಧು ನೀನು ಇನ್ನೂ ಸುಖಿಯಾಗು. ಇನ್ನೂ ಉನ್ನತ ಸ್ಥಿತಿ ಹೊಂದು ನನ್ನ ಇಪ್ಪತ್ತೈದು ರೂಪಾಯಿಗಳನ್ನು ನಿನಗೇ ಬಿಟ್ಟುಕೊಟ್ಟಿದ್ದೇನೆ. ಮಾಧು ನಾನು ನಿನಗೆ ಮನಃಪೂರ್ವಕವಾಗಿ ಆಶೀರ್ವಾದ ಮಾಡುತ್ತೇನೆ, ನೀನು ತುಂಬಾ ದೂರದವರೆಗೂ ನಡೆಯದೆಯೇ ಹತ್ತಿರದಲ್ಲೇ ನಿನಗೆ ಯಾವನಾದರೂ ಒಬ್ಬ ಮೋಚಿಸಿಗುವಂತಾಗಲಿ" ಎಂದು ಶ್ಯಾಮ ಮಾಧುವನ್ನು ಮನದಲ್ಲೇ ಹರಿಸಿದ. ಮನದಲ್ಲೇ ಇಷ್ಟೆಲ್ಲ ಮಾಧುವಿನ ಬಗ್ಗೆ ಮಾತನಾಡಿಕೊಂಡು ಶ್ಯಾಮ ತೃಪ್ತಿ ಹೊಂದಿದ.

ಶ್ಯಾಮ, ಮತ್ತೊಂದು ದಿನ, ಡಬ್ಬಲ್ ಡೆಕ್ಕರಿನಲ್ಲಿ ಹೋಗುತ್ತಿರುವಾಗ, ಬಸ್ಸಿನ ಮೇಲಂತಸ್ತಿನಲ್ಲಿ ಕುಳಿತು, ಕಾಲೇಜು ಸ್ಟ್ರೀಟನ್ನು ಬಸ್ಸು ಹಾದು ಹೋಗುವಾಗ, ಆರ್‌ಪುರ್ ಲೇರಿನ ಗೋಡೆಗೊರಗಿ ನಿಂತಿದ್ದ ಮನುವನ್ನು ಒಂದು ಕ್ಷಣ ಕಂಡ. ಮನು, ಕಪ್ಪು ಬಣ್ಣದ ಪ್ಯಾಂಟು, ಪಾಚೀ ಹಸಿರಿನ ಪುಲ್‌ಓವರ್ ಕಾಲಿಗೆ ಹಾಕೀ ಬೂಟುಗಳನ್ನು ಹಾಕಿಕೊಂಡು ತನ್ನ ಕೈಯನ್ನು ಎದೆಯ ಮೇಲೆ ಅಡ್ಡವಾಗಿ ಮಡಿಸಿಟ್ಟುಕೊಂಡು ಒಂದು ಕಾಲಿನ ಮೊಣಕಾಲನ್ನು ಮಡಿಸಿ, ಪಾದವನ್ನು ಹಿಂದಿನ ಗೋಡೆಗೆ ಆನಿಸಿಕೊಂಡು, ಒಂಟಿ ಕಾಲಿನ ಮೇಲೆ ನಿಂತುಕೊಂಡಿದ್ದ. ಮಿನು ತಲೆ ತಗ್ಗಿಸಿಕೊಂಡು ನಿಂತುಕೊಂಡಿದ್ದ. ಒಮ್ಮೆಲೇ ಯಾರಾದರು ಅವನನ್ನು ನೋಡಿದರೆ ನಿದ್ದೆ ಮಾಡುತ್ತಿದ್ದಾನೇನೋ ಎಂಬ ಭ್ರಮೆ ಹುಟ್ಟಿಸುತ್ತಿತ್ತು. ಶ್ಯಾಮನಿಗೆ ಚೆನ್ನಾಗಿ ಗೊತ್ತು ಮಿನು ಒಂದೇ ಕ್ಷಣದಲ್ಲಿ ತನ್ನ ಭಂಗಿಯನ್ನು ಬದಲಾಯಿಸಬಲ್ಲ ಎಂದು. ಬಗ್ಗಿಸಿಟ್ಟುಕೊಂಡ ಕಾಲನ್ನು ಮಿನು ತೆಗೆದು, ಎರಡು ಕಾಲೂರಿ ನಿಂತುಕಂಡನೆಂದರೆ ಅವನ ಮುಖ ಲಕಲಕ ಎಂದು ಹೊಳೆಯುತ್ತೆ. ಒಂದು ಕ್ಷಣ ಶ್ಯಾಮ ಮಿನುವಿನ ಆ ಭಂಗಿಯನ್ನು ಮನದಲ್ಲೇ ನೆನೆದು ಮನದಲ್ಲೇ ಕೂಗಿದ 'ಮಿನೂ'. ಶ್ಯಾಮ ಎಲ್ಲರನ್ನೂ ಸರಿಸಿ ಬಸ್ಸಿನಿಂದ ಬೇಗ ಇಳಿಯುವ ಪ್ರಯತ್ನ ಮಾಡಿದ. ಆದರೆ ಅವನಿಗನಿಸಿತು- ಈ ಗುಂಪನ್ನು ಭೇದಿಸಿ ಇಳಿಯುವದರೊಳಗೆ ಬಸ್ಸು ಕಡೇ ಪಕ್ಷ ಎರಡು ಸ್ಟಾಪ್ ಆದರೂ ಮುಂದೆ ಹೊರಟು ಹೋಗಿರುತ್ತೆ. ಒಂದು ವೇಳೆ ಮುಂದಿನ ಸ್ಟಾಪಿನಲ್ಲಿ ಇಳಿದು, ಹಿಂದೆ ನಡೆದುಕೊಂಡು ಬಂದರೂ ಮಿನುವನ್ನು ಆ ಹಿಂದಿನ ಸ್ಥಳದಲ್ಲಿ ಕಂಡೇ ಕಾಣಬಹುದೆಂಬ

ಭರವಸೆ ಏನೂ ಇರಲಿಲ್ಲ. ಹಾಗೇ ಯೋಚಿಸಿದರೆ ಮನುಷ್ಯನಿಗೆ ಯಾವಾಗಲೂ ಲಾಭವೇ ಆಗುತ್ತಾ ಇರುವುದಿಲ್ಲ. ಅದೂ ಅಲ್ಲದೆ ಒಂದು ವೇಳೆ ಮಿನುವಿಗೆ ಕೈಯಲ್ಲಿ ಏನಾದರೂ ಕೆಲಸವಿದ್ದರೆ ಶ್ಯಾಮನನ್ನು ಅವನು ಗುರುತೂ ಹಿಡಿಯುವುದಿಲ್ಲ. ಶ್ಯಾಮನನ್ನು ಕಂಡು ಕೇವಲ ದೇಶಾವರಿ ನಗೆ ನಕ್ಕು ಮಿನು 'ಅರೇ ಶ್ಯಾಮ' ಎಂದಿಷ್ಟೇ ಹೇಳಬಹುದು. ಆಮೇಲೆ 'ಶ್ಯಾಮ ನೀನು ಇಲ್ಲಿಂದ ಹೊರಟುಹೋಗು. ನನಗೆ ಕೆಲಸ ಇದೆ' ಎಂದು ಹೇಳಬಹುದು 'ಏನು ಕೆಲಸ?' ಆಗ ಮಿನು ತಲೆ ಕೆರೆದುಕೊಳ್ಳುತ್ತಾ ಮೆಲ್ಲಗೆ ಶ್ಯಾಮನಿಗೆ ಹೇಳಬಹುದು. ಈಗ ಇಲ್ಲಿ ದೊಡ್ಡ ಗಲಾಟೆಯಾಗುತ್ತದೆ.ಈ ರೀತಿ ಅವನು ಮಾತನಾಡುವಾಗ, ಅವನ ಧ್ವನಿಯಲ್ಲಿ ಒಂದು ರೀತಿಯ ಗಡಸು ಕಂಡು ಶ್ಯಾಮನಿಗನಿಸುತ್ತೆ 'ಮಿನುವಿನ ಧ್ವನಿಗೆ ಮೈಕ್ರೋಫೋನ್ ಏನಾದರೂ ಲಗತ್ತಿಸಿದ್ದಾರೋ ಏನೋ' ಎಂದು. ಮಿನುವಿನ ಧ್ವನಿ ಗಟ್ಟಿಯಾಗಿ ಇಲ್ಲದಿದ್ದರೂ ಅವನು ಮಾತನಾಡಿದರೆ, ಅವನ ಧ್ವನಿ ಆಳವಾದ ಭಾವಿಯಿಂದ ಹೊರಹೊಮ್ಮಿ ಬಂದಂತೆ ಅನಿಸುತ್ತೆ, ಅವನ ಧ್ವನಿ ಕೇಳಿ ಯಾರ ಎದೆ ಬೇಕಾದರೂ ಡವ ಡವ ಗುಟ್ಟಬಹುದು.

ಶ್ಯಾಮ ಮಿನುವನ್ನು ಹಿಂದೆ ಕಂಡದ್ದು ಎಂದರೆ ಏಳೆಂಟು ವರ್ಷಗಳ ಹಿಂದೆ ಆಗ ಇನ್ನೂ ಶ್ಯಾಮ ಚಿಕ್ಕ ಕಂಪೆನಿಯೊಂದರಲ್ಲಿ ಸಾಮಾನ್ಯವಾದ ಕೆಲಸ ಮಾಡುತ್ತಿದ್ದ. ಆಗ ಅವನಿಗೆ ಬರುತ್ತಿದ್ದುದು ಕೇವಲ ಇನ್ನೂರು ರೂಪಾಯಿ ಸಂಬಳ. ಒಮ್ಮೆ ತಿಂಗಳ ಸಂಬಳ ಪಡೆದು, ಕಿಕ್ಕಿರಿದ ಬಸ್ಸಿನ ಬಾಗಿಲಿಗೆ ಜೋತು ಬಿದ್ದು ಶ್ಯಾಮ ಮನೆಗೆ ಹಿಂತಿರುಗುತ್ತಿದ್ದ. ಕಾಲೀಘಾಟ್ ಬಸ್ ಸ್ಟಾಪಿನಲ್ಲಿ ಬಸ್ ನಿಲ್ಲುತ್ತಲೇ ಶ್ಯಾಮ ಇಳಿಯಬೇಕು ಎಂದು ಅಂದು ಕೊಳ್ಳುವಷ್ಟರಲ್ಲೇ ಅಸ್ಪಷ್ಟವಾದ ಧ್ವನಿಯಲ್ಲಿ ತನ್ನನ್ನು ಯಾರೋ ಕರೆದಂತೆ ಶ್ಯಾಮನಿಗೆ ಭಾಸವಾಯಿತು. ಶ್ಯಾಮ ಬಸ್ಸಿನಿಂದ ಇಳಿದೇನೋ ಇಳಿದ, ಆದರೆ ಗುಂಪಿನ ಮಧ್ಯೆ ಕಬ್ಬಿಣದಂತಹ ಬಲಿಷ್ಠವಾದ ಎರಡು ಕೈಗಳು, ಅವನ ಮೊಣಕೈಯನ್ನು ಬಿಗಿಯಾಗಿ ಹಿಡಿದುಕೊಂಡಿರುವ ಅನುಭವ ಅವನಿಗಾಯಿತು. ಮರು ಕ್ಷಣದಲ್ಲೇ ಅದೇ ಕೈಗಳು ಅವನನ್ನು ಬಸ್ಸಿನೊಳಗೆ ಅನಾಮತ್ತಾಗಿ ಎಳೆದುಕೊಂಡವು. ಶ್ಯಾಮನ ಹಲ್ಲುಗಳು ಯಾರಿಗೋ ತಗಲಿದವು. ಅವನ ಮೊಣಕೈಯು ಯಾರನ್ನೋ ತಿವಿದವು. ಬಾಗಿಲ ಹತ್ತಿರದ ಜನ ಹಾಹಾಕಾರ ಮಾಡುತ್ತ ಇದ್ದರೂ, ಬಸ್ಸು ಸ್ಟಾಪಿನಲ್ಲಿ ನಿಂತೂ ನಿಲ್ಲದಂತೆ ಮುಂದೆ ಓಡಿತು. ಬಸ್ಸಿನಲ್ಲಿ ಸರಿಯಾಗಿ ಹಿಡಿದುಕೊಂಡು ನಿಲ್ಲಲು ಆಧಾರವಿಲ್ಲದೆ ಶ್ಯಾಮ ಬಸ್ಸಿನಿಂದ ಬೀಳುವುದರಲ್ಲಿದ್ದ, ಆದರೆ ಅಷ್ಟರಲ್ಲೇ ಯಾರೋ ಅವನನ್ನು ಗಟ್ಟಿಯಾಗಿ ಹಿಡಿದುಕೊಂಡರು. ಹಾಗೇ ಅವನನ್ನು ಹಿಡಿದುಕೊಂಡು ಚಲಿಸುತ್ತಿರುವ ಬಸ್ಸಿನಿಂದ ಕೆಳಗಿಳಿದರು. ಬಿಗಿ ಹಿಡಿತದಿಂದ ಶ್ಯಾಮನಿಗೆ ನೋವಾಗಿ, ತಲೆ ಗಿರ್ ಎಂದಿತು, ಅದಕ್ಕೆ ಅವನಿಗೆ ಸ್ವಲ್ಪ ಹೊತ್ತು ತನ್ನನ್ನು ಯಾರು ಬಸ್ಸಿನಿಂದ ಹಿಡಿದುಕೊಂಡು ಇಳಿದರು ಎಂದು ತಿಳಿಯಲು ಸಾಧ್ಯವಾಗಲಿಲ್ಲ. ಸ್ವಲ್ಪ ತನ್ನನ್ನು ತಾನು ಸುಧಾರಿಸಿಕೊಂಡಾದ ಮೇಲೆಯೇ ಶ್ಯಾಮನಿಗೆ ತಿಳಿದದ್ದು, ತನ್ನನ್ನು ಕೆಳಗಿಳಿಸಿದವನು ಮಿನು ಎಂದು. ಮಿನುವಿನದು ಅದೇ ಚಳಿಗಾಲದ ಉಡುಪು. ಕರೀ ಪ್ಯಾಂಟು, ಪಾಚೀ ಹಸುರಿನ ಪುಲ್ ಓವರ್. ಶ್ಯಾಮನನ್ನು ಗಟ್ಟಿಯಾಗಿ ಹಿಡಿದುಕೊಂಡು ಮಿನು ನಗುತ್ತಿದ್ದ. ರಸ್ತೆಯಲ್ಲಿನ ಹಲವು ಪಾದಚಾರಿಗಳು

ಇವರಿಬ್ಬರನ್ನೇ ನೋಡಿಕೊಂಡು ಮುಂದೆ ಹೋಗುತ್ತಿದ್ದರು. ಅದಕ್ಕೆಂದೇ ಮಿನು ಶ್ಯಾಮನ ಕೈ ಹಿಡಿದು, ಅವನನ್ನು ಸ್ವಲ್ಪದೂರ ನಡೆಸಿಕೊಂಡು ಹೋದ. ತನ್ನ ದೀರ್ಘ ಬಲಿಷ್ಟವಾದ ಬಲಗೈಯನ್ನು ಅನಾಯಾಸವಾಗಿ ಶ್ಯಾಮನ ಹೆಗಲ ಮೇಲಿಟ್ಟು ನಗುತ್ತಾ ವಿಚಾರಿಸಿದ್ದ, "ಪೆಟ್ಟಾಯಿತಾ ಶ್ಯಾಮ". ಶ್ಯಾಮ ತಲೆ ಅಲ್ಲಾಡಿಸಿ "ಏನಿಲ್ಲ" ಎಂದಿದ್ದ. ಆಮೇಲೆ ಮಿನು ಮೆಲ್ಲಗೆ ನಕ್ಕು ಬಲಗೈಯನ್ನು ಶ್ಯಾಮನ ಹೆಗಲ ಮೇಲಿಂದ ಸರಿಸಿ, ಶ್ಯಾಮನ ಪ್ಯಾಂಟಿನ ಮೇಲೆ ಇರಿಸಿದ್ದ. ಆಮೇಲೆ ಒಂದು ನಿಮಿಷ ಸದ್ದಿಲ್ಲದೆ ತುಂಬಾ ಹೊತ್ತು ನಿಂತುಕೊಂಡಿದ್ದ. ಒಂದಿಷ್ಟೂ ಅಲ್ಲಾಡದೆ ಅವನು ನಿಂತುಕೊಂಡಿರುವ ಭಂಗಿ ನೋಡಿದರೆ, ತನ್ನ ಎರಡೂ ಕಾಲುಗಳನ್ನು ಅವನು ಮಣ್ಣಲ್ಲಿ ಹುಗಿದುಕೊಂಡು ಅಚಲವಾಗಿ ನಿಂತಿದಾನೋ ಏನೋ ಎಂಬ ಭ್ರಮೆ ಹುಟ್ಟಿಸುವಂತಿತ್ತು.

ಮಿನುವಿನ ಕಣ್ಣುಗಳು ತುಂಬಾ ಸುಂದರವಾಗಿದ್ದವು. ಅಗಲವಾದ, ಆಳವಾದ ಕಣ್ಣುಗಳು, ಅರೆಗಣ್ಣು ಮುಚ್ಚಿ ನಿದ್ರಿಸುವಂತೆ, ಉದಾಸೀನ, ವೈರಾಗ್ಯ ತುಂಬಿದ ಕಣ್ಣುಗಳು ನಾಲಕ್ಕೂ ಕಡೆ ದಿಟ್ಟಿಸಿ ನೋಡುತ್ತಿದ್ದವು. ಮಿನು ತನ್ನ ಮುಖದ ಭಂಗಿಯನ್ನು ನಿಮಿಷ ಮಾತ್ರದಲ್ಲಿ ಬದಲಾಯಿಸಿಬಿಡುತ್ತಿದ್ದ. ದಯಾಹೀನ, ನಿಷ್ಠುರ ಮಿನುವನ್ನು ಆಗ ಗುರುತಿಸುವುದು ಸ್ವಲ್ಪ ಕಷ್ಟ. ಮಿನು ಸ್ವಲ್ಪ ಹುಬ್ಬು ಕೊಂಕಿಸುವುದರಲ್ಲೇ ಮ್ಯಾಜಿಕ್ ಮಾಡಿ ತೋರಿಸಬಲ್ಲ. ಆಗ ಶ್ಯಾಮ ಒಳ್ಳೆ ಹುಡುಗನಾಗಿದ್ದ. ಅದಕ್ಕೆ ತಡವರಿಸುತ್ತಾ, ಮಿನುವಿನ ಅದೇ ಶಾಂತ, ಅರೆ ಮುಚ್ಚಿದ, ಅರೆ ನಿದ್ದೆ ಮಾಡಿದಂತಿರುವ ಕಣ್ಣಿನ ಕಡೆ ನೋಡುತ್ತಲೇ ಇದ್ದ. ಅವನು ಸ್ಪಷ್ಟವಾಗಿ ಹೇಳಬಯಸುತ್ತಿದ್ದ "ನನಗೆ ಸಂತೋಷವಾಗಿಲ್ಲ......... ನಿನ್ನನ್ನು ನೋಡಿ ನನಗೆ ಸಂತೋಷವಾಗಿಲ್ಲ."

ಮಿನು ತುಂಬಾ ಗಾಢವಾಗಿ ಯೋಚಿಸುವವನಂತೆ, ಶ್ಯಾಮನನ್ನು ಅವಲೋಕಿಸಿ ಹೇಳಿದ್ದ- ಇಂದು ಮೊದಲನೇ ತಾರೀಖು, ನಿನ್ನ ಹತ್ತಿರ ತುಂಬಾ ದುಡ್ಡಿರಬೇಕು ಅಲ್ವಾ? ಚಿಕ್ಕಂದಿನ ತನ್ನ ಹಳೆಯ ಗೆಳೆಯನನ್ನು ಮಾತನಾಡಿಸಲೆಂದೇ ಮಿನು ಅವನನ್ನು ಬಸ್ಸಿನಿಂದ ಹಿಡಿದು ಎಳೆದುಕೊಂಡು ಬಂದಿದ್ದಾನೆ ಎನ್ನುವುದು ಶ್ಯಾಮನಿಗರ್ಥವಾಯಿತು. ನಿಜವಾಗಿಯೂ ಈಗ ಶ್ಯಾಮ ಮಿನುವನ್ನು ಹಾಗೇ ನೋಡಿ ಅರಿಯುವ ಪ್ರಯತ್ನ ಮಾಡಿದ್ದ. ಆ ಕಾರಣವಾಗಿ ಶ್ಯಾಮ ತುಂಬಾ ಹೆದರಿಕೊಂಡು ಬಿಟ್ಟಿದ್ದ. ಸಂಜೆ ರಸ್ತೆಯಲ್ಲಿ, ಅಕ್ಕ ಪಕ್ಕದಲ್ಲಿ ಹಲವಾರು ಜನ ಓಡಾಡುತ್ತಿದ್ದಾರೆ. ಅವರೆಲ್ಲರ ಮಧ್ಯೆಯೂ ತಾನು ಒಂಟಿ ಏನೋ ಎಂದು ಶ್ಯಾಮನಿಗೆ ಅನಿಸುತ್ತಿತ್ತು. ಈಗ ಅವನಿಗೆ ಮಿನು ಮತ್ತಷ್ಟು ಕಪ್ಪಾಗಿ ಕಂಡ. ಶ್ಯಾಮ ಮಿನುವನ್ನು ನೋಡುತ್ತ ಹೇಳಿದ "ಹುಂ, ಇವತ್ತು ಸಂಬಳ ಸಿಕ್ಕಿದೆ". ಮಿನು ತನ್ನೆರಡೂ ಜೇಬಿನಲ್ಲಿ ಕೈ ಇಳಿ ಬಿಟ್ಟುಕೊಂಡು ಭುಜವನ್ನು ಸ್ವಲ್ಪ ಎತ್ತರಿಸಿ, ಹಗುರಾಗಿ ನಕ್ಕು ಹೇಳಿದ್ದ- ನನಗೆ ಗೊತ್ತಿತ್ತು. ಅದಕ್ಕೆ ನಿನ್ನ ನಾನು ಆ ಬಸ್ಸಿನಲ್ಲಿ ಹೋಗಲು ಬಿಡಲಿಲ್ಲ. ಆ ಬಸ್ಸು ತುಂಬಾ ಬಿಸಿಯಾಗಿತ್ತು. ಶ್ಯಾಮನಿಗೆ 'ಬಿಸಿ' ಎಂಬ ಶಬ್ದದ ಅರ್ಥ ತಟ್ಟನೇ ತಿಳಿಯಲಿಲ್ಲ. ಆದರೂ ಶ್ಯಾಮ ಸುಮ್ಮನೆ ಮಿನುವನ್ನೇ ದಿಟ್ಟಿಸುತ್ತಾ ನಿಂತಿದ್ದ. ಮಿನು ಸಸ್ನೇಹದಿಂದ ನಕ್ಕು ಹೇಳಿದ್ದ 'ಆ ಬಸ್ಸಿನಲ್ಲಿ ಪುಡುಗರು ಇದ್ದರಲ್ಲ,

ಅವರ ಪರಿಚಯ ನನಗೆ ತುಂಬಾ ಚೆನ್ನಾಗಿದೆ. ಅವರ ಕೈ ತುಂಬಾ ಚುರುಕು ಅನ್ನೋದರ ಸುಳಿವೂ ನಿನಗೆ ಹತ್ತಿರಲಿಕ್ಕಿಲ್ಲ.' ಮಿನುವಿನ ಮಾತು ಕೇಳಿ ಶ್ಯಾಮ ಆಶ್ಚರ್ಯ ಹಾಗು ಭಯದಿಂದ ತನ್ನ ಜೇಬನ್ನು ಮುಟ್ಟಿ ನೋಡಿಕೊಳ್ಳಹೋದ. ಆದರೆ ಮಿನು ಶ್ಯಾಮನನ್ನು ಕೈ ಎತ್ತಿ ತಡೆದು ಹೇಳಿದ್ದ 'ನಾನು ಆಗಲೇ ಎಲ್ಲಾ ನೋಡಿದ್ದೇನೆ, ಎಲ್ಲಾ ಸರಿಯಾಗಿ ಇದೆ. ಭಯವೇನೂ ಇಲ್ಲ.' ಆಲಸ್ಯ, ಉದ್ದೇಶ್ಯಹೀನ, ನಿಸ್ತೇಜ ಕಣ್ಣುಗಳನ್ನೇ ದಿಟ್ಟಿಸುತ್ತಾ ಶ್ಯಾಮ ನಕ್ಕು ಹೇಳಿದ್ದ ಮಿನು ನೀನು ತುಂಬಾ ಹೆದರಿಸಿಬಿಟ್ಟೆದ್ದಿ. ನಿಜವಾಗಲೂ ಆಗ ಶ್ಯಾಮನನ್ನು ಮಿನು ನೋಡುತ್ತಿರಲಿಲ್ಲ. ಆದರೂ ಶ್ಯಾಮನಿಗೆ ಮಿನು ಎಷ್ಟು ದೂರ ನೋಡುತ್ತಾನೆ, ಎಷ್ಟು ದೂರ ನೋಡಬಲ್ಲ ಎಂಬುದರ ಅಂದಾಜು ಅರ್ಥವಾಗಿತ್ತು. ಸತ್ವವಿಲ್ಲದ, ಮೃದುವಾದ ಮಿನುವಿನ ನಗುವಿನಲ್ಲಿ ಒಂದಿಷ್ಟೂ ಜೀವವಿರಲಿಲ್ಲ.

ಮಿನುವಿನಿಂದಾಗಿಯೇ ಶ್ಯಾಮನ ಹಣ ಉಳಿದಿದ್ದರೂ, ಮಿನುವಿನ ಬಗ್ಗೆ ಒಂದಿಷ್ಟೂ ಕೃತಜ್ಞತೆಯ ಭಾವ, ತನ್ನ ಮನದಲ್ಲಿ ಮೂಡಿಲ್ಲ ಎಂದು ಶ್ಯಾಮನಿಗೆ ಅನಿಸಿತು. ನಿಜವಾಗಿ ನನ್ನ ಮನದಲ್ಲಿ ಮಿನುವಿಗಾಗಿ ಒಂದಿಷ್ಟೂ ಪ್ರೀತಿಯಿಲ್ಲ ಎಂಬುದರ ಅರಿವಾಗಿ ಶ್ಯಾಮನಿಗೆ ತುಂಬಾ ನಾಚಿಕೆ ಎನಿಸಿತು. ತಾನು ಮಾಡುತ್ತಿರುವುದು ಉಚಿತವಲ್ಲ ಎಂಬುದರ ಅರಿವಾಗಿ, ಈ ಬೇಡದ ಸಂಪರ್ಕವನ್ನು ಬೇಗ ಕಡಿದು ಹಾಕುವುದಕ್ಕೋಸ್ಕರ ಶ್ಯಾಮ ಮಿನುವಿಗೆ ಹೇಳಿದ್ದ "ನಡೀ ಮಿನು, ಹೋಗೋಣ,ನಿನ್ನ ಹತ್ತಿರ ಮಾತನಾಡಿ ತುಂಬಾ ದಿನವಾಗಿದೆ. ಬಾ ಚಹ ಕುಡಿಯೋಣವಂತೆ".

ಮಿನು ಶ್ಯಾಮನ ಮಾತನ್ನು ಆಗಲೂ ಕೇಳಿಸಿಕೊಂಡಿರಲಿಲ್ಲ. ಮಿನು ಶ್ಯಾಮನನ್ನು ಉಪೇಕ್ಷಿಸಿ, ವಿದ್ಯುತ್ ಗತಿಯಿಂದ ಹಿಂದೆ, ಮುಂದೆ, ಎಡ ಬಲಗಳಲ್ಲಿ, ಕಣ್ಣು ಹಿಗ್ಗಿಸಿ ನೋಡಿ, ಆಲಸ್ಯ ಭಾವದಿಂದ ಶ್ಯಾಮನನ್ನು ನೋಡಿ ನಕ್ಕು, ಸೊಂಟದ ಪಟ್ಟಿಯನ್ನು ಮರೆಮಾಡುವಂತೆ, ತನ್ನ ಪುಲ್ ಓವರ್‌ನ್ನು ಮತ್ತಿಷ್ಟು ಕೆಳಗೆಳೆದುಕೊಂಡು ಹೇಳಿದ್ದ 'ಶ್ಯಾಮ ಇಲ್ಲಿ ನಾನು ಒಬ್ಬನೇ ಇಲ್ಲ. ನನ್ನ ಜೊತೆ ನನ್ನ ಕಡೆಯವರೂ ಇದ್ದಾರೆ.ಃ ಶ್ಯಾಮನ ಎದೆ ಪುನಃ ಡವ ಡವ ಎಂದಿತು.ಮಿನು ನಿಂತಿದ್ದ ಹಿಂಭಾಗದಲ್ಲೇ ಹಳದಿ ಬಣ್ಣದ ಚರ್ಚು, ಚರ್ಚಿನೆದುರು ಬಸ್‌ಸ್ಟಾಪ್‌ನ ಜನರ ಗುಂಪು. ಮುಂದೆ ಸ್ವಲ್ಪೇ ದೂರದಲ್ಲೊಂದು ಪಾರ್ಕು. ಚಳಿಗಾಲದ ಎಲೆ ವಿಹೀನ ಮರದಲ್ಲಿ ಒಂದು ಕಾಗೆ ಕುಳಿತಿತ್ತು. ಇವೆಲ್ಲದರ ನಡುವೆ ಮಿನುವಿನ ಜನ ಎಲ್ಲಿದ್ದಾರೆ ಎಂದು ಯೋಚಿಸಲು ಶ್ಯಾಮನಿಗೆ ಸಾಧ್ಯವಾಗಲಿಲ್ಲ. ಶ್ಯಾಮ ಮಿನುವನ್ನು ಕೇಳಿದ್ದ- ನಿನ್ನ ಕಡೆಯವರು ಎಲ್ಲಿದ್ದಾರೆ? ಮಿನು ನಕ್ಕು ಹೇಳಿದ್ದ "ಅವರೆಲ್ಲಾ ಗುಂಪಿನ ಮಧ್ಯೆ ಸೇರಿಕೊಂಡು ಬಿಟ್ಟಿದ್ದಾರೆ. ನಿನ್ನಿಂದ ಅವರನ್ನು ಕಾಣಲು ಸಾಧ್ಯವಾಗುವುದಿಲ್ಲ. ಅವರಿಗಿಲ್ಲದ ಉಸಾಬರಿ ನಿನಗ್ಯಾಕೆ? ಬಾ ನಿನ್ನನ್ನು ನಾನು ತಣ್ಣನೆಯ ಬಸ್ಸಿನಲ್ಲಿ ಹತ್ತಿಸಿ ಬರುತ್ತೇನೆ." ಶ್ಯಾಮನಿಗೆ ಅರ್ಥವಾಯಿತು- ಮಿನುವಿನದೇ ಪ್ರತ್ಯೇಕವಾದ ಒಂದು ಸಮಾಜವಿದೆ, ಅಲ್ಲಿ ಶ್ಯಾಮನಂತಹ, ಪ್ರಾಮಾಣಿಕ, ನೀತಿ ಪಾರಾಯಣ ವ್ಯಕ್ತಿಗಳಿಗೆ ಸ್ಥಾನವಿಲ್ಲ. ಅಲ್ಲಿ ಶ್ಯಾಮ, ಮಿನುವಿನೆದುರು ಇನ್ನೂ ಚಿಕ್ಕ ಹಸುಗೂಸು. ಶ್ಯಾಮ ಹುಡುಗತನದಲ್ಲಿ, ಮಿನುವಿನ ಅದೆಷ್ಟು ಗುಟ್ಟಿನ

ವಿಷಯಗಳಲ್ಲಿ ಪಾಲುಗೊಂಡಿದ್ದನೋ ಏನೋ? ಇಷ್ಟು ದಿನಗಳ ಅಂತರದಲ್ಲಿ ಗುರುತು ಸಿಗದ ಮಿನು ಹಾಗೂ ಶ್ಯಾಮನ ನಡುವೆ ಅದೆಷ್ಟು ಗುಟ್ಟಿನ ವಿಷಯ ತುಂಬಿದೆಯೋ ಅದರ ಬಗ್ಗೆ ಅರಿತವರ್ಯಾರು? ಶ್ಯಾಮನಿಗೆ ಮಿನುವಿನಿಂದ ದೂರ ಹೊರಟು ಹೋಗಲು ಸಾಧ್ಯವಾಗಲಿಲ್ಲ. 'ಮಿನುವಿಗೆ ಒಂದಷ್ಟು ಒಳ್ಳೇ ಮಾತು ಹೇಳಬೇಕು?' ಎಂದು ಶ್ಯಾಮನಿಗನಿಸಿತು. ಶ್ಯಾಮ ಸ್ವಲ್ಪ ಯೋಚಿಸಿ ಮಿನುವಿಗೆ ಹೇಳಿದ್ದ 'ಮಿನು ನಿನಗೆ ಒಂದು ಮಾತು ಹೇಳಬೇಕೂಂತ'. ಮಿನು ಹುಬ್ಬು ಕೊಂಕಿಸಿ ಕೇಳಿದ್ದ ಏನು? ಶ್ಯಾಮ "ಹೇಳಲು ಏನೋ ಇದೆ." ವಿಕಾರ ಹೀನವಾದ ಧ್ವನಿಯಲ್ಲಿ ಮಿನು, ಶ್ಯಾಮನನ್ನು ಒಮ್ಮೆ ದಿಟ್ಟಿಸಿ ಹೇಳಿದ್ದ "ಸರಿ ಹಾಗಿದ್ದರೆ, ಒಂದು ದಿನ ನಿಮ್ಮ ಮನೆಗೆ ಬೆಳಗಾಗಿ ಎದ್ದು ಬರುತ್ತೇನೆ. ಇಬ್ಬರೂ ಸೇರಿ ಮಾಂಸದ ಅಡಿಗೆ ಮಾಡೋಣವಂತೆ. ಆಮೇಲೆ ಮಧ್ಯಾಹ್ನ ಊಟ ಮಾಡಿ, ನಿನ್ನ ಪಕ್ಕಾನೇ ಕುಳಿತು, ನೀನು ಹೇಳುವುದನ್ನೆಲ್ಲಾ ಕೇಳುತ್ತಾ ಕುಳಿತಿರುತ್ತೇನೆ" ಎಂದು. ಶ್ಯಾಮನ ಗಮನವೆಲ್ಲಾ ಸ್ವಲ್ಪ ದೂರದಲ್ಲಿ ನಿಂತಿದ್ದ ಇಬ್ಬರ ಮೇಲೇ ಕೇಂದ್ರಿತವಾಗಿತ್ತು. ಶ್ಯಾಮ ಮಿನುವಿನ ಮಾತನ್ನು ಕೇಳಿಸಿಕೊಂಡಿರಲಿಲ್ಲ. ಆ ಇಬ್ಬರು ವ್ಯಕ್ತಿಗಳು ಒಮ್ಮೆಯಾದರೂ ಮಿನು ಅಥವಾ ಶ್ಯಾಮನ ಕಡೆ ತಿರುಗಿ ನೋಡಿರಲಿಲ್ಲ. ಗಾಳಿಯಿಂದ ಒಮ್ಮೆಲೇ ಪ್ರತ್ಯಕ್ಷರಾದವರಂತೆ ಅವರಿಬ್ಬರೂ ಅಲ್ಲಿ ನಿಂತಿದ್ದರು. ಸಾಧಾರಣವಾದ ಪಂಚೆ ಹಾಗೂ ಶರ್ಟು ಅವರಿಬ್ಬರ ಉಡುಪಾಗಿತ್ತು. ಅವರಿಬ್ಬರೂ ತಮ್ಮ ಶರ್ಟಿನ ಕೈಗಳನ್ನು ಮೇಲೆತ್ತಿ ಮಡಿಸಿಕೊಂಡಿದ್ದರು. ಅವರಿಬ್ಬರದೂ ಸಾಧಾರಣವಾದ ಮುಖ. ಶ್ಯಾಮನಿಗೆ ಅವರಿಬ್ಬರೂ ನಿಂತುಕೊಂಡಿರುವ ಭಂಗಿಯನ್ನು ನೋಡಿಯೇ ಅನ್ನಿಸಿತು, ಅವರು ತುಂಬಾ ನಿಷ್ಠುರರು ಎಂದು. ಇವರೂ ಮಿನುವಿನ ಗುಂಪಿಗೇ ಸೇರಿರಬೇಕು. ಅವರಿಬ್ಬರ ಆಲಸ್ಯ ಭಂಗಿ ಕೇವಲ ತೋರ್ಪಡಿಕೆಗೆ ಮಾತ್ರ. ದಿಟವಾಗಿ ನೋಡಿದರೆ, ಬೇರೆ ಯಾವುದೋ ಉದ್ಯಮದಲ್ಲಿ ಅವರು ತುಂಬಾ ನಿಪುಣರು ಎಂದು ಗೊತ್ತಾಗುತ್ತದೆ.

ಶ್ಯಾಮ ಮಿನುವಿನ ಕಡೆ ನೋಡಿ ನಕ್ಕು, ಅಲ್ಲಿ ದೂರದಲ್ಲಿ ನಿಂತಿರುವ ಅವರನ್ನು ಬೊಟ್ಟು ಮಾಡಿ ತೋರಿಸಿ 'ಅವರಿಬ್ಬರೇನಾ?' ಎಂದು ಕೇಳಿದ್ದ. ತಟ್ಟನೆ ಮಿನು ತನ್ನ ಬಲಿಷ್ಠ ಕೈಗಳಿಂದ, ಶ್ಯಾಮನ ಕೈ ಸರಿಸಿ "ಹುಂ ಅವರಿಬ್ಬರೇನೇ, ಹಾಗೆಲ್ಲ ಕೈ ಮಾಡಿ ತೋರಿಸಬೇಡ. ಇನ್ನೂ ನಾಲ್ಕು ಜನ ಇದ್ದಾರೆ. ನಿನಗೆ ಒಳ್ಳೆ ದೂರದೃಷ್ಟಿ ಇದೆ ಕಣೋ ಶ್ಯಾಮ " ಎಂದ ಮಿನು ಚಂಚಲವಾಗಿ ನಗುತ್ತಾ. ಶ್ಯಾಮ ಮಿನುವಿನ ಪ್ರಶ್ನೆಗೆ ಉತ್ತರ ಹುಡುಕುವವನಂತೆ, ಸಾವಧಾನವಾಗಿ ನಾಲಕ್ಕೂ ಕಡೆ ದೃಷ್ಟಿಹರಿಸುತ್ತಾ ಮಿನುವಿಗೆ ಹೇಳಿದ್ದ "ನೋಡ್ತಾ ಇರು, ಆ ನಿನ್ನ ನಾಲಕ್ಕೂ ಜನರನ್ನೂ ಬೇಕಾದರೆ ಈ ಗುಂಪಿನಿಂದ ಹೊರತೆಗೆದು ತೋರಿಸುತ್ತೀನಿ". ಮಿನು ತನ್ನ ಶಕ್ತಿಯುತ ಕೈಗಳಿಂದ ಶ್ಯಾಮನನ್ನು ಹಿಡಿದು ಹೇಳಿದ್ದ. "ಸ್ವಲ್ಪ ದೂರ ನಡೆದುಕೊಂಡು ನನ್ನ ಜೊತೆ ಬಾ, ನಾನೇ ನಿನಗೆ ಆ ನನ್ನ ನಾಲಕ್ಕು ಜನರನ್ನು ತೋರಿಸುತ್ತೇನೆ" ಎಂದು ಹೇಳಿ ದೊಡ್ಡ ಹೆಜ್ಜೆ ಹಾಕುತ್ತಾ ಮುನ್ನಡೆದ. ಶ್ಯಾಮ ಮೆಲ್ಲನೆ ಅವನನ್ನು ಹಿಂಬಾಲಿಸಿದ. ಒಂದೆರಡು ಹೆಜ್ಜೆ ಮುಂದೆ ಹೋಗಿ, ಮಿನು ಹಿಂತಿರುಗಿ ಶ್ಯಾಮನಿಗೆ ಹೇಳಿದ 'ಅಲ್ಲಿ ನೋಡು ಶ್ಯಾಮ.' ಶ್ಯಾಮ ಮಿನುವಿನ

ಪಕ್ಕ ಬಂದು ನಿಂತುಕೊಂಡು 'ಎಲ್ಲಿ' ಎಂದು ಕೇಳಿದ್ದ. 'ಕಣ್ಸನ್ನೆಯಲ್ಲೇ ಮಿನು ಶ್ಯಾಮನಿಗೆ ರಸ್ತೆಯ ಫುಟ್‌ಪಾತ್ ತೋರಿಸಿ ಹೇಳಿದ. ಈ ಚಹದ ಅಂಗಡೀ ಹತ್ತಿರ ಇಬ್ಬರು ನಿಂತುಕೊಂಡಿದಾರೆ ನೋಡು. ಒಬ್ಬ ಕುಳ್ಳಗೆ, ಇಟ್ಟಿಗೆ ಬಣ್ಣದ ಪುಲ್ ಓವರ್ ಹಾಕಿಕೊಂಡು, ಪ್ಯಾಂಟಿನ ಜೇಬಿನಲ್ಲಿ ಕೈ ಇಳಿಬಿಟ್ಟುಕೊಂಡು ನಿಂತುಕೊಂಡಿದ್ದಾನೆ. ಮತ್ತೊಬ್ಬ, ಎತ್ತರ ದಷ್ಟಪುಷ್ಟವಾಗಿದ್ದಾನೆ. ರೌಂಡ್‌ಕಾಲರ್ ಶರ್ಟು ಹಾಕಿಕೊಂಡು, ನನ್ನ ತರಹನೇ ಕರೀ ಪ್ಯಾಂಟ್ ಹಾಕಿಕೊಂಡಿದ್ದಾನೆ.

ಶ್ಯಾಮನಿಗೆ ನಿಧಾನವಾಗಿ ಅರ್ಥವಾಯಿತು. ಯಾರಿಗೋಸ್ಕರವಾಗಿಯೋ ಏನೋ ವಿಶೇಷವಾಗಿ ಜಾಲ ಸಿದ್ಧವಾಗಿದೆ. ಆ ರೀತಿ ಯೋಚಿಸುವಾಗ ಅವನ ಕೈಕಾಲು ತಣ್ಣಗಾಯಿತು. ಆದರೂ ತನ್ನ ಸ್ವಾಭಾವಿಕ ಧ್ವನಿಯನ್ನು ಕಳೆದುಕೊಳ್ಳದೆ ಮಿನುವನ್ನು ಕೇಳಿದ 'ಮತ್ತೆ ಇನ್ನಿಬ್ಬರು ಎಲ್ಲಿದ್ದಾರೆ?' ಮಿನು ಸ್ವಲ್ಪ ಮುಂದೆ ಹೋಗಿ, ಮನೆಗೆ ಹೊಸದಾಗಿ ಆಗಮಿಸಿದ ಅತಿಥಿಗಳಿಗೆ, ಮನೆಯ ಯಜಮಾನ ಮನೆ ತೋರಿಸುವಂತೆ ಶ್ಯಾಮನನ್ನು ಈ ಕಡೆ ಬಾ ಎಂದು ಕರೆದು, ಪಾರ್ಕಿನ ಹತ್ತಿರದ ಓಣಿ ತೋರಿಸಿ, ಬಹು ಮೆಲ್ಲಗೆ ಹೇಳಿದ 'ಇವತ್ತು ಯಾರನ್ನು ಹಿಡಿಯಲಾಗುತ್ತದೋ ಅವರು ಇರುವದು ಈ ಓಣಿಯಲ್ಲೇ. ಆ ಓಣಿ ಮುಂದುಗಡೆ ನೋಡು, ಒಂದು ಟ್ಯಾಕ್ಸಿ ಸಿದ್ಧವಾಗಿ ನಿಂತಿದೆ, ಹಿಂದಿನ ಸೀಟಿನಲ್ಲಿ ಒಬ್ಬ ಕುಳಿತಿದ್ದಾನೆ. ಇಲ್ಲಿಂದ ನೋಡಿದರೆ, ಅವನು ಕುಳಿತಿರುವುದು ನಿನಗೆ ಕಾಣಿಸುವುದಿಲ್ಲ. ಶ್ಯಾಮ ಉಸಿರು ಬಿಗಿ ಹಿಡಿದು ಕೇಳಿದ್ದ 'ಮತ್ತೊಬ್ಬ?.' ಮಿನು ತಲೆ ಅಲ್ಲಾಡಿಸಿ ಹೇಳಿದ 'ಅವನು ಇಲ್ಲಿಲ್ಲ, ಅವನು ನಮ್ಮ ಗಿರಾಕಿಯನ್ನು ಪುಸಲಾಯಿಸಿ ಬೆದರಿಸಿ ಕರೆದುಕೊಂಡು ಬರೋದಿಕ್ಕೆ ಹೋಗಿದ್ದಾನೆ. ಶ್ಯಾಮನಿಗೆ ಒಮ್ಮೆಲೆ ಮೈ ಬೆಚ್ಚಗಾಗಿ, ತಲೆ ಸಿಡಿದು, ಮೈಯೆಲ್ಲಾ ಥರಥರ ಚಳಿ ಬಂದವರಂತೆ ನಡುಗಿದಂತಾಗಿತ್ತು. ಈ ಗುಂಪಿನ ಮಧ್ಯೆ ಇಲ್ಲಿ ಮಿನು ಒಂದು ರಂಗಭೂಮಿಯನ್ನು ಸೃಷ್ಟಿಸಿದ್ದಾನೆ. ಆ ರಂಗಭೂಮಿಯ ಮೇಲೆ ನಾಟಕ ನಡೆಯಲೂಬಹುದು, ಅಥವಾ ನಡೆಯದೆಯೇ ಇರಲೂ ಬಹುದು. ಮಿನುವಿನ ವ್ಯವಹಾರಗಳಲ್ಲಿ ರಕ್ತಪಾತವಾಗುವ ಸಂಭವವೇ ಹೆಚ್ಚು. ಆದರೂ ಶ್ಯಾಮ ಪೆದ್ದನಂತೆ ಮಿನುವನ್ನು ಕೇಳಿದ್ದ, 'ಮಿನು ಇವತ್ತು ನೀವು ಯಾರನ್ನು ಹಿಡಿಯುತ್ತೀರಾ? ಮಿನು ನಕ್ಕಿರಲಿಲ್ಲ, ಹುಬ್ಬು ಕೊಂಕಿಸಿರಲಿಲ್ಲ, ಆ ಕ್ಷಣದಲ್ಲಿ ಅವನ ತೀಕ್ಷ್ಣವಾದ ಕಣ್ಣುಗಳು ಭಯ ಹುಟ್ಟಿಸುವಂತಿರಲಿಲ್ಲ. ಏನೋ ಒಂದು ರೀತಿಯ ಅಸಹಾಯಕ ಭಾವದಿಂದ, ತುಟಿ ಒಂದು ರೀತಿ ಕೊಂಕಿಸಿ ಮಿನು ಹೇಳಿದ್ದ 'ಅವರ ಗುರುತು ಪರಿಚಯ ನನಗೂ ಇಲ್ಲ.' ಶ್ಯಾಮ ಮನದಲ್ಲೇ ಪ್ರಶ್ನಿಸಿಕೊಂಡ ಅಂದರೆ?

ಮಿನು ತನ್ನ ಗಲ್ಲದ ಮೇಲಿನ ಕೂದಲನ್ನು ಬೆರಳಿನಿಂದ ತಿರುವುತ್ತಾ ಬಹಳ ಉದಾಸೀನ ಹಾಗೂ ಅನ್ಯಮನಸ್ಕನಾಗಿ ನಿಂತಿದ್ದ. ಸ್ವಲ್ಪ ಹೊತ್ತಿನ ನಂತರ ಅವನು ಶ್ಯಾಮನ ಕಡೆ ತಿರುಗಿ ಹೇಳಿದ್ದ 'ಶ್ಯಾಮ ಮತ್ತೆ ಇನ್ನೆಂದಾದರೂ ಸಿಗೋಣವಂತೆ, ಇವತ್ತು ನೀನು ಮನೆಗೆ ಹೋಗು'.

ಶ್ಯಾಮ ಮರುಮಾತನಾಡದೆ ಮಿನುವಿನಿಂದ ಹಿಂತಿರುಗಿ ಮನೆ ಕಡೆ ಹೊರಟ. ಸ್ವಲ್ಪ ದೂರ ಹೋಗಿ ಹಿಂತಿರುಗಿ ನೋಡಿದ್ದ, ಮಿನು ಕೂಡಾ ಇವನನ್ನೇ ಅಸ್ಪಷ್ಟ ಕಣ್ಣುಗಳಿಂದ ನೋಡುತ್ತಿದ್ದ.

ಶ್ಯಾಮ ಹಿಂತಿರುಗಿ ಬಂದು ಮಿನುವನ್ನು ಪ್ರಶ್ನಿಸಬೇಕು ಎಂದುಕೊಂಡ. 'ಆ ಅವರಿಬ್ಬರು ನಿನಗೆ ಎಂಥಾ ಸ್ನೇಹಿತರು ಹಿಂದೊಮ್ಮೆ ನಾನು ನಿನ್ನ ಸ್ನೇಹಿತನಾಗಿದ್ದಂತೆಯೆ?' ಮಿನು ಅವನನ್ನು ಕೌತುಕದಿಂದ ನೋಡಿ ತಲೆ ಅಲ್ಲಾಡಿಸಬಹುದು 'ಹುಂ' ಎಂದು.

ಶ್ಯಾಮನಿಗೆ ಹೊಟ್ಟೆ ತೊಳಲಿದಂತಾಗುತ್ತಿತ್ತು. ಎಲ್ಲವನ್ನು ಸರಿಯಾಗಿ ನೋಡಿಕೊಂಡೇ ಹೋಗುವ ಮನಸ್ವಾಸ್ಥ್ಯ ಅವನಲ್ಲಿ ಉಳಿದಿರಲಿಲ್ಲ. ಆದರೂ ಮಿನುವಿನ ಕಣ್ಣುಗಳಲ್ಲಿ ಅಸಹಾಯಕ ಭಾವವಿರುವುದನ್ನು ಶ್ಯಾಮ ಗಮನಿಸಿದ. ಶ್ಯಾಮ ತನಗೆಲ್ಲಾ ಅರ್ಥವಾದಂತೆ ತಲೆ ಅಲ್ಲಾಡಿಸಿದ್ದ. ಅನಂತರ ಮಿನುವಿಗೆ ಹೇಳಿದ್ದ 'ಸರಿ ನಾನಿನ್ನು ಬರುತ್ತೇನೆ. ಮಿನು ಮೆಲ್ಲನೆ ತಲೆ ಅಲ್ಲಾಡಿಸಿ ಸಮ್ಮತಿ ಸೂಚಿಸಿದ್ದ. ಶ್ಯಾಮ ಮಿನುವನ್ನು ಕೇಳಿದ್ದ. ಸರಿ ಹಾಗಿದ್ದರೆ ನೀನು ಬರುತ್ತೀ ಅಲ್ವಾ ರಜೆಯ ದಿನ ಬಾ. ಮಿನು ತಲೆ ಅಲ್ಲಾಡಿಸಿ ಹುಂ ಎಂದು ನಕ್ಕು ಪುನಃ ಹೇಳಿದ್ದ 'ಒಂದು ವೇಳೆ ಅಷ್ಟು ದಿನದವರೆಗೂ ಇದ್ದರೆ' ಈ ಮಾತು ಶ್ಯಾಮನನ್ನು ಮಿನುವಿನಿಂದ ಬಹುದೂರ ದಬ್ಬಿದಂತಾಯಿತು. ಅವನು ಬೇಗನೆ ಬಸ್ ಸ್ಟಾಪಿನ ಕಡೆ ನಡೆದಿದ್ದ. ಈ ಸಲ ಮತ್ತೊಮ್ಮೆ ಹಿಂತಿರುಗಿ ಅವನು ನೋಡಿರಲಿಲ್ಲ. ಚರ್ಚಿನ ರೇಲಿಂಗ್ಸ್‌ನ್ನು ಹಿಡಿದುಕೊಂಡು ಅದೇ ರೀತಿ ಉದಾಸೀನ ಭಂಗಿಯಲ್ಲಿ ಅವರಿಬ್ಬರು ನಿಂತುಕೊಂಡಿದ್ದಾರೆ. ಅವರಿಬ್ಬರೂ ಶ್ಯಾಮನನ್ನು ತಿರಸ್ಕಾರದ ದೃಷ್ಟಿಯಿಂದ ನೋಡಿದರು. ಶ್ಯಾಮ ಅವರಿಂದ ಮುಖ ತಿರುಗಿಸಿಕೊಂಡು ಬಸ್ ಸ್ಟಾಪಿಗೆ ಬಂದು ನಿಂತುಕೊಂಡ.

ಗುಂಪಿನ ಮಧ್ಯೆ ಅಷ್ಟೇನು ಚಳಿ ಇರಲಿಲ್ಲ. ಆದರೂ ಶ್ಯಾಮನ ಕೈಕಾಲು ತುಂಬಾ ತಣ್ಣಗಾಗಿದ್ದವು. ಎದೆಯಲ್ಲಿ ಅದೇ ಡವಡವ. ಯಾರೋ ಓಡಿ ಹೋಗುತ್ತಿರುವಂತೆ, ಯಾರೋ ತಪ್ಪಿಸಿಕೊಳ್ಳುತ್ತಿರುವಂತೆ, ಡವಡವ ಶಬ್ದ. ಉಸಿರಾಡುವುದು ಕಷ್ಟವೆನಿಸಿತು. ಎದೆ ಹೊಡೆದುಕೊಳ್ಳುವುದು ಅವನಿಗೆ ಹಳೆಯ ರೋಗ. ಬಸ್ ಸ್ಟಾಪಿನಲ್ಲಿ ಜನರ ಗುಂಪು. ಹಿಂದೆ ಅಂಗಡಿಯ ದೀಪ ಎಡ ಬಲಗಳಲ್ಲಿ ದೊಡ್ಡ ದೊಡ್ಡ ಮರಗಳು. ಎಲ್ಲಾ ತೀರಾ ಜೀವವಿಲ್ಲದಂತಿದೆ. ಈಗ ಸ್ವಲ್ಪ ಹೊತ್ತಿನ ಮೊದಲು ಅವನು ಆಫೀಸಿನಿಂದ ಬಂದಿದ್ದಾನೆ. ಗುಂಪಿನ ನಡುವೆ ನುಗ್ಗಿ ಬಸ್ ಹತ್ತಿದ್ದಾನೆ. ಮಿನು ಅವನನ್ನು ಹಿಂದಕ್ಕೆ ಹಿಡಿದೆಳೆದು ಕೆಳಗಿಳಿಸಿದ್ದಾನೆ. ಅಲ್ಲಿಯವರೆಗು ಎಲ್ಲಾ ಸ್ವಾಭಾವಿಕವಾಗಿತ್ತು. ಆದರೆ ಈಗ ಸೆಟೆದು ಹೋಗುವಂತೆ ಚಳಿ. ಹೊಡೆದುಕೊಳ್ಳುವ ಅವನ ಅನಿಶ್ಚಿತ ಎದೆ ಉದ್ವೇಗದಿಂದ ತುಂಬಿದೆ ಎಂದೆನಿಸಿತು. ಬಾಲ್ಯ ಕಾಲದ ಸ್ನೇಹಿತ ಮಿನು ಹಾಗೂ ಅವನ ಸಂಗಾತಿಗಳ ಪರಿಚಯ ಯಾವ ರೀತಿ ಇಲ್ಲವೇನೋ ಎಂಬಂತೆ. ಅದೇ ರೀತಿ ಇದೊಂದು ಪರಿಚಯವಿಲ್ಲದ ಪಟ್ಟಣ ಎಂದು ಅವನಿಗನ್ನಿಸಿತು.

ಮಿನುವಿನಿಂದಾಗಿ ಆ ದಿನ ಸಂಜೆ ತುಂಬಾ ಬೇಸರವಾಗಿತ್ತು. ಬಸ್ ಹತ್ತಿದ ಮೇಲೂ ಅವನು ಅಷ್ಟೇನೂ ಜಾಗರೂಕನಾಗಿರಲಿಲ್ಲ. ಬಸ್ಸಿನ ಹಿಡಿ ಹಿಡಿದುಕೊಂಡು ಜೋಲಿಯಾಡುತ್ತಿದ್ದ. ಅವನನ್ನು ಬಳಸಿದ ಹತ್ತಾರು ಕೈಗಳ ಸ್ಪರ್ಶದ ಅನುಭವ ಅವನಿಗಾಗುತ್ತಿತ್ತು. ಅದರಲ್ಲಿ ಯಾರ್‍ಯಾರದು ಯಾವ ಯಾವ ತರಹದ ಉದ್ದೇಶ ಎನ್ನುವುದನ್ನು ಅರ್ಥಮಾಡಿಕೊಳ್ಳಲು

ಅವನು ಪ್ರಯತ್ನ ಕೂಡಾ ಮಾಡಿರಲಿಲ್ಲ.

ಅನಂತರ ಅನೇಕ ದಿನಗಳವರೆಗೂ ಗುಂಪಿನ ಮಧ್ಯೆ ಅನುಮಾನದ ದೃಷ್ಟಿಯಿಂದ ಅವನು ನೋಡಿದ್ದಾನೆ. ಅವನಿಗೆ ನೆನಪಾಯ್ತು. ಅವರ ಮಧ್ಯೆ ಯಾರಾದರೂ ಒಣಗಿದ ಮುಖದ, ದಯಾಹೀನ ವ್ಯಕ್ತಿ ಮೈ ಬಳಸಿ ಒತ್ತಿ ಹಿಡಿದರೆ ಅವರನ್ನು ಸಿಟ್ಟಿನಿಂದ ನೋಡಿದ್ದಾನೆ.

ಎದೆಯೊಳಗೇ ಅದೇ ಶಬ್ದ. ಯಾರೋ ದಡ ದಡ ಓಡುತ್ತಿರುವಂತೆ. ಸ್ವಲ್ಪ ದೂರದಲ್ಲೇ ಎಲ್ಲೋ ಮಿನುವಿನ ಅದೇ ಆರು ಜನ ಸಂಗಾತಿಗಳು, ಗಾಳಿಯೊಂದಿಗೆ ಒಂದಾಗಿ ನಿಶ್ಶಬ್ದದಿಂದ ಎದುರು ನೋಡುತ್ತಿದ್ದಾರೆ. ಆದರೂ ಈ ಭಯ ಅಕಾರಣವಾದದ್ದು ಎಂದು ಅವನಿಗೆ ಗೊತ್ತು. ನಿಜವಾಗಿ ನೋಡಿದರೆ ಅವನ ಒಂಟಿ, ಲೋಭವಿಲ್ಲದ ಜೀವನದಲ್ಲಿ ಅವನಿಗೆ ಯಾರ ಮೇಲೂ ಸೇಡು ತೀರಿಸಿಕೊಳ್ಳಬೇಕೆಂಬ ಚಪಲವಿಲ್ಲ. ಹಾಗಿರುವಾಗ ಬೇರೆಯವರು ಯಾಕೆ ಇವನ ಮೇಲೆ ಸೇಡು ತೀರಿಸಿಕೊಂಡಾರು?

ಇಪ್ಪತ್ಮೂರು, ಇಪ್ಪತ್ನಾಲ್ಕು ವರ್ಷದ ಅದೇ ಪುಕ್ಕಲು, ಹಾಗೂ ದಯಾಳೂ ಶ್ಯಾಮನನ್ನು ಯಾರೂ ಮುಂದೆಂದೂ ನೋಡಲಾಗುವುದಿಲ್ಲ. ಆ ರೀತಿ ಮನಸ್ಸಿಗೆ ಅನಿಸಿದ ಕೂಡಲೇ ಶ್ಯಾಮ ಮನದಲ್ಲೇ ನಕ್ಕ. ಸ್ಟೇಟ್ ಬಸ್ಸಿನ ಕಿಟಕಿಯಿಂದ ಹೊರಗೆ ಇಣಿಕಿ ಅವನು ಗುಂಪಿನ ಮಧ್ಯೆ ಅದೇ ಶ್ಯಾಮ ನಡೆದು ಹೋಗುತ್ತಿರುವಂತೆ ಕಂಡ. ಆ ಶ್ಯಾಮ ಓಣಿಯ ಭಿಕ್ಷುಕನ ತಟ್ಟೆಯಲ್ಲಿ ಒಂದೆರಡು ಕಾಸನ್ನು ಬಿಸಾಡಿದ್ದನ್ನು ನೋಡಿದ. ಆ ರೀತಿ ಹೋಗುವಾಗ, ಎಲ್ಲರೂ ಅಲಕ್ಷ್ಯದಿಂದ ಇರುವಾಗ ಅವನು ಸ್ವಲ್ಪ ತಲೆ ತಗ್ಗಿಸಿ, ಕೈ ಎರಡೂ ಮಡಿಚಿಕೊಂಡು ನಡೆದು ಹೋಗ್ತಾನೆ. ಅಥವಾ ಬಸ್ಸಿನ ಬಾಗಿಲಲ್ಲೇ ಕಿಸೆಗಳ್ಳ ಸಿಕ್ಕಿ ಬೀಳುತ್ತಾನೆ. ಆ ಗುಂಪಿನ ಮಧ್ಯೆ ವೇಗವಾಗಿ ಯಾರೂ ಜನ ಇಲ್ಲದ ಓಣಿಯೊಳಗೆ ಓಡಿ ಹೋಗ್ತಾನೆ. ಈ ರೀತಿ ಯೋಚಿಸುತ್ತಲೇ ಶ್ಯಾಮ ಸ್ವಲ್ಪ ನಕ್ಕು ಮನದಲ್ಲೇ ಹೇಳಿಕೊಂಡ– ಓ ಶ್ಯಾಮ ದಿ ಕೈಂಡ್ ಹಾರ್ಟೆಡ್, ತುಂಬಾ ದಿನಗಳು ಉರುಳುತ್ತವೆ. ಮಿನುವಿನ ಭೇಟಿಯಾಗುವುದಿಲ್ಲ. ಕಾರಣ ಕ್ರಮವಾಗಿ ಶ್ಯಾಮನ ನೌಕರಿ ಬದಲಾಗಿದೆ. ಅವನ ಓಡಾಟ ಈಗ ಕೇವಲ ನಿರ್ದಿಷ್ಟವಾದ ಒಂದೆರಡು ರಸ್ತೆಗಳಿಗೆ ಮಾತ್ರ ಸೀಮಿತಗೊಂಡಿದೆ. ಆಫೀಸು, ರೆಸ್ಟೋರೆಂಟ್, ಬಾರ್ ಅಥವಾ ದಕ್ಷಿಣದ ಒಂದು ಒಳ್ಳೆಯ ಬಡಾವಣೆಯ ಅವನ ಚಿಕ್ಕ ಮನೆ. ಶ್ಯಾಮ ಸುಖವಾಗಿ ಇದ್ದಿದ್ದರ ಮಧ್ಯೆಯೇ ಸಿಕ್ಕಿಕೊಂಡಿದ್ದ. ಅದೇ ಮಿನು ತಿರುಗಾಡೋದು ಕೊಳಕುಗಳಲ್ಲಿ, ಓಣಿಗಳಲ್ಲಿ, ಕೊಳಕು ಚಹದಂಗಡಿಗಳಲ್ಲಿ ಜೂಜು ಕಟ್ಟೆಗಳಲ್ಲಿ, ಪಾರೂಲ್ ಅಥವಾ ಚಂಪಾಳ ಮನೆಗಳ ಓಣಿಗಳಲ್ಲಿ, ಹತ್ತಿರ ಹತ್ತಿರದಲ್ಲಿಯೇ ಇದ್ದರೂ ಅವರಿಬ್ಬರೂ ಯಾವ ರೀತಿ ಸ್ಟೇಟ್ ಬಸ್ಸಿನ ಎಡಗಡೆ ಕುಳಿತುಕೊಂಡು ನೋಡಿದರೆ ಒಂದು ತರಹ ಕಾಣಿಸುತ್ತದೋ ಅದೇ ಬಲಗಡೆ ಕುಳಿತರೆ ಬೇರೆ ತರಹ ಕಾಣಿಸುತ್ತೆ. ಅದೇ ಮ್ಯಾನ್ ಹೋಲಿನ ಒಳಗಿನಿಂದ ತಲೆ ಎತ್ತಿ ನೋಡಿದರೆ ಆ ರೀತಿ ಕಾಣಿಸೋಲ್ಲ. ನಿಜವಾಗಿ ನೋಡಿದರೆ ದಿಕ್ಕುಗಳ ಭೇದ ಅಥವಾ ಮೇಲೆ ಅಥವಾ ಕೆಳಗಿನಿಂದ ನೋಡುವ ಭೇದವಲ್ಲ. ಒಂದು ತರಹದ ಕಲ್ಕತ್ತೆ ಮತ್ತೊಂದು ತರಹ ಕಲ್ಕತ್ತೆಯಲ್ಲಿ ಬೆಸೆದುಹೋಗಿದೆ. ಈಗಲೇ ಹೋಗಿ ಮಿನುವಿನೆದುರು ನಿಂತುಕೊಳ್ಳಬೇಕೆಂದು ಶ್ಯಾಮನಿಗೆ

ಇಚ್ಛೆಯಾಯಿತು. ಅವನ ಬೆನ್ನಿಗೆ ಗುದ್ದಿ ಕೇಳಬೇಕು ಹಾಕಿ ಹಾಕಿ ಮಿನು ಹೇಗಿದ್ದೀಯಾ ಗುರು? ಧ್ವನಿ ಕುಗ್ಗಿಸಿ – ನನ್ನನ್ನು ಗುಂಪಿಗೆ ಸೇರಿಸಿಕೊಳ್ಳುತ್ತೀಯಾ ಗುರು? ನೋಡ್ತಾ ಇರು ಬಡ್ಡೀ ಮಗನೇ ನಾನು ಎರಡೂ ಕೈಗಳಿಂದ ಮೆಷಿನ್ ಅಥವಾ ಸಲಾಕೆಯನ್ನು ಚಲಾಯಿಸುತ್ತೇನೆ. ನೋಡ್ತಾ ಇರು ಯಾವ ರೀತಿ ಸೋಡಾ ಬಾಟಲಿಗಳು ಚಲಿಸುತ್ತವೆ ಅನ್ನೋದನ್ನ. ಅನಂತರ ಕಳ್ಳತನದಿಂದ ಚಹದಂಗಡಿಯ ಹಿಂದಿರುವ ಮನೆಯಲ್ಲಿ ಕತ್ತಲಲ್ಲಿ ಮಿನುವಿನ ಎದುರೇ ಕುಳಿತು ಅಂತರಂಗದ ಧ್ವನಿಯಲ್ಲಿ – ಏನು ಬೀಳುತ್ತೆ ಗುರು? ಯಿಟ್ಟೋ ಅಥವಾ ಆಂಟಿಕ್ಕೋ? ಎಂದು ಕೇಳಬೇಕೆಂದು ಶ್ಯಾಮನಿಗೆ ಇಚ್ಛೆಯಾಯಿತು. ಮಿನುವಿಗೆ ಈ ಭಾಷೆ ಅರ್ಥವಾಗುತ್ತೆ ಎನ್ನುವುದು ಶ್ಯಾಮನಿಗೆ ಗೊತ್ತು. ಅಷ್ಟೇ ಏಕೆ ಇದು ಮಿನವಿನದೇ ಭಾಷೆ. ಯಿಟ್ ಎಂದರೆ ಗಾಂಜಾ ಮತ್ತೆ ಆಂಟಿಕ್ ಎಂದರೆ ಹೆಂಡ. ಮತ್ತು ಏರಿದಂತೆ ಶ್ಯಾಮ ಮೆಲ್ಲನೆ ತಲೆ ತೂಗುತ್ತಾನೆ – ಇಲ್ಲ ಗುರು ನೀನು ಸೋತು ಹೋಗಿದ್ದಿ. ನಿನಗೆ ವಯಸ್ಸಾಗುತ್ತಾ ಬಂದಿದೆ. ನನಗಿಂತ ನೀನು ಆರು ವರ್ಷಕ್ಕೆ ದೊಡ್ಡವನು. ನನಗೀಗ ಇಪ್ಪತ್ತೊಮ್ಮರು ಅಂತ ಕಾಣುತ್ತೆ. ಹಾಗಾದ್ರೆ ನಿನಗೆ – ಇರಲಿ ಬಿಡೋ ಈಗ ನಿನ್ನದು ಹೇಗೆ ನಡೀತಾ ಇದೆ. ಚಂಪಾಳ ಕೈಗೆ ಎಷ್ಟು ಕೊಟ್ಟಿದೀಯ ಅವರಂತೂ ಕ್ಯಾಪ ಮೆಮೋ ಕೊಡೋದಿಲ್ಲ. ಗುರು ಅವರು ಕೊಟ್ಟಿದ್ದಿದ್ದರೆ ಅದು ಎಷ್ಟು ಸಾವಿರಕ್ಕೆ ಬಂದು ಮುಟ್ಟುತ್ತಿತ್ತೋ ಏನೋ ಮಿನು ಯೋಚಿಸಬೇಡ. ನಾನು ನಿನ್ನ ಸುಕಾಲವನ್ನು ಹಿಂತಿರುಗಿ ತಂದುಕೊಡುತ್ತೇನೆ. ಯುವಕನಂತೆ ನನ್ನ ಮೈ ರಕ್ತ ಕೂಡಾ ಬಿಸಿಯಾಗಿದೆ; ಮುದುಕರಂತೆ ತಲೆ ತಣ್ಣಗಿದೆ; ಪತ್ತೇದಾರಿಯಂತೆ ಕಣ್ಣುಗಳು ಯಾವ ರೀತಿ ಬೇಕಾದರೂ ಬದುಕಲು ಅಥವಾ ಸಾಯಲು ನಾನು ಸಿದ್ಧ. ಗುರು ನಿನಗೇನು ಹೇಳಲಿ? ಒಂದು ವೀಕ್ ಪಾಯಿಂಟ್‌ನಿಂದ ನಾನು ಹೊಡೆತ ತಿನ್ನುತ್ತೇನೆ. ಅಮ್ಮ ಅಪ್ಪನನ್ನು ಬಿಟ್ಟು ಬೇರೆ ಯಾರ ಬೈಗಳನ್ನೂ ನನ್ನಿಂದ ಸಹಿಸಲು ಸಾಧ್ಯವಾಗುವುದಿಲ್ಲ.

ಶ್ಯಾಮನ ಪಕ್ಕದ ವ್ಯಕ್ತಿ ಸ್ವಲ್ಪ ಬಗ್ಗಿ ಕೇಳಿದ ನೀವೇನಾದರೂ ಹೇಳಿದಿರಾ?

ಶ್ಯಾಮ ಚಕಿತನಾದ. ಅವನಿಗರ್ಥವಾಯಿತು, ಅವನು ತನಗರಿವಿಲ್ಲದಂತೆಯೇ ಮಾತನಾಡಿದ್ದ. ಬಸ್ಸಿನ ಎದುರು ಹಾಗೂ ಹಿಂದಿನ ಸೀಟಿನ ಒಂದಿಬ್ಬರು ಅವನ ಕಡೆ ತಿರುಗಿ ನೋಡಿದರು. ಶ್ಯಾಮ ವಿವೇಕಾನಂದ ರೋಡಿನ ಹತ್ತಿರ ಗುಂಪನ್ನು ಭೇದಿಸಿಕೋಡು ಬಸ್ಸಿನಿಂದ ಇಳಿದು ಹೋದ.

# 2

ಬೆಳಗಿನ ಜಾವ ಬಾಗಿಲು ಬಡಿದ ಶಬ್ದ ಕೇಳಿ, ಶ್ಯಾಮನ ನಿದ್ರೆ ಭಂಗವಾಯಿತು. ಎದ್ದು ಬಾಗಿಲು ತೆರೆದು ನೋಡಿದ, ಇತು. ಇತು ಹುಬ್ಬು ಕೊಂಕಿಸಿ ಕೇಳುತ್ತಾಳೆ – ಶ್ಯಾಮ, ಟೆಲಿಫೋನಿನಲ್ಲಿ ನೀನು ನನ್ನನ್ನು ಮದುವೆಯಾಗ ಬಯಸಿದ್ದೀ ಅಲ್ವಾ?

– 'ಹೌದು' ಎಂದು ಶ್ಯಾಮ ತಲೆ ಅಲ್ಲಾಡಿಸುತ್ತಾನೆ.

– ನಾನೂ ಒಪ್ಪಿಕೊಂಡಿದ್ದೆ.

ಶ್ಯಾಮ 'ಹೌದು' ಎಂದು ಪುನಃ ತಲೆ ಅಲ್ಲಾಡಿಸುತ್ತಾನೆ.

– ಅನಂತರ ನೀನು ಮಾತಿನ ಮಾಧ್ಯದಲ್ಲಿಯೇ ಟೆಲಿಫೋನನ್ನು ಕೆಳಗಿಟ್ಟು ಬಿಟ್ಟಿದ್ದಿ.

ನಾಚಿಕೆ ತುಂಬಿದ ಧ್ವನಿಯಲ್ಲಿ ಶ್ಯಾಮ ಹೌದು ಎಂದೆನ್ನುತ್ತಾನೆ.

ಸ್ವಲ್ಪ ದೀರ್ಘಶ್ವಾಸ ಬಿಟ್ಟು ಇತು 'ನಿನಗೇನು ಬೇಕು' ಎಂದು ಕೇಳುತ್ತಾಳೆ.

ಶ್ಯಾಮ ಬದಲುತ್ತರ ಹೇಳದೆ, ಅಟ್ಟದ ಮೇಲಿಂದ ತನ್ನ ಟೂತ್‌ಬ್ರಷ್‌ನ್ನು ಎತ್ತಿಕೊಂಡು ಬಚ್ಚಲ ಮನೆಗೆ ಹೋಗುತ್ತಾ 'ಇತು ಕುಳಿತುಕೋ, ನಾನು ನಿನಗೆ ಚಹ ಮಾಡಿಕೊಡುತ್ತೇನೆ' ಎಂದು ಹೇಳಿ ಬಚ್ಚಲ ಮನೆ ಬಾಗಿಲನ್ನು ಮುಚ್ಚಿಕೊಳ್ಳುತ್ತಾನೆ.

ಬಚ್ಚಲ ಮನೆ ಹೊಕ್ಕು, ಅವನು ತನ್ನ ಶೂನ್ಯ ಕಣ್ಣುಗಳಿಂದ, ಎದುರಿನ ಬಿಳಿಯ ಗೋಡೆಯನ್ನು ಒಂದರೆಕ್ಷಣ ದಿಟ್ಟಿಸಿ ನೋಡುತ್ತಾನೆ. ಅವನ ಇಡೀ ಮೈಯಲ್ಲಿ ಈಗ ತುಂಬಾ ಆಲಸ್ಯ ತುಂಬಿದೆ. ಎಲ್ಲೂ ಒಂದಿಷ್ಟೂ ಉತ್ತೇಜನದ ಚಿನ್ಹೆ ಇಲ್ಲ. ಆಶ್ಚರ್ಯ. ಅವನು ನಲ್ಲಿ ತಿರುಗಿಸಿ ತಣ್ಣನೆಯ ನೀರಿಗೆ ತನ್ನ ಕೈ ಒಡ್ಡಿ, ನಕ್ಕು ಒಂದು ಕ್ಷಣ ನೀರು ಬೀಳುವ ಕಲಕಲ ಶಬ್ದವನ್ನು ಗಮನವಿಟ್ಟು ಆಲಿಸಿ, ಯಾಂತ್ರಿಕವಾಗಿ ಟೂತ್‌ಪೇಸ್ಟಿನ ಮುಚ್ಚಳವನ್ನು ತೆಗೆಯುತ್ತಾನೆ.

ಅರ್ಧ ಘಂಟೆಯ ನಂತರ, ಅವನು ಹೊರ ಬಂದು ಮಾತನಾಡದೆ ಸ್ಟೌವ್ ಹತ್ತಿಸಿ, ಇಷ್ಟು ದಿನ ಉಪಯೋಗಿಸದೇ ಇದ್ದ ಚಹ, ಸಕ್ಕರೆ ಡಬ್ಬಿಗಳನ್ನು ಅಟ್ಟದಿಂದ ಕೆಳಗಿಳಿಸಿ ಹಾಗೇ ಪುಡಿ ಹಾಲಿನ ಡಬ್ಬಿಯ ಕಡೆ ನೋಡಿ, ಪುನಃ ಡಬ್ಬಿಯ ಒಳಗೆ ನೋಡಿ, 'ಹಾಲು ಒಣಗಿ ಹೋಗಿದೆ, ಚಹ ತಯಾರಾಗೋದಿಲ್ಲ' ಎಂದು ತಲೆ ಅಲ್ಲಾಡಿಸಿ, ನಗುತ್ತ ಇತುವಿನ ಕಡೆ ನೋಡಿ ಹೇಳುತ್ತಾನೆ. ಏನು ಒಣಗಿ ಹೋಗಿದೆ?

ಶ್ಯಾಮ ಡಬ್ಬಿಯ ಕಡೆ ನೋಡುತ್ತಾ ಹೇಳುತ್ತಾನೆ, 'ಹಾಲು.' ಇತು ನಕ್ಕು – 'ದಿ ಮಿಲ್ಕ ಆಫ್ ಹ್ಯೂಮನ್ ಕೈಂಡ್‌ನೆಸ್' ಎಂದು ಹೇಳುತ್ತಾಳೆ.

ತುಂಬಾ ಜೋರಾಗಿ ನಗಬೇಕು ಎಂದೆಂದುಕೊಂಡರೂ, ಶ್ಯಾಮ ನಗುವುದಿಲ್ಲ. ಕೇವಲ ನಗುಮುಖದಿಂದ ಹೌದು ಇತು ನಿನ್ನ ಬುದ್ಧಿ ತುಂಬಾ ಜಾಸ್ತಿಯಾಗಿದೆ ಎಂದೆನ್ನುತ್ತಾನೆ.

–ಶ್ಯಾಮ ನೀನೇನು ಚಹ ಮಾಡುವುದು ಬೇಡ. ನೀನು ನನ್ನ ಹತ್ತಿರ ಬಾ.

ಶ್ಯಾಮ ಡಬ್ಬಿಯನ್ನು ನೆಲದ ಮೇಲೆ ಜೋರಾಗಿ ಕುಕ್ಕಿ, ಕಿಟಕಿಯ ಬಳಿ ಬಂದು ನಿಂತುಕೊಳ್ಳುತ್ತಾನೆ.

ಶ್ಯಾಮ ಕಿಟಕಿಯ ಚೌಕಟ್ಟಿನ ಮೇಲೆ ಕೈಯನ್ನು ಇಟ್ಟುಕೊಂಡು, ಬಿಸಿಲಿಗೆ ಬೆನ್ನು ಮಾಡಿ, ಇತುವಿಗೆ ಎದುರು ಮುಖ ಮಾಡಿ ನಿಂತುಕೊಂಡು 'ಇತು, ಇಂದು ನೀನು ತುಂಬಾ ಪವಿತ್ರಳಾಗಿ ಕಾಣಿಸುತ್ತಾ ಇದ್ದೀಯ' ಎಂದು ನಕ್ಕು ಹೇಳುತ್ತಾನೆ.

–ನನಗದೆಲ್ಲಾ ಗೊತ್ತಿಲ್ಲ.

– ಇನ್ನೂ ಸ್ವಲ್ಪ ಹೊತ್ತು ನೀನು ಪವಿತ್ರಳಾಗಿ ಕಾಣು – ಆಮೇಲೆ

ಇತು ಹಲ್ಲು ಕಡಿದು ಕೇಳುತ್ತಾಳೆ – ಆಮೇಲೆ ಏನು?

ಶ್ಯಾಮ ಮೆಲ್ಲನೆ ನಗುತ್ತಾನೆ – ಆಮೇಲೆ ಇಡೀ ದಿನ ನೀನು ಇಲ್ಲೇ ಇರುತ್ತೀಯಲ್ಲ.

ಇತು ತಲೆಯಾಡಿಸಿ ಇಲ್ಲ ಎಂದೆನ್ನುತ್ತಾಳೆ. ದಿ ಮಾರ್ನಿಂಗ್! ಷೋಸ್‌ದ ಡೇ. ಶ್ಯಾಮ ಹತ್ತಿರ ಬಾ. ನಾನು ನಿನ್ನ ಎಲ್ಲಾ ವಿಷಯವನ್ನು ಅರ್ಥ ಮಾಡಿಕೊಳ್ಳ ಬಯಸುತ್ತೇನೆ.

ಶ್ಯಾಮ ಮೃದುವಾಗಿ ನಕ್ಕು, ಇತು, ನಿಜವಾಗಿಯೂ ನಿನ್ನ ಬುದ್ಧಿ ಬೆಳೆದಿದೆ ಎಂದೆನ್ನುತ್ತಾನೆ.

– ಶ್ಯಾಮ ಹತ್ತಿರ ಬಾ. ನಾನು ನಿನ್ನನ್ನು ಒಂದೇ ಸಲ ಮುಟ್ಟಿದರೆ, ನಿನಗೇನಾಗಿದೆ ಎನ್ನುವುದು ನನಗೆಲ್ಲಾ ಅರ್ಥವಾಗುತ್ತೆ. ಇತುವಿನ ಧ್ವನಿಯಲ್ಲಿ, ತನ್ನ ಸ್ವಂತ ಮಗುವನ್ನು ಹೆತ್ತ ತಾಯಿ ಕರೆಯುವಂತೆ ಪ್ರೀತಿ ವಾತ್ಸಲ್ಯ ತುಂಬಿದೆ. ತಾಯಿ ತನ್ನ ಮಗುವಿಗೆ ನಿನ್ನ ಎಲ್ಲಾ ತುಂಟತನಗಳನ್ನು ನಾನು ಕಂಡುಹಿಡಿದಿದ್ದೇನೆ ಎಂದು ಹೇಳುವಂತೆ ಅವಳ ಮುಖ, ಕಣ್ಣುಗಳಲ್ಲಿ ಆ ರೀತಿಯ ಭಾವನೆ ಇದೆ.

ಶ್ಯಾಮ ಹತ್ತಿರ ಬರುವುದಿಲ್ಲ. ಕಿಟಕಿಯ ಬಳಿ ನಿಂತುಕೊಂಡೇ 'ಯಾವ ರೀತಿ ಗೊತ್ತಾಗುತ್ತೆ?' ಎಂದು ಕೇಳುತ್ತಾನೆ.

ಮೊದಲು ಹತ್ತಿರ ಬಾ. ನನಗೆ ನಿನ್ನನ್ನು ಮುಟ್ಟಲು ಬಿಡು. ಆಮೇಲೆ ನೀನೇ ನೋಡುವಿಯಂತೆ, ನನಗೆ ಯಾವ ರೀತಿ ಗೊತ್ತಾಗುತ್ತೆ ಎನ್ನುವುದನ್ನು.

ಶ್ಯಾಮ ಒಂದೆರಡು ಹೆಜ್ಜೆ ಮುಂದೆ ಸರಿಯುತ್ತಾನೆ. ನಗುಮುಖದಿಂದ ಕೈ ಮುಂದೆ ಚಾಚಿ ಹೇಳುತ್ತಾನೆ. ಮುಟ್ಟು.

ಇತುವಿನ ಕೈ ಮುಂದೆ ಚಾಚಿ ಬರುತ್ತಲೂ, ಶ್ಯಾಮ ತನ್ನ ಕೈಯನ್ನು, ಬೇರೆಡೆಗೆ ಸರಿಸಿ ಹೇಳುತ್ತಾನೆ, ಮುಟ್ಟು.

ಆಂ ಶ್ಯಾಮ ಎಂದೆನ್ನುತ್ತಾ ಇತು ತನ್ನೆರಡೂ ಕೈಗಳನ್ನು ಮುಂದೆ ಚಾಚುತ್ತಾಳೆ.

ಶ್ಯಾಮ ತನ್ನ ಕೈಯನ್ನು, ಬೇರೆಡೆಗೆ ಸರಿಸಿ ಹೇಳುತ್ತಾನೆ. ಈ ಸಲ ಮುಟ್ಟು.

ತುಟಿಯ ಮೇಲೆ ನಗು ತುಂಬಿಕೊಂಡು 'ಇದೇನು ಮಾಡುತ್ತಾ ಇದೀಯಾ?' ಎಂದು ಇತು ಮೇಲೆ ಏಳುವ ಪ್ರಯತ್ನ ಮಾಡುತ್ತಾಳೆ.

– ಇತು ಏಳಬೇಡ – ಶ್ಯಾಮ ಮತ್ತೊಂದು ಹೆಜ್ಜೆ ಮುಂದೆ ಇಟ್ಟು – ಮುಟ್ಟು – ಎಂದೆನ್ನುತ್ತಾನೆ.

ಕೈಯಿಂದ ಶ್ಯಾಮನನ್ನು ಮುಟ್ಟಲಿಕ್ಕಾಗದೆ ಇತು ಪುನಃ ಕುಳಿತುಕೊಳ್ಳುತ್ತಾಳೆ. ಆಮೇಲೆ ತಟ್ಟನೆ ಬಗ್ಗಿ ಹಠಾತ್ ಶ್ಯಾಮನ ಶರ್ಟನ್ನು ಹಿಡಿಯಲು ಪ್ರಯತ್ನಿಸುತ್ತಾಳೆ.

ವೇಗವಾಗಿ ಶ್ಯಾಮ ಮೆಲ್ಲನೆ ಪಕ್ಕಕ್ಕೆ ಸರಿದು ನಕ್ಕು, ಹಿಡೀತಿಯಾ? ಎಂದು ಕೇಳಿ ಪುನಃ ಕಿಟಕಿಯ ಬಳಿ ಸರಿದು ನಿಂತು ಹೇಳುತ್ತಾನೆ – ಹಿಡಿ ನೋಡೋಣ?

ಆಃ ಶ್ಯಾಮ ಹತ್ತಿರ ಬಾ.

ಇತು ನೀನೇ ಬಾ. ಶ್ಯಾಮ ಎದೆ ಸೆಟೆಸಿ ನಿಂತು ಹೇಳುತ್ತಾನೆ.

– ಶ್ಯಾಮ ನಿನಗೇನು ಭಯ. ಅನೇಕ ಹುಡುಗಿಯರನ್ನು ನೀನು ಈಗಾಗಲೇ ಮುಟ್ಟಿದ್ದೀಯಾ, ನೀನಂತೂ ಪಕ್ಕಾ ಲಂಪಟ. ಶ್ಯಾಮ ಹೌದು ಎಂದು ತಲೆ ಅಲ್ಲಾಡಿಸುತ್ತಾನೆ. ಮೆಲ್ಲ ಮೆಲ್ಲನೆ ಇತು ಎದ್ದು ನಿಂತುಕೊಳ್ಳುತ್ತಾಳೆ. ಭಯ ಯಾತರದ್ದು ಶ್ಯಾಮ.

ಇತು ಹತ್ತಿರ ಬಂದು ಅವನ ಹೆಗಲಿನ ಕಡೆ ತನ್ನ ಕೈ ಮುಂದೆ ಸರಿಸುತ್ತಾಳೆ. ಇನ್ನೇನು ಇತು ಇಷ್ಟರಲ್ಲೇ ಅವನನ್ನು ಮುಟ್ಟಿಬಿಡುತ್ತಾಳೆ. ಶ್ಯಾಮ ಇನ್ನೂ ಬಗ್ಗುತ್ತಾನೆ. ಆಮೇಲೆ ಮೆಲ್ಲನೆ ಇತುವಿನ ಕೈಕೆಳಗಿಂದ ನುಸುಳಿ ಕೋಣೆಯ ಮಧ್ಯೆ ಹೋಗುತ್ತಾನೆ. ಇತುವಿನ ಕೈ ಶೂನ್ಯದಿಂದ ದಪ್ ಎಂದು ಕೆಳಗೆ ಬೀಳುತ್ತದೆ. ಎರಡೂ ಕೈಯೊಳಗಿನ ಗಾಜಿನ ಬಳೆಗಳು ಝಣ ಝಣ ಶಬ್ದ ಮಾಡುತ್ತವೆ. ಅವಳು ಹಿಂತಿರುಗಿ ಹುಬ್ಬು ಕೊಂಕಿಸಿ ಶ್ಯಾಮನ ಕಡೆ ನೋಡುತ್ತಾಳೆ.

ಹಿಡಿದುಕೋ ನೋಡೋಣ. ಶ್ಯಾಮ ನಗುತ್ತಾನೆ. ಆಟದ ಛಲದಿಂದ ಇತುವಿನ ಕಡೆ ತನ್ನ ಒಂದು ಕೈ ಮುಂದೆ ಸರಿಸಿ ಹೇಳುತ್ತಾನೆ – ಮುಟ್ಟು ನೋಡೋಣ.

ಸ್ವಲ್ಪ ಹೊತ್ತು ದಿಟ್ಟಿಸಿ ನೋಡಿ, ತಕ್ಷಣ ಮೆಲ್ಲನೆ ಇತು ನಗುತ್ತಾಳೆ. ನೀನೇನು ಆಟ ಆಡ್ಬೇಕೂಂತ ಇದೀಯಾ? ಎಂದು ಕೇಳುತ್ತಾಳೆ. ಶ್ಯಾಮ ಹೌದು ಎಂದು ತಲೆ ಅಲ್ಲಾಡಿಸುತ್ತಾನೆ.

ಸರಿ ಹಾಗಾದ್ರೆ ಎಂದು ಇತು ಕ್ಷಣದಲ್ಲಿ ತನ್ನ ಸೀರೆಯ ಸೆರಗನ್ನು ಸೊಂಟಕ್ಕೆ ಸಿಕ್ಕಿಸಿಕೊಂಡು – ನಿನ್ನನ್ನು ಮುಟ್ಟಲು ನನ್ನಿಂದ ಸಾಧ್ಯವಾದರೆ ನಾನೇ ಗೆದ್ದಂತೆ.

– ಜಯ.

ಶ್ಯಾಮ ಕೋಣೆಯ ಬಾಗಿಲು ಮುಚ್ಚಿಬಿಡುತ್ತಾನೆ. ಎದುರುಬದಿರು ಇಬ್ಬರೂ ಒಂದು ಕ್ಷಣ ನಿಂತುಕೊಳ್ಳುತ್ತಾರೆ. ಈಗ ಇತು ತುಂಬಾ ದಪ್ಪಗಾಗಿ ಹೋಗಿದ್ದಾಳೆ. ಸೊಂಟಕ್ಕೆ ಸೆರಗು ಸಿಕ್ಕಿಸಿಕೊಂಡ ನಂತರ ಅವಳ ಹೊಟ್ಟೆಯ ಸುತ್ತ ಚರ್ಮದ ಮಡಿಕೆ ಬಂದಿದೆ. ಕೈ ಹಾಗೂ ಕುತ್ತಿಗೆಯಲ್ಲಿ ಚೆನ್ನಾಗಿ ಕೊಬ್ಬು ತುಂಬಿಕೊಂಡಿದೆ. ಆದರೂ ಶ್ಯಾಮನಿಗೆ ಇತು ನೃತ್ಯ ಕಲಿಯುತ್ತಿದ್ದಾಳೆ ಎನ್ನುವುದು ಗೊತ್ತು. ಅದಕ್ಕೆ ಅವನು ಎಚ್ಚರ ವಹಿಸುತ್ತಾನೆ.

ಇತು ನೇರವಾಗಿ ಬರುವುದಿಲ್ಲ. ಮೆಲ್ಲನೆ ಹೆಜ್ಜೆಯ ಮೇಲೆ ಹೆಜ್ಜೆ ಇಟ್ಟು, ಗೋಡೆಯ ಕಡೆ ಸರಿದು ನಡೆದು ಬರುತ್ತಾಳೆ. ಶ್ಯಾಮ ಉಂಗುಷ್ಟದ ಮೇಲೆ ಬೇರೆ ಕಡೆ ನಡೆದು 'ಬಕ್‌ಅಪ್ ಇತು' ಎಂದೆನ್ನುತ್ತಾನೆ.

ಇತು ನಗುತ್ತಾಳೆ. ಅವಳು ನಡೀತಾನೇ ಇರುತ್ತಾಳೆ. ಶ್ಯಾಮನೂ ನಡೀತಾ ಇರುತ್ತಾನೆ. ಕೋಣೆಯ ಎಲ್ಲಾ ವಸ್ತುವೂ ಶ್ಯಾಮನಿಗೆ ಚಿರಪರಿಚಿತ. ಬಾಗಿಲ ಕಡೆ ಹೋದರೆ, ಅದರ ಎಡಗಡೆ ಮಂಚ, ಮಧ್ಯದಲ್ಲಿ ಕುರ್ಚಿ, ಬಲಗಡೆ ಸ್ಟೌವ್ ಉರಿಯುತ್ತಿದೆ. ಕಿಟಕಿಯ ಕಡೆ ನಡೆದು ಹೋದರೆ ಸರಿಯಾಗಿ ಬೇರೆ ತರಹ. ಒಂದು ಕಡೆ ಕಂಬದಂತೆ ಪೇರಿಸಿರುವ ಪುಸ್ತಕಗಳು. ಒಂದು ದೊಡ್ಡ ಪುಸ್ತಕ ನೆಲದ ಮೇಲೆ ಸರಿದು ಬಿದ್ದಿದೆ. ಶ್ಯಾಮ ಪುಸ್ತಕಗಳನ್ನು ದಾಟಿ ಹೋಗಿ, ಮಂಚದ ಬದಿಯಿಂದ ಮೆಲ್ಲನೆ ಪಕ್ಕಕ್ಕೆ ಸರಿದು ಹೋಗುತ್ತಾ, ಕುರ್ಚಿಯ ಮೇಲೆ ಒಂದು ಸಲ ಕೈ ಇಡುತ್ತಾನೆ. ಬಲಗಡೆಯಿಂದ ನಡೆದು ಬರುತ್ತಾ, ಇತು ತಟ್ಟನೆ ವಿದ್ಯುತ್ ಗತಿಯಿಂದ ನೇರವಾಗಿ ಈ ಕಡೆ ಧಾವಿಸಿ ಬರುತ್ತಾಳೆ. ಹಾವಿನ ನಾಲಿಗೆಯಂತೆ ಅವಳ ಕೈ ಶ್ಯಾಮನ ಎದೆಯನ್ನು ಚಾಚಿ ಬರುತ್ತೆ. ಸ್ವಲ್ಪದರಲ್ಲೇ ಶ್ಯಾಮ ಸರಿದು, ಮಂಚದ ಮೇಲೆ ಹಾರಿ ಹೋಗುತ್ತಾನೆ. ಮಂಚದಿಂದ ಬಾಗಿಲ ಕಡೆ ಹಾರಿ ಇಳಿಯುತ್ತಾ ನಕ್ಕು ಬಾಗಿಲ ಕಡೆ ಸರಿಯುತ್ತಾನೆ. ಇತು ನಗುತ್ತಾಳೆ. ಅವಳೂ ಬಲಗಡೆಯೇ ನಡೆಯುತ್ತಾಳೆ. ಇತು ತಟ್ಟನೆ ನಿಂತುಕೊಳ್ಳುತ್ತಾಳೆ. 'ಇದೇನು ಚಿಕ್ಕ ಮಕ್ಕಳ ತರಹ ಹುಡುಗಾಟ' ಎಂದು ಕೇಳುತ್ತಾಳೆ.

ಶ್ಯಾಮನು ನಿಂತುಕೊಳ್ಳುತ್ತಾನೆ. ದೂರದಿಂದಲೇ, ಒಂದು ವೇಳೆ ನಿನ್ನಿಂದ ನನ್ನನ್ನು ಮುಟ್ಟಲು ಸಾಧ್ಯವಾದರೆ, ನೀನೇ ಗೆದ್ದಂತೆ ಎಂದೆನ್ನುತ್ತಾನೆ.

–ನನಗೇನು ಗೆಲ್ಲುವುದು ಬೇಕಿಲ್ಲ, ನೀನು ಹತ್ತಿರ ಬಾ.

– ಇತು ಆಟ ಆಡ್ಬೇಕು. ಆಟದ ನಿಯಮವನ್ನು ಮುರಿಯಬೇಡ ಎಂದು ಶ್ಯಾಮ ಹೇಳುತ್ತಾನೆ.

ಇತು ಹಾಸಿಗೆಯ ಮೇಲೆ ಕುಳಿತು ಕಾಲು ಕುಣಿಸುತ್ತಾಳೆ. ಸರಿ ನಿನ್ನನ್ನೇನು ನಾನು ಮುಟ್ಟಬಯಸೋದಿಲ್ಲ.

ಶ್ಯಾಮ ಗೋಡೆಗೊರಗಿ ನಿಂತುಕೊಂಡು ಸಿಗರೇಟು ಹೊತ್ತಿಸಿ ಸುಮ್ಮನೆ ಹಾಗೇ ಮಾತನಾಡದೆ ನಿಂತುಕೊಳ್ಳುತ್ತಾನೆ. ಇತು ತುಟಿ ಕೊಂಕಿಸಿ ನಕ್ಕು, ತನ್ನ ದೃಷ್ಟಿಯನ್ನು ಬೇರೆಡೆಗೆ ಹೊರಳಿಸಿ ತಟ್ಟನೆ ಚಂಗನೆ ಹಾರಿ ಅವನ ಹತ್ತಿರ ಸರಿದು ಬರುತ್ತಾಳೆ. ಶ್ಯಾಮ ಚಕಿತನಾಗಿ, ಬಹಳ ಕಷ್ಟದಿಂದ ಸ್ಟೌವಿನ ಮೇಲೆ ಬೀಳುವುದರಿಂದ ತಪ್ಪಿಸಿಕೊಂಡು, ಕಿಟಕಿಯ ಚೌಕಟ್ಟನ್ನು ಆಧಾರವಾಗಿ ಇಟ್ಟುಕೊಂಡು ಸರಿದು ಹೋಗುತ್ತಾನೆ.

ಇತು ಹೌದು ನಿನ್ನ ಬುದ್ಧಿ ಬೆಳೆದಿದೆ. ನಿನ್ನ ಉನ್ನತಿಗೆ ಇನ್ನೇನು ತಡವಿಲ್ಲ ಎಂದೆನ್ನುತ್ತಾನೆ.

ಶ್ಯಾಮನ ಬಾಯಿಂದ ಸಿಗರೇಟ್ ಬಿದ್ದುಹೋಗಿದೆ. ಇತು ಉರಿಯುತ್ತಿರುವ ಸಿಗರೇಟನ್ನು ಎತ್ತಿ ಅವನ ಕಡೆ ಬಿಸಾಡುತ್ತಾಳೆ. ಶ್ಯಾಮ ಹಾಸಿಗೆಯ ಮೇಲೆ ಉರುಳಿ ಅದನ್ನು ಎತ್ತಿ ಕೊಂಡು ಥ್ಯಾಂಕ್ಯೂ ಎನ್ನುತ್ತಾನೆ.

ಇತು ಮುಲಾಜಿಲ್ಲದೆ ಕುರ್ಚಿಯನ್ನು ಒದ್ದು ಪಕ್ಕಕ್ಕೆ ಸರಿಸುತ್ತಾಳೆ. ಹಣೆಯ ಮೇಲೆ ಬಿದ್ದ ಕೂದಲನ್ನು ಸರಿಸಿಕೊಳ್ಳದೇ ಹಾಗೇ ನೇರವಾಗಿ ಶ್ಯಾಮನ ಕಡೆ ನಡೆದು ಬರುತ್ತಾಳೆ. ಶ್ಯಾಮ ಬಗ್ಗಿ ಅವಳ ಬದಿಯಿಂದಲೇ ಸರಿದು ಬೇಗನೇ ಬೇರೆ ಕಡೆ ನಡೆದು ಹೋಗುತ್ತಾನೆ. ಇತು

ಶಾಂತಚಿತ್ತದಿಂದ ಆಟವನ್ನು ಆಡು, ಸಿಟ್ಟಾಗಿ ಅಡಿದರೆ ಸುಮ್ಮನೆ ಈ ಕೋಣೆಯನ್ನು ಸುತ್ತುತ್ತಾ ಇರಬೇಕಾಗುತ್ತೆ ಅಷ್ಟೇ – ಎಂದೆನ್ನುತ್ತಾನೆ.

ಇತು ಅವನ ಮಾತನ್ನು ಕೇಳಿಸಿಕೊಳ್ಳುವುದಿಲ್ಲ. ಅವಳು ಹಾರಿ ಅವನ ಬಳಿ ಬರುವ ಪ್ರಯತ್ನವನ್ನು ಮಾಡುತ್ತಾಳೆ. ಕುರುಡರಂತೆ ಅವಳು ಮಂಚ ಕುರ್ಚಿ ಹಾಗೂ ಗೋಡೆಗಳಿಗೆ ಡಿಕ್ಕಿ ಹೊಡೆಯುತ್ತಾಳೆ. ನೆಲದ ಮೇಲಿನ ದೊಡ್ಡ ಪುಸ್ತಕವನ್ನು ಎಡುವುತ್ತಾಳೆ. ಅವಳ ಮುಖ ಕೆಂಪಗಾಗುತ್ತಾ ಇದೆ. ಮುಖದ ಮೇಲೆ ಬೆವರಿನ ಹನಿ ಮೂಡಿದೆ.

ಶ್ಯಾಮನಿಗೆ ಸ್ವಲ್ಪ ಉತ್ತೇಜನವಾದಂತೆ ಎನಿಸುತ್ತದೆ. ಆಟದಿಂದ ತಾನು ಅದನ್ನು ಪಡೆಯುತ್ತಾ ಇದ್ದೇನೆ ಎಂದು ಅವನಿಗೆ ಅನಿಸುತ್ತೆ. ಮೆಲುಧ್ವನಿಯಲ್ಲಿ ಅವನು ಇತುವಿಗೆ ಹೇಳುತ್ತಾನೆ – ಇತು ಆಡು ನೀನು ಈಗ ಇನ್ನೂ ಸುಂದರಳಾಗಿ ಕಾಣಿಸುತ್ತಾ ಇದ್ದೀಯ.

ಹಾಸಿಗೆಯ ಬಳಿ ಇತು ಸ್ವಲ್ಪ ತಡೆದು ನಿಲ್ಲುತ್ತಾಳೆ. ಕೈಚೀಲವನ್ನು ಎತ್ತಿ ಶ್ಯಾಮನ ಕಡೆ ಜೋರಾಗಿ ಬೀಸುತ್ತಾಳೆ. ಶ್ಯಾಮ ತಲೆ ಬಗ್ಗಿಸುತ್ತಾನೆ. ಅದು ನೇರವಾಗಿ ಹೋಗಿ, ಗೋಡೆಗೆ ತಗಲಿ, ಅನಂತರ ನೇರವಾಗಿ ಸ್ಟೌವಿನ ಮೇಲಿನ ಕೆಟಲನ್ನು ಕೆಳಕ್ಕೆ ಉರುಳಿಸುತ್ತದೆ. ದಪ್ ಎಂದು ಸ್ಟೌವಿನ ಬೆಂಕಿ ಮೇಲೇಳುತ್ತದೆ. ಕೆಟಲಿನ ನೀರು ನೆಲದ ಮೇಲೆ ಬಿದ್ದು ಹರಿಯುತ್ತದೆ. ಶ್ಯಾಮ ತನಗೆ ಪರಿಚಿತ ಮನೆಯಾದುದರಿಂದ, ಆಪತ್ತಿಲ್ಲದೆ ಬೇಗ ಮೂಲೆಗೆ ಸರಿದು ಹೋಗುತ್ತಾನೆ.

ಇತು ಕುರ್ಚಿಯನ್ನು ಸರಿಸಿ ಇಡುತ್ತಾಳೆ. ನೆಲದ ಮೇಲೆ ಹರಿವ ಬಿಸಿನೀರನ್ನು ದಾಟಬೇಕು. ಅದನ್ನು ಪೂರ್ಣ ದಾಟಲು ಅವಳಿಂದ ಸಾಧ್ಯವಾಗುವುದಿಲ್ಲ. ಏದುಸಿರು ಬಿಡುತ್ತಾ, ಗೋಡೆಗೊರಗಿ ನಿಂತುಕೊಂಡು – ಶ್ಯಾಮ ಇನ್ನು ನನಗೆ ಹೆಚ್ಚು ಕಷ್ಟ ಕೊಡಬೇಡ – ಎಂದು ಹೇಳುತ್ತಾಳೆ. ಇತು ಈಗ ತುಂಬಾ ವಿವರ್ಣಳಾಗಿ ಕಾಣಿಸುತ್ತಾ ಇದ್ದಾಳೆ. ಸೊಂಟಕ್ಕೆ ಸಿಕ್ಕಿಸಿದ ಸೆರಗು ಬಿಚ್ಚಿಕೊಂಡು ಸ್ಟೌವಿನ ಮೇಲೆ ಹಾರಾಡುತ್ತಿದೆ. ಶ್ಯಾಮ ಹೇಳುತ್ತಾನೆ – ಇತು ನಿಲ್ಲಬೇಡ. ಆಟ ಆಡು ಆಡುತ್ತಾನೇ ಇರು. ಆಮೇಲೆ ಕೈ ಮುಂದೆ ಚಾಚಿ ಹೇಳುತ್ತಾನೆ, ನಾನಿಲ್ಲೇ ಇದೀನಿ ನೋಡು ಮುಟ್ಟು.

ಶ್ಯಾಮ ನಗುತ್ತಾ ಹಾಗೆಯೇ ದೂರ ಸರಿದು ಹೋಗುತ್ತಾನೆ. ಹಾರಿ ಮಂಚದ ಮೇಲೆ ನಿಂತುಕೊಂಡು – ಬಾ ಇತು ಆಟ ಆಡು. ಇಲ್ಲದಿದ್ದರೆ ನಾನು ಪುನಃ ತೂಕಡಿಸುತ್ತೇನೆ. ಆದರೂ ಇತು ನಿಂತೇ ಇರುತ್ತಾಳೆ. – ಶ್ಯಾಮ ಇನ್ನು ನನ್ನಿಂದ ಸಾಧ್ಯವಿಲ್ಲಪ್ಪಾ ಎಂದೆನ್ನುತ್ತಾಳೆ.

– ಎಲ್ಲಾ ಸಾಧ್ಯವಾಗುತ್ತೆ. ಶ್ಯಾಮ ನಗುತ್ತಾ 'ತಣ್ಣಗಾಗಿ ಕುಳಿತುಕೊಂಡರೆ ಏನು ಲಾಭ? ಆಟ ಆಡು.'

ಇತು ಮೆಲ್ಲ ಮೆಲ್ಲನೆ ಸರಿಯುತ್ತಾಳೆ. ಶ್ಯಾಮ ಕೂಡ ಮುಂದೆ ಮುಂದೆ ಸರಿಯುತ್ತಾನೆ. ಅನಂತರ ಅವರು ಕುರ್ಚಿಯ ಅಕ್ಕಪಕ್ಕ ಸುತ್ತಾಡುತ್ತಾರೆ. ಕೋಣೆಯ ತುಂಬೆಲ್ಲಾ ಜೋರಾಗಿ ಶ್ವಾಸೋಚ್ಛ್ವಾಸದ ಶಬ್ದ ಕೇಳಿ ಬರುತ್ತದೆ. ಆದರೂ ಶ್ಯಾಮ ನಗುತ್ತಾನೆ. ಇತುವನ್ನು ನಿಂತುಕೊಳ್ಳಲು ಬಿಡುವುದಿಲ್ಲ. ಇತು ಜೀವ ಬಿಟ್ಟು ಶ್ಯಾಮನನ್ನು ಹಿಡಿಯವ ಪ್ರಯತ್ನ ಮಾಡುತ್ತಾಳೆ. ಶ್ಯಾಮ ಸುತ್ತಾಡಿ ಸುತ್ತಾಡಿ, ಮಂಚ ಹತ್ತಿ ಕಿಟಕಿಯ ಬಳಿ ಇಳಿದು, ಸರಿದು

ಹೋಗುತ್ತಾನೆ. ಹಾಗೆಯೇ ಗೋಡೆಯ ಕಡೆ ಸರಿಯುತ್ತಾ ಬಿಸಿ ನೀರಿನ ಸ್ರೋತವನ್ನು ದಾಟಕೊಂಡು ಮುಂದೆ ಹೋಗುತ್ತಾನೆ. ಕುರುಡರ ತರಹ ಇತು ಗಮನವಿಟ್ಟು, ಎರಡೂ ಕೈ ಮುಂದೆ ಚಾಚಿ ನಡೆಯುತ್ತಾಳೆ. ಅವಳು ಯಾವ ದಿಕ್ಕಿಗೆ ಹೋಗುತ್ತಾಳೋ ಅದರ ವಿರುದ್ಧ ದಿಕ್ಕಿಗೆ ಶ್ಯಾಮ ಸರಿಯುತ್ತಾನೆ. ಶ್ಯಾಮ ಅಡಿಕೆ ಮೆಲ್ಲುತ್ತಾ ಅವಳು ಯಾವ ದಿಕ್ಕಿನಲ್ಲಿದ್ದಾಳೆ ಎಂದು ನೋಡುತ್ತಾನೆ.

ಶ್ಯಾಮ ಏದುಸಿರು ಬಿಡುತ್ತಾ, ನಗುತ್ತಾ – ಇತು ಆಟ ಆಡು. ನನಗೆ ಸ್ವಲ್ಪ ಒಳ್ಳೆಯದಾಗಲು ಬಿಡು. ಇತು ತುಂಬಾ ದಿನದಿಂದ ನನ್ನ ಮೈ ತಣ್ಣಗಾಗುತ್ತಾ ಇದೆ. ನನ್ನ ಶರೀರ ಬಿಸಿಯಾಗ್ತಾನೇ ಇಲ್ಲ. ಆಡು ಇತು. ಆಟ ಆಡುತ್ತಾನೇ ನನ್ನ ಮುಟ್ಟು ಆಮೇಲೆ ನೀನೇ ಗೆದ್ದಂತೆ.. ಆಂ ಇತು ನೀನು ದಪ್ಪಗಾಗಿ ಬಿಟ್ಟಿದಿಯಾ. ಹೊಟ್ಟೆಯ ಭಾಗದಲ್ಲಿ ಕೊಬ್ಬು ಜಾಸ್ತಿಯಾಗಿದೆ. ವಯಸ್ಸೂ ಆಗ್ತಾ ಬಂತು. ಸಮಯ ಸಿಕ್ಕಿರುವಾಗಲೇ ಆಟ ಆಡಿಬಿಡು. ಸಾಯುವುದರೊಳಗಾಗಿ ಆಟ ಆಡಿಬಿಡು. ಎಲ್ಲವೂ ಸಹಜ, ಸುಲಭವಾಗಿ ಲಭ್ಯವಾಗುವುದಿಲ್ಲ. ಆ ರೀತಿ ಲಭ್ಯವಾಗುವುದು ಉಚಿತವೂ ಇಲ್ಲ. ಇಷ್ಟು ಹೊತ್ತಿನೊಳಗಾಗಿ ನಾನು ನಿನಗೆ ಸುಲಭವಾಗಿ ದಕ್ಕಿಬಿಡುತ್ತಿದ್ದೆ. ಅದಕ್ಕೇ ನೀನು ನನ್ನನ್ನು ಎಲ್ಲಕ್ಕಿಂತ ಕಡಿಮೆ ಲಾಭದ್ದು ಎಂದು ಪರಿಗಣಿಸಿದ್ದಿ. ಆಂ ಹಾಂ ಇತು ಆ ಕಡೆ ಅಲ್ಲ. ನಾನು ಕಿಟಕಿಯ ಹತ್ತಿರ ಸರಿದು ಬರುತ್ತಾ ಇದ್ದೇನೆ. ಆಂ ಇತು ಬಿದ್ದು ಬಿಡಬೇಡ. ಆಟ ಮಣ್ಣು ಪಾಲಾಗುತ್ತೆ. ಇಷ್ಟು ಸಹಜವಾಗಿ ಪ್ರಶ್ನೆಯನ್ನು ಬಿಡಿಸಿಬಿಡಬೇಡ – ನಿಲ್ಲಬೇಡ. ನಿಂತರೆ ನೀನು ಅದೃಷ್ಟಹೀನಳು ... ನಿಂತರೆ ನೀನು ಮುದುಕಿ..... ನಿಂತರೆ ನೀನು ಮಣ್ಣಿನ ಮುದ್ದೆ... ನಡೀ, ನಡೀತಾನೇ ಇರು. ನಡೆಯುತ್ತಾ ನಡೆಯುತ್ತಾ ನೀನು ನೆರಳಾಗಿ ಬಿಡು. ಇತು ನೀನು ಮಾಯಾವಿನಿಯಾಗಿ ಹೋಗು ರಹಸ್ಯಮಯವಾಗಿ ಹೋಗು. ದುಷ್ಪ್ರಾಪ್ಯಳಾಗಿ ಹೋಗು... ನಾನು ಭಿಕ್ಷುಕನಂತೆ ನಿನ್ನ ಪಡೆಯಲು ಕಾತರಿಸುವಂತೆ ಮಾಡು. ನಾನು ನಿನಗಾಗಿ ತಲೆ ಎತ್ತಿ ಕಾತರಿಸಿ ಕಾಯುವಂತೆ ಮಾಡು. ನಾನು ನಿನಗೋಸ್ಕರ ಹುಚ್ಚನಾಗಲೂ ಬಹುದು. ಆಂ ಹಾಂ ಇತು ಪುನಃ ನಿನ್ನ ಸೆರಗು ಸೊಂಟದಿಂದ ಬಿಚ್ಚಿ ಸ್ಟೌವಿನ ಮೇಲೆ ತೂಗಾಡುತ್ತಾ ಇದೆ ... ಆಃ ಇತು.

ಶ್ಯಾಮ ತುಂಬಾ ಹತಾಶನಾಗಿ ಹಾಗೆಯೇ ನಿಂತು ಬಿಡುತ್ತಾನೆ. ನಿಂತು ನೋಡುತ್ತಾನೆ, ಇತುವಿನ ಸೆರಗು ದಪ್ ಎಂದು ಹೊತ್ತಿಕೊಂಡು ಉರಿಯುತ್ತಿದೆ.

ಆಃ ಶ್ಯಾಮ್ ಇತು ಏದುಸಿರು ಬಿಡುತ್ತಾ – ನಾನೇನು ಮಾಡಲಿ ಶ್ಯಾಮ್ ಎಂದು ಅಳುತ್ತಾಳೆ.

ಇತು ತನ್ನ ಸೆರಗನ್ನು ದೂರವಾಗಿ ಹಿಡಿದುಕೊಂಡು ಶ್ಯಾಮನ ಕಡೆ ಧಾವಿಸಿ ಬರುತ್ತಾಳೆ. ಶ್ಯಾಮ್ ಅಲ್ಲಿಂದ ಸರಿದು ಬಿಡುತ್ತಾನೆ.

ಆಃ ಶ್ಯಾಮ್

–ಇತು ನಾನು ಆಟದ ನಿಯಮಗಳನ್ನು ಮುರಿಯುವುದಿಲ್ಲ ಎಂದು ಶ್ಯಾಮ ತಲೆ ಅಲ್ಲಾಡಿಸಿ ಹೇಳುತ್ತಾನೆ.

– ಶ್ಯಾಮ ನಾನೀಗ ಏನು ಮಾಡಲಿ?

ಶ್ಯಾಮ ಹಾಸಿಗೆಯಿಂದ ಹೊದಿಕೆಯನ್ನು ಎತ್ತಿ ಇತುವಿನ ಕಡೆ ಬಿಸಾಕಿ – ಇತು ಇದನ್ನು ಸೆರಗಿನ ಮೇಲೆ ಜೋರಾಗಿ ಒತ್ತಿ ಹಿಡಿ ಎಂದು ಹೇಳುತ್ತಾನೆ.

ಇತು ನೆಲದ ಮೇಲೆ ಕುಸಿದು ಕುಳಿತುಕೊಳ್ಳುತ್ತಾಳೆ. ಹೊದಿಕೆಯನ್ನು ಸೆರಗಿಗೆ ಒತ್ತಿ ಹಿಡಿದು ಬೆಂಕಿಯನ್ನು ಆರಿಸುತ್ತಾಳೆ. ಅಷ್ಟೇನು ಸೆರಗು ಹತ್ತಿಕೊಂಡಿರುವುದಿಲ್ಲವಾದುದರಿಂದ ಅದನ್ನು ಆರಿಸಲು ಕಷ್ಟವೇನೂ ಆಗುವುದಿಲ್ಲ. ಶ್ಯಾಮ ದೂರ ನಿಂತುಕೊಂಡೇ ಎಲ್ಲವನ್ನೂ ನೋಡುತ್ತಾನೆ.

ಇತು ಮೆಲ್ಲ ಮೆಲ್ಲನೆ ಮುಖ ಮೇಲೆತ್ತುತ್ತಾಳೆ. ಶೂನ್ಯ ದೃಷ್ಟಿಯಿಂದ ಶ್ಯಾಮನನ್ನು ದಿಟ್ಟಿಸಿ ನೋಡುತ್ತಾಳೆ. ಅನಂತರ ಸುಟ್ಟ ಸೆರಗನ್ನು ಮುದುರಿ ಹಿಡಿದುಕೊಂಡು ಶ್ಯಾಮನ ಹಾಸಿಗೆಯ ಮೇಲೆ ಬಂದು ಕುಳಿತುಕೊಂಡು ಏದುಸಿರು ಬಿಡುತ್ತಾಳೆ.

ಶ್ಯಾಮ ಬ್ಯಾಗನ್ನು ಎತ್ತಿ ಹಾಸಿಗೆಯ ಮೇಲೆ ಬಿಸಾಡುತ್ತಾನೆ. ಇತು ಚಕಿತಗೊಳ್ಳುತ್ತಾಳೆ. ಅನಂತರ ನಿದ್ದೆ ಹಾಗೂ ಸ್ವಪ್ನಾವಸ್ಥೆಗಳಿಂದ ಜಾಗೃತಳಾದಂತೆ ಬ್ಯಾಗನ್ನು ಕೈಯಲ್ಲಿ ಎತ್ತಿಕೊಂಡು ಮೇಲೆದ್ದು ನಿಂತುಕೊಂಡು ಬಾಗಿಲ ಬಳಿ ಹೋಗಿ ಸ್ವಲ್ಪ ನಿಂತು ಹೇಳುತ್ತಾಳೆ – ನಿನ್ನ ಹಾಸಿಗೆ ತುಂಬಾ ಕೂಚ ಕೂಚ ಎಂದು ಆಗಿ ಹೋಗಿದೆ.

ಶ್ಯಾಮ ಹೌದು ಎಂದು ತಲೆ ಅಲ್ಲಾಡಿಸುತ್ತಾನೆ.

–ನೀನು ತುಂಬಾ ದಿನಗಳಿಂದ ಗಡ್ಡ ಬೋಳಿಸಿಕೊಂಡಿಲ್ಲ ಅಲ್ವಾ.

ಶ್ಯಾಮ ಹೌದು ಎಂದು ತಲೆ ಅಲ್ಲಾಡಿಸುತ್ತಾನೆ.

–ನೀನು ತುಂಬಾ ರೋಗಿಷ್ಟನಂತೆ ಆಗಿ ಹೋಗಿದ್ದೀಯಾ.

ಶ್ಯಾಮ ಹೌದೆಂದು ನಗುತ್ತಾನೆ.

–ಬರುತ್ತೀನಿ ಶ್ಯಾಮ.

–ಸರಿ.

ಚಿಕ್ಕ ಪ್ಯಾಸೇಜನ್ನು ದಾಟಿಕೊಂಡು ಇತು ಮೆಟ್ಟಿಲಿನ ಕಡೆ ಹೋಗುತ್ತಿರುವುದನ್ನು ಶ್ಯಾಮ ನೋಡುತ್ತಾನೆ. ಇತುವನ್ನು ಕರೆದು – ಇತು ಸೀರೇನ ಸರಿಯಾಗಿ ಉಟ್ಟುಕೊಂಡು ಹೋಗು ಅಂತ ಹೇಳೋಣವೆಂದು ಶ್ಯಾಮನಿಗೆ ಒಂದು ಕ್ಷಣ ಅನ್ನಿಸುತ್ತೆ. ಮರುಕ್ಷಣದಲ್ಲೇ – ಇರಲಿ ಬಿಡು ಎಂದೆನಿಸುತ್ತೆ. ಇತು ತುಂಬಾ ಚೆನ್ನಾಗಿ ಕಾಣಿಸುತ್ತಾ ಇದ್ದಾಳೆ ಎಂದು ಯಾಕೋ ಏನೋ ಅವನ ಮನಸ್ಸಿಗೆ ಅನ್ನಿಸುತ್ತೆ.

# 3

–ನೀವು ಆಟಗಾರರಾಗಿದ್ದಿರಾ?

–ಹೌದು.

–ನೀವು ಯಾವ ಯಾವ ಆಟಗಳನ್ನು ಆಡುತ್ತಿದ್ದಿರಿ?

ಸ್ವಲ್ಪ ಸಶಬ್ದವಾಗೇ ಕುರ್ಚಿಯಿಂದ ಎದ್ದು ನಿಂತುಕೊಂಡು ಬಾಸ್ಕೆಟ್ ಬಾಲ್ ಹಾಗೂ ಕೇರಮ್ ಎಂದ ಶ್ಯಾಮ.

ಆ ವ್ಯಕ್ತಿ ಸರಸರನೇ ತನ್ನ ಕನ್ನಡಕವನ್ನು ಕೈಗೆ ತೆಗೆದುಕೊಂಡು, ಟೇಬಲಿನ ಕಾಗದ ಪತ್ರಗಳ ಕಡೆ ನೋಡಿ, ಏನು ಇಲ್ಲಿ ಕ್ರಿಕೆಟ್ ಹಾಗೂ ಫುಟ್‌ಬಾಲ್ ಅಂತ ಬರೆದಿದೆಯಲ್ಲಾ ಎಂದೆನ್ನುತ್ತಾನೆ.

ಶ್ಯಾಮ ಟೇಬಲಿನ ಮೆಲೆ ಬಗ್ಗಿ – ದೆನ್ ವೈ ಡು ಯು ಆಸ್ಕ್ ಎಂದು ಕೇಳುತ್ತಾನೆ.

ಆಶ್ಚರ್ಯದ ಕಣ್ಣುಗಳಿಂದ ಆ ವ್ಯಕ್ತಿ ಶ್ಯಾಮನನ್ನು ಸ್ವಲ್ಪ ನೋಡಿ ಹೇಳುತ್ತಾನೆ, ಹುಂ ಸರಿ ನೀವು ಕುಳಿತುಕೊಳ್ಳಿ.

ಶ್ಯಾಮ ಪುನಃ ಕುಳಿತುಕೊಳ್ಳುತ್ತಾನೆ. ಅವನ ಕೆನ್ನೆ ತುಂಬಾ ಉರಿಯುತ್ತಿತ್ತು. ತುಂಬಾ ದಿನಗಳ ನಂತರ ಕೆನ್ನೆಯ ಮೇಲೆ ಕತ್ತಿ ಬಿದ್ದುದರಿಂದ ಗಡ್ಡದ ಕೂದಲಿನ ಬೇರು ಹಿಗ್ಗಿಕೊಂಡಿದೆ. ಅವನು ತನ್ನ ಕೆನ್ನೆಯ ಮೇಲೆ ಕೈಯಾಡಿಸುತ್ತಾ ಕುಳಿತಿದ್ದ. ಉದ್ದನೆಯ ಸೆಕ್ರೇಟರಿಯೇಟ್ ಟೇಬಲಿನ ಅ ಕಡೆ ಮೂರು ಜನ, ಈ ಕಡೆ ಶ್ಯಾಮ ಒಬ್ಬನೇ. ಆ ಕಡೆಯ ಮತ್ತಿಬ್ಬರ ಕಡೆ ಶ್ಯಾಮ ನೋಡುವುದಿಲ್ಲ. ಶ್ಯಾಮ ಅವನ ಮುಖದೆದುರು ಮಧ್ಯದಲ್ಲಿ, ಅಲ್ಪ ವಯಸ್ಸಿನ ಯಾವ ವ್ಯಕ್ತಿ ಕುಳಿತುಕೊಂಡಿದ್ದನೋ ಅವನನ್ನೇ ದಿಟ್ಟಿಸಿ ನೋಡುತ್ತಿದ್ದ. ಆ ವ್ಯಕ್ತಿ ಪುನಃ ಕಾಗದ ಪತ್ರಗಳಿಂದ ತನ್ನ ಮುಖವನ್ನು ಎತ್ತಿ ಶ್ಯಾಮನನ್ನು ಪ್ರಶ್ನೆ ಕೇಳುತ್ತಿದ್ದ. 'ಕವರ್ ಪೇಯಿಂಟ್ ಯಾವ ಅಂಚಿನದು ಎನ್ನುವುದನ್ನು, ಡಯಾಗ್ರಾಮ್ ನೋಡದೆಯೇ ಕೇವಲ ಬಾಯಲ್ಲೇ ವಿವರಿಸಿ ನೋಡೋಣ' ಎಂದು ಆ ವ್ಯಕ್ತಿ ಶ್ಯಾಮನನ್ನು ಕೇಳಿದ.

ಶ್ಯಾಮ, ಟೇಬಲಿನ ಕೆಳಗೆ, ತನ್ನ ಕಾಲುಗಳನ್ನು ಕುಣಿಸುತ್ತಾ, ನಿರ್ವಿಕಾರ ಭಾವದಿಂದ ಹೇಳುತ್ತಾನೆ 'ನನಗೆ ಮರೆತು ಹೋಗಿದೆ'.

ಆ ವ್ಯಕ್ತಿ ಬಾಯಿ ತೆರೆದು ಮಾತನಾಡುವ ಮೊದಲೇ ಶ್ಯಾಮ ಬೇಗ ಬೇಗನೆ ಹೇಳುತ್ತಾನೆ–ನಾನು ಸಿವಿಲ್ ಡ್ರಾಫ್ಟ್ಸ್‌ಮನ್, ನನ್ನ ಆಟ ತೆಗೆದುಕೊಂಡು ನೀವೇನು ಮಾಡುತ್ತೀರ?

ಆ ವ್ಯಕ್ತಿ ಹತಾಶ ಭಾವದಿಂದ, ಕುರ್ಚಿಯ ಬೆನ್ನಿಗೊರಗಿ, ಒಂದು ಪೆನ್ಸಿಲ್ಲನ್ನು ಮುಖದೆದುರು ಅಡ್ಡವಾಗಿ ಇಟ್ಟುಕೊಂಡು, ಚಿಂತಿತವದನನಾಗಿ ಇವನ ಕಡೆಯೇ ನೋಡುತ್ತಿದ್ದ.

ಅಷ್ಟರಲ್ಲೇ ಬಲಭಾಗದಿಂದ ಇಂಗ್ಲೀಷ್‌ನಲ್ಲಿ ಪ್ರಶ್ನೆ ಕೇಳಿ ಬರುತ್ತೆ – ಹೂ ಈಸ್ ಡೀನ್ ರಸ್ಕ್?

ಶ್ಯಾಮ ಆ ವ್ಯಕ್ತಿಯನ್ನು ಅರೆಕ್ಷಣ ನೋಡಿದ. ಅರೆ ಮುದುಕ, ಬೋಳು ತಲೆ, ದೊಡ್ಡ ಮೀಸೆ ಮತ್ತು ಆತನ ಮುಖದ ಮೇಲೆ ಕಪಟ ಕುಟಿಲತನದ ನಗೆ ಕಂಡು ಬರುತ್ತದೆ.

ಶ್ಯಾಮ ತಲೆ ತಣ್ಣಗಾಗಿಟ್ಟು ಹೇಳುತ್ತಾನೆ. 'ನಾನು ರಿಪೋರ್ಟರ್‌ನಲ್ಲ' ಆ ಮೇಲೆ ತೊಡೆಯ ಮೇಲೆ ಇಟ್ಟುಕೊಂಡ ಡ್ರಾಯಿಂಗ್ ಫೈಲನ್ನು ಟೇಬಲಿನ ಮೇಲೆ ಇಟ್ಟು ನೀವು ನನ್ನ ಡ್ರಾಯಿಂಗ್‌ನ ನೋಡುತ್ತೀರಾ? ಎಂದು ಕೇಳುತ್ತಾನೆ.

ಆ ವ್ಯಕ್ತಿ ಅದೇ ರೀತಿ ಶಾಂತ ನಗೆ ನಕ್ಕು ನಮಗೆ ಕೇವಲ ಡ್ರಾಫ್ಟ್ಸ್‌ಮನ್ ಅಲ್ಲ, ಒಬ್ಬ ಅಪ್‌ಟುಡೇಟ್ ವ್ಯಕ್ತಿ ಬೇಕು. ನಿಮ್ಮ ಕಾಗದ ಪತ್ರದಲ್ಲಿ ನೀವು ಸೇಂಟ್ ಎಂಡ್ ಮಿಲರ್‌ನಲ್ಲಿ ಅಡ್‌ಮಿನಿಸ್ಟ್ರೇಷನ್ ಕೆಲಸ ಮಾಡುತ್ತಿದ್ದಿರಿ, ಡ್ರಾಫ್ಟ್ಸ್‌ಮನ್ ಕೆಲಸವಲ್ಲ ಎಂದು ಬರೆದಿದೆ. ಈ ಪ್ರಶ್ನೆಯ ಉತ್ತರ ಹೇಳಿ.

ಶ್ಯಾಮ್ ತೀವ್ರವಾಗಿ ಯೋಚಿಸಿದ. ಅವನಿಗೆ ಏನೂ ಹೊಳೆಯಲಿಲ್ಲ. ಅವನ ತಲೆ ಮೇಲೆ ರಭಸದಿಂದ ನೀರು ಸುರಿದಂತೆ ಅವನಿಗನಿಸಿತು. ಆದರೂ ಅವನು ಶಾಂತನಾಗಿ, ಬೇರೇನೂ ಯೋಚನೆ ಮಾಡದೆ ಮೂರು ಜನ ಡೀನ್ ರಸ್ಕ್ ಇದ್ದಾರೆ, ನೀವು ಯಾರ ಬಗ್ಗೆ ಕೇಳುತ್ತಾ ಇದ್ದೀರಾ? ಎಂದು ಅವರನ್ನೇ ಕೇಳಿದ.

ಆ ವ್ಯಕ್ತಿ ಸ್ವಲ್ಪ ಆಶ್ಚರ್ಯಗೊಂಡು – ಬಾಕಿ ಇನ್ನಿಬ್ಬರು ಯಾರು? ಎಂದು ಪ್ರಶ್ನಿಸಿದ.

ಶ್ಯಾಮ ಕಣ್ಣು ಮುಚ್ಚಿ, ಹಾಗೇ ಅಂದಾಜಿನ ಮೇಲೆ ಹೇಳಿದ, ಒಬ್ಬ ನ್ಯೂಜಿಲೆಂಡ್ ಆಟಗಾರ, ಮತ್ತೊಬ್ಬ ಆಸ್ಟ್ರೇಲಿಯನ್ ಕೆಮಿಸ್ಟ್.

ನಿದ್ರೆಯಿಂದ ಎಚ್ಚರಗೊಂಡಂತೆ ಆ ವ್ಯಕ್ತಿ ಕೇಳಿದ – ದಿ ಥರ್ಡ್‌ವನ್?

ಶ್ಯಾಮ ಅಸಹಾಯ ಭಾವದಿಂದ ಆ ವ್ಯಕ್ತಿಯ ಕಡೆ ದಿಟ್ಟಿಸಿ ನೋಡಿ ಮೆಲ್ಲಗೆ ಹೇಳುತ್ತಾನೆ – ದಿ ಥರ್ಡ್‌ವನ್ ಮಸ್ಟ ಬಿ ಅನ್‌ಇಂಪಾರ್ಟೆಂಟ್ ಅಂತ ಕಾಣಿಸುತ್ತೆ. ನನಗೆ ಸರಿಯಾಗಿ ಗೊತ್ತಿಲ್ಲ.

–ಆದರೆ ಮೂರು ಜನ ಇದಾರೆ ಅಂತ ನೀವೇ ಹೇಳಿದಿರಿ. ಮತ್ತೊಬ್ಬ ಯಾರು ಅಂತ ನಿಮಗೆ ತಿಳಿದಿರಬೇಕಾದದ್ದು ಉಚಿತ. ಆದರೆ ನಿಮಗೆ ಗೊತ್ತಿಲ್ಲ ಅಂತ ಹೇಳುತ್ತೀರ.

ಶ್ಯಾಮ ತನಗೆ ಗೊತ್ತಿಲ್ಲವೆಂದು ತಲೆ ಅಲ್ಲಾಡಿಸುತ್ತಾನೆ. ಅನಂತರ ಮೆಲ್ಲ ಮೆಲ್ಲನೆ ಹೇಳುತ್ತಾನೆ. ಯಾವ ರೀತಿ ಡೀನ್ ರಸ್ಕ್ ಎಂಬ ಹೆಸರಿನ ವ್ಯಕ್ತಿ ಇದ್ದನೋ ಇಲ್ಲವೋ ಎನ್ನುವುದು ನನಗೆ ಸರಿಯಾಗಿ ಗೊತ್ತಿಲ್ಲವೋ, ಅದೇ ರೀತಿ ಡೀನ್ ರಸ್ಕನಿಗೆ ಕೂಡ ಶ್ಯಾಮ ಚಕ್ರವರ್ತಿ ಎಂಬ ಹೆಸರಿನ ವ್ಯಕ್ತಿ ಇದ್ದಾನೋ ಇಲ್ಲವೋ ಎನ್ನುವುದು ಗೊತ್ತಿಲ್ಲ. ಇಟ್ ಈಸ್ ಮ್ಯೂಚ್ಯುವಲ್ ಇಗ್ನೋರೆನ್ಸ್ ಸಾರ್.

ಅನಂತರ ಸ್ವಲ್ಪ ಹೊತ್ತು ನೀರವತೆಯಲ್ಲೇ ಕಳೆಯುತ್ತದೆ. ಮತ್ತೇನು ಮಾತು ಕತೆಯಾಗುವುದಿಲ್ಲ. ಶ್ಯಾಮ ಮಾತನಾಡದೆ, ಆ ಮೂರು ಜನರನ್ನು ಎವೆ ಇಕ್ಕದೆ ನೋಡುತ್ತಾನೆ. ಬಲಗಡೆಯಲ್ಲಿ ಮಧ್ಯ ವಯಸ್ಸಿನ, ಕಪ್ಪು, ರೋಗಿಷ್ಟ ಮುಖದ, ಮದ್ರಾಸಿ ಮಹಾಶಯನನ್ನು ನೋಡಿದರೆ, ಕೆಳದರ್ಜೆಯ ಆಫೀಸರ್ ಎಂಬ ಭಾವನೆ ಮೂಡುತ್ತದೆ. ಆ ವ್ಯಕ್ತಿ ತನ್ನ ಮೇಲಿನವರ ಮುಂದೆ ಯಾವಾಗಲೂ ತಲೆ ತಗ್ಗಿಸಿ ಕುಳಿತು ಕೊಂಡಿದ್ದಾನೆ, ಒಂದು ಮಾತನ್ನೂ ಆಡುವುದಿಲ್ಲ. ಎದುರು ಕುಳಿತ ಅಲ್ಪ ವಯಸ್ಸಿನ ಬೆಂಗಾಲಿ ವ್ಯಕ್ತಿ ತುಂಬಾ ಚುರುಕು, ಅಹಂಕಾರಿ. ತುಂಬಾ ಬೇಗ ಬೇಗ ಮೇಲೆ ಏರಿ ಹೋಗ ಬಯಸುತ್ತಾನೆ. ಪ್ರಪಂಚದಲ್ಲಿ ಅನೇಕರು ಅವನಂತೆಯೇ. ಎಡಗಡೆಯ ಅರೆ ಮುದುಕ ವ್ಯಕ್ತಿ ಮಾತ್ರ ಎಲ್ಲರಿಗಿಂತ ತುಂಬಾ ಶಾಂತನಾಗಿದ್ದ. ಮುಖದಲ್ಲಿ ಮುಗುಳ್ನಗೆ ಆದರೂ ಕಲ್ಲಿನಂತೆ ಅಚಲವಾದ ಮುಖ; ಒಂದು ಸ್ನಾಯು ಕೂಡ ಅಲ್ಲಾಡುವುದಿಲ್ಲ. ಅವನನ್ನು ನೋಡಿದರೆ ಯಾವ ಪ್ರಾಂತ್ಯಕ್ಕೆ ಸೇರಿದವನು ಎಂದು ತಟ್ಟನೆ ಹೇಳಲಾಗುವುದಿಲ್ಲ. ಶ್ಯಾಮನಿಗೆ ಆಕಳಿಕೆ ಬರುತ್ತದೆ. ಹಾಗೇ ತೂಕಡಿಕೆಯೂ ಬರುತ್ತೆ. ಇವರುಗಳು ನಾಯಿಯಂತೆ ಸತರ್ಕ ಉಳ್ಳವರು ಎಂದು ಶ್ಯಾಮನಿಗೆ ಗೊತ್ತು. ಆದಕ್ಕೆ ಅವರು ಮೊಲದಂತೆ ಕಿವಿ ಚುರುಕಾಗಿರುವ ವ್ಯಕ್ತಿಯನ್ನೇ ಬಯಸುತ್ತಾರೆ. ಆದರೂ ಅವನು ಎಚ್ಚರಿಕೆ ವಹಿಸುವುದಿಲ್ಲ. ಅವನು ಕಣ್ಣು ಮುಚ್ಚಿ, ಆಕಳಿಸುತ್ತಾ, ತಲೆಯನ್ನು ಕುರ್ಚಿಯ ಹಿಂಬದಿಗೆ ಒರಗಿಸಿ ಕುಳಿತುಕೊಳ್ಳುತ್ತಾನೆ.

ಶ್ಯಾಮ ಮೆಲ್ಲನೆ ಎದ್ದು, ಸುಸ್ತು ಹೆಜ್ಜೆಯಿಂದ ಬಾಗಿಲ ಕಡೆ ನಡೆದು ಹೋಗುತ್ತಾನೆ. ಅವನು ಅರ್ಧದಲ್ಲೇ ತಡೆದು ನಿಲ್ಲುತ್ತಾನೆ. ಶ್ಯಾಮ ವಿಚಲಿತನಾಗುತ್ತಾನೆ. ಬಾಗಿಲು ಬಲಗಡೆ ಸರಿದು ಹೋಗಿದೆ. ಅವನು ಬಲಗಡೆ ನಡೆದು ಹೋಗಲು ಪ್ರಯತ್ನಿಸುತ್ತಾನೆ. ಅವನಿಗೆ ತನ್ನ ಪ್ರಯತ್ನ ಪ್ರಯೋಜನವಿಲ್ಲದ್ದು ಎಂದು ಅನಂತರ ತಿಳಿಯುತ್ತೆ, ಕಾರಣ ಬಾಗಿಲು ಚಕ್ರಾಕಾರವಾಗಿ ಬಲದಿಂದ ಮೆಲ್ಲ ಮೆಲ್ಲನೆ ಎಡಗಡೆ ತಿರುಗುತ್ತಾ ಇದೆ. ತುಂಬಾ ಆಶ್ಚರ್ಯ. ಅವನು ಪುನಃ ನಿಂತುಕೊಳ್ಳುತ್ತಾನೆ. ಅವನ ಮೈಯಲ್ಲಿ ಮುಳ್ಳುಗಳೇಳುತ್ತೆ. ಅವನು ಕಣ್ಣು ಮುಚ್ಚಿ ಒಂದೆರಡು ಹೆಜ್ಜೆ ನಡೆಯುತ್ತಾನೆ. ಅನಂತರ ಅವನು ಕಣ್ಣು ತೆರೆದು ನೋಡುತ್ತಾನೆ. ತಾನು ಸೆಕ್ರೇಟರಿಯೇಟ್ ಟೇಬಲಿನ ಎದುರು ಬಂದು ನಿಂತುಕೊಂಡಿದ್ದಾನೆ. ಟೇಬಲಿನ ಆ ಕಡೆಯ ಮೂರು ಜನರೂ ಕೌತುಕದಿಂದ ಇವನನ್ನೇ ದಿಟ್ಟಿಸಿ ನೋಡುತ್ತಾ ಇದ್ದಾರೆ. ಶ್ಯಾಮನಿಗೆ ಸ್ವಲ್ಪ ನಾಚಿಕೆ ಎನಿಸುತ್ತೆ. ಶ್ಯಾಮ ಆ ಮೂರು ಜನರ ಕಡೆ ತಿರುಗಿ, ದೇಶಾವರಿ ನಗೆ ಬೀರಿ ಅನಾವಶ್ಯಕವಾಗಿ ಮಾತನಾಡುತ್ತಾನೆ. ನೀವೆಲ್ಲ ನನ್ನ ಡ್ರಾಯಿಂಗ್ ನೋಡಿದ್ದೀರ. ಹಾಗೇ ನನ್ನನ್ನೂ, ನನ್ನ ಕಾಗದ ಪತ್ರಗಳನ್ನೂ ಕೂಡಾ ನೋಡಿದ್ದೀರ. ಹಾಗೇ ಈಗ ನಾನು ನಿಮ್ಮನ್ನು ಒಂದು ಪ್ರಶ್ನೆ ಕೇಳುತ್ತೇನೆ. ಏನು ಈ ಕೆಲಸ ನನ್ನದಾಗಲು ಸಾಧ್ಯವೇ ಎಂದು ಕೇಳುತ್ತಾ ಅವನು ಒಂದೊಂದೇ ಹೆಜ್ಜೆ ಹಿಂದೆ ಸರಿಯುತ್ತಾ ಹೋಗುತ್ತಾನೆ. ಮಧ್ಯದ ಹಾಗೂ ಎಡ, ಬಲದ ವ್ಯಕ್ತಿಗಳು ಏನೂ ಮಾತನಾಡುವುದಿಲ್ಲ. ಬಹುಶಃ ಇವನ ಅವಸ್ಥೆಯನ್ನು ನೋಡಿ ಅವರು ಕಸಿವಿಸಿಗೊಂಡು, ತಮ್ಮ ಕಣ್ಣುಗಳನ್ನು ಬೇರೆಡೆಗೆ ಹೊರಳಿಸುತ್ತಾರೆ. ಬಲಗಡೆಯ ಅರೆ

ಮುದುಕ ವ್ಯಕ್ತಿ, ಸ್ಥಿರ ಕಣ್ಣುಗಳಿಂದ ಶ್ಯಾಮನ ಕಡೆ ನೋಡುತ್ತ, ತಲೆ ಅಲ್ಲಾಡಿಸಿ ಶಾಂತಸ್ವರದಲ್ಲಿ ಹೇಳುತ್ತಾನೆ. ಸೈಕಲಾಜಿಕಲಿ ಯು ಆರ್ ಅನ್ ಫಿಟ್ ಫಾರ್ ದಿ ಜಾಬ್.

ಶ್ಯಾಮ ಕೈ ಹಿಂದೆ ಚಾಚಿ ಬಾಗಿಲ ದುಂಡನೆಯ ಹಿಡಿಯನ್ನು ಹಿಡಿದುಕೊಳ್ಳುತ್ತಾನೆ. ಆ ಮೇಲೆ 'ಯೂ' ಎಂದು ಜೋರಾಗಿ ಕಿರುಚಿ ನಕ್ಕು ಮುಂದೆ ಹೋಗಿ ಆ ವ್ಯಕ್ತಿಯ ಬೆನ್ನು ಚಪ್ಪರಿಸಿ – ನನಗೆ ಗೊತ್ತಿತ್ತು, ನೀನೇ ಎಲ್ಲರಿಗಿಂತ ಜಾಣ ಅಂತ, ಹೇಳುತ್ತಾನೆ – "ನಾನಾಗಿದ್ದರೆ ನಿನ್ನನ್ನೇ ನಮ್ಮ ಕಂಪನಿಗೆ ತೆಗೆದುಕೊಳ್ಳುತ್ತಿದ್ದೆ" ಎಂದು ಅವನಿಗೆ ಹೇಳಬೇಕೆಂದು ಶ್ಯಾಮನಿಗನಿಸುತ್ತದೆ.

ತಟ್ಟನೆ ಬಾಗಿಲು ಸರಿಸಿ ಶ್ಯಾಮ ಹೊರ ಬಂದು ಕರವಸ್ತ್ರದಿಂದ ಮುಖ ಒರೆಸಿಕೊಳ್ಳುತ್ತಾನೆ. ಹೊರ ವರಾಂಡದಲ್ಲಿ ಸ್ವಲ್ಪ ನಿಂತುಕೊಂಡು ಅನಂತರ ಅವನು ಮೆಲ್ಲನೆ ಮೆಟ್ಟಲುಗಳನ್ನು ಇಳಿಯುತ್ತಾನೆ. ಈಗ ಅವನು ನಡೆಯುವ ದಿಕ್ಕು ಸರಿಯಾಗಿರುತ್ತೆ, ಕಾಲುಗಳ ಚಲನೆಯಲ್ಲಿ ಅವನಿಗೇನೂ ಕಷ್ಟವಾಗುವುದಿಲ್ಲ. ಅವನ ನಡಿಗೆ ಸರಿಯಾಗಿದೆ, ಅಡ್ಡಾದಿಡ್ಡಿಯಾಗೇನೂ ಇರುವುದಿಲ್ಲ.

ಕೆಲಸವಾಗಲಿಲ್ಲ ಎಂದು ನಿಜವಾಗಿ ಅವನಿಗೆ ತುಂಬಾ ಹಾಯೆನಿಸುತ್ತದೆ. ಅವನ ಕಣ್ಣು ಮುಖದ ಮೇಲೆ ತಣ್ಣನೆಯ ಗಾಳಿ ಬೀಸುತ್ತದೆ.

ವಸ್ತುತಃ ಅಲ್ಲಿ ಅವನು ಮಾಡುವುದು ಏನೂ ಬಾಕಿಯಿಲ್ಲ ಎನ್ನುವುದು ಅವನಿಗೆ ತಿಳಿಯುತ್ತದೆ.

# 4

ಇಪ್ಪತ್ಮೂರು ಡಿಸೆಂಬರಿನಂದು ಶ್ಯಾಮ ತನ್ನ ಮೂವತ್ತೊಂದನೆಯ ಜನ್ಮದಿನವನ್ನು ದಾಟುತ್ತಾನೆ. ಬೆಳಗಿನ ಜಾವ ಎಚ್ಚರವಾಗುತ್ತಲೇ ಇಂದು ತನ್ನ ಜನ್ಮದಿನ ಎಂದು ಅವನಿಗೆ ನೆನಪಾಗುತ್ತದೆ. ಆಗಲೂ ಶ್ಯಾಮ ಹಾಸಿಗೆ ಬಿಟ್ಟು ಏಳುವುದಿಲ್ಲ. ಕಣ್ಣಿನಲ್ಲಿ ಇನ್ನೂ ಅರೆ ನಿದ್ದೆ, ಹೊದಿಕೆಯ ಮುಸುಕಿನೊಳಗೇ ಅನೇಕ ಸಲ ಮನದಲ್ಲೇ ಗೊಣಗುಟ್ಟಿದ – ಆಹಾ ಇಂದು ನನ್ನ ಜನ್ಮ ದಿನ. ಇಷ್ಟು ದಿನ ಅವನು ತನ್ನ ಜನ್ಮ ದಿನದ ಲೆಕ್ಕ ಇಡುತ್ತಿರಲಿಲ್ಲ. ಲೆಕ್ಕ ಇಟ್ಟರೆ ಜೀವನದ ಸ್ಪೀಡ್ ಕಡಿಮೆಯಾಗುತ್ತದೆ ಎಂಬ ಭಾನವೆಯಿತ್ತು. ಹಾಗೇ ಮನಸ್ಸಿನಲ್ಲಿ ಅಂದುಕೊಳ್ಳಿ – ಒಂದು ವೇಳೆ ನೀವು ಮೆಟ್ಟಲು ಹತ್ತುತ್ತಾನೋ ಅಥವಾ ಇಳಿಯುತ್ತಾನೋ ಇದ್ದೀರ, ಲಿಫ್ಟಿನ ಬಾಗಿಲನ್ನು ತೆರೆಯುತ್ತಲೋ ಅಥವಾ ಮುಚ್ಚುತ್ತಲೋ ಇದ್ದೀರ, ಬೂಟ್ಸಿನ ಲೇಸನ್ನು ಕಟ್ಟುತ್ತಲೋ ಅಥವಾ

/ಬಿಚ್ಚುತ್ತಲೋ ಇದ್ದೀರ, ಮುತ್ತು ಕೊಡಬೇಕೂ ಎಂದು ತುಟಿ ಮುಂದೆ ಮಾಡಿದ್ದೀರ, ಗಡ್ಡ ಹೆರೆಯಲು ಹೋಗಿ ಕತ್ತಿ ನಿಮ್ಮ ಗಡ್ಡದ ಕೆಳ ಭಾಗಕ್ಕೆ ಸ್ವಲ್ಪದರಲ್ಲೇ ತಗಲುತ್ತೆ. ಹಾಗೆಯೇ ವಯಸ್ಸು ದಿನೇ ದಿನೇ ಹೆಚ್ಚಾಗುತ್ತಾ ಇದೆ ಎನ್ನುವ ಯೋಚನೆ ಬಂದರೆ, ಕೈಕಾಲುಗಳು ತಣ್ಣಗಾಗಿ ಬಿಡುತ್ತವೆ. ಮನಸ್ಸು ತೂಕಡಿಸುತ್ತದೆ. ಆಕಳಿಕೆ ಬರುತ್ತದೆ. ಅನಾವಶ್ಯಕವಾಗಿ ಇವನ್ನೆಲ್ಲ ಮಾಡಿದರೆ ಏನಾಗುತ್ತದೆ? ಕೊನೆಯವರೆಗೂ ಏನೂ ಉಳಿಯುವುದಿಲ್ಲ ಎಂಬುದು ಮನಸ್ಸಿಗೆ ಅರಿವಾಗುತ್ತದೆ. ಅದಕ್ಕಾಗಿಯೇ ಶ್ಯಾಮ ಯಾವ ವರ್ಷವೂ ತನ್ನ ಜನ್ಮದಿನದಂದು ಯಾವ ಸಮಾರಂಭವನ್ನೂ ಆಚರಿಸಿಲ್ಲ. ಇಪ್ಪತ್ಮೂರು ಡಿಸೆಂಬರ್ ಅವನಿಗೆ ನೆನಪೇ ಇರುವುದಿಲ್ಲ.

ಶ್ಯಾಮ ಪ್ರತಿ ದಿನಕ್ಕಿಂತಲೂ, ಸ್ವಲ್ಪ ಹೊತ್ತು ಮೂಡಿ ಹಾಸಿಗೆ ಬಿಟ್ಟಿದ್ದ. ಮುಖ ತೊಳೆದುಕೊಂಡು ಶ್ಯಾಮ ಕನ್ನಡಿಯಲ್ಲಿ ಮುಖ ನೋಡಿಕೊಳ್ಳುತ್ತಾನೆ. ಈ ನಡುವೆ ಅವನು ತೀರಾ ಸಾಧು ಸಂತರ ಹಾಗೆ ಕಾಣಿಸುತ್ತಾನೆ. ಕುತ್ತಿಗೆಯ ಹತ್ತಿರ ಕೂದಲು ಬೆಳೆದು, ಸಿಂಹದ ಕೇಸರಿಯಂತೆ ಕಾಣತೊಡಗಿದೆ.

ಕೈಯಲ್ಲಿ ಕನ್ನಡಿ ಹಿಡಿದುಕೊಂಡು ಶ್ಯಾಮ ಕಿಟಕಿಯ ಬಳಿ ಬಂದು ನಿಂತುಕೊಂಡ. ದಕ್ಷಿಣದ ಕಿಟಕಿಯಿಂದ ಬಿಸಿಲು ಬೀಳುತ್ತಾ ಇದೆ. ಎದುರಿನಲ್ಲಿ ಒಂದು ಮಾವಿನ ಮರ, ಒಂದೆರಡು ಎಲೆಗಳು. ನೆರಳಿನಲ್ಲಿ, ಒಂದು ಜೇಡರ ಬಲೆಯಲ್ಲಿ ಇನ್ನೂ ಮಂಜಿನ ಹನಿ ಸಿಕ್ಕಿಹಾಕಿಕೊಂಡಿದೆ. ಅವನ ಕೈಯೊಳಗಿನ ಕನ್ನಡಿಯೊಳಗಿಂದ ಬೆಳಕು ಹಾದು ನೀರ ಹನಿಯ ಮೇಲೆ ಬೀಳುತ್ತಲೂ ಶ್ಯಾಮ ಕನ್ನಡಿಯನ್ನು ಬೇರೆ ಕಡೆ ತಿರುಗಿಸಿಕೊಂಡ. ತಕ್ಷಣ ಬೆಳಕು ಎದುರು ದಿಕ್ಕಿನಲ್ಲಿರುವ ಮನೆಯ ಎರಡನೆಯ ಅಂತಸ್ತಿನ ಕಿಟಕಿಯ ಮೇಲೆ ಹೋಗಿ ಬಿತ್ತು. ಕೌತುಕದಿಂದ ಶ್ಯಾಮ ದಿಟ್ಟಿಸಿ ನೋಡಿದ. ಒಂದು ವಾಲ್ ಪೇಯಿಂಟಿಂಗ್‌ನ ಮೇಲೆ ಬೆಳಕು ಬಿದ್ದಿದೆ. ಅಲ್ಲಿಂದ ಬೆಳಕನ್ನು ಶ್ಯಾಮ ಒಬ್ಬ ಮುದುಕನ ಮೇಲೆ ಸರಿಸಿದ. ತುಟಿಯಲ್ಲಿ ಕೌತುಕದ ನಗೆ, ಹುಬ್ಬು ಕೊಂಕಿಸಿ ಶ್ಯಾಮ ತನ್ನಲ್ಲೇ ತಾನು ಹೇಳಿಕೊಂಡ ಬ್ಲ್ಯಾಕ್ ಮಾರ್ಕೆಟಿಯರ್. ಕೆಂಪು ಬಾಗಿಲಿನ, ಒಂದು ಗ್ಯಾರೇಜಿನ ಮುಂದಿನ ಕಸದ ಬುಟ್ಟಿಯ ಅಕ್ಕ ಪಕ್ಕ ಮೂರು ನಾಯಿ ಕುನ್ನಿಗಳು ಆಟವಾಡುತ್ತಿವೆ. ಶ್ಯಾಮ ಅವುಗಳ ಮೇಲೆ ಬೆಳಕು ಬೀರಿದ. ಆದರೆ ನಿರ್ಜನ ರಸ್ತೆಯಲ್ಲಿ ಯಥೇಷ್ಟ ಬಿಸಿಲಿನ ಕಾರಣ ಅವುಗಳ ಮೇಲೆ ಬೆಳಕು ಬೀಳಲಿಲ್ಲ. ಶ್ಯಾಮ ಬಗ್ಗಿ ಸ್ವಲ್ಪ ನೆರಳಿರುವ ಜಾಗವನ್ನು ಹುಡುಕಿದ. ಚಿಕ್ಕಂದಿನಲ್ಲಿ ಶ್ಯಾಮ ಈ ಬೆಳಕು ಬೀರುವ ಆಟವನ್ನು ತುಂಬಾ ಆಡಿದ್ದಾನೆ. ಈಗ ವಯಸ್ಸಾಗಿ ಹೋಗಿದೆ. ಇಂದು ಅವನು ತನ್ನ ಮೂವತ್ತೊಂದನೆಯ ವರ್ಷವನ್ನು ದಾಟಿ ಹೋಗುತ್ತಾ ಇದ್ದಾನೆ. ಆ ರೀತಿ ಯೋಚಿಸಿ ಶ್ಯಾಮ ನಕ್ಕ. ಆರನೆಯ ಅಥವಾ ಏಳನೆಯ ವಯಸ್ಸಿನ ಹುಡುಗರ ನಗೆಯಂತೆ ಇತ್ತು ಆ ನಗು. ಶ್ಯಾಮ ಕುತ್ತಿಗೆ ಹಿಗ್ಗಿಸಿ ನೋಡಿದ. ಎಡ ದಿಕ್ಕಿನ ಓಣಿಯಿಂದ ಬಿರುಸಾಗಿ ಒಂದು ಆಟೋ ರಿಕ್ಷಾ ಬರುತ್ತಿದೆ. ಅದರಲ್ಲಿ ಕೈಯಲ್ಲಿ ಗಿಟಾರ್ ಹಿಡಿದ ಒಬ್ಬ ಯುವತಿ, ಎಚ್ಚರಿಕೆಯಿಂದ ಶ್ಯಾಮ ತನ್ನ ಕೈಯೊಳಗಿನ ಕನ್ನಡಿಯನ್ನು ಭದ್ರಪಡಿಸಿಕೊಂಡ. ಯಾರಿಗೆ ಗೊತ್ತು ಆ ಯುವತಿಯ ಮೇಲೆ ಬೆಳಕು ಚೆಲ್ಲಿದರೆ

ಆ ಯುವತಿ ಮೆಟ್ಟಲು ಹತ್ತಿ ಬರುತ್ತಾಳೋ ಇಲ್ಲವೋ, ನನ್ನನ್ನು ಕರೆದಿರಾ ಅದಕ್ಕೆ ಬಂದೆ ಎಂದು ನಾಚಿಕೆಯಿಂದ ನಕ್ಕು ಹೇಳುತ್ತಾಳೋ ಇಲ್ಲವೋ. ಶ್ಯಾಮ ಸೀರೆ ಉಟ್ಟು ಕೈಯಲ್ಲಿ ಬ್ಯಾಗನ್ನು ಹಿಡಿದು ಹೊರಟ ಯುವತಿಯೊಬ್ಬಳನ್ನು ಬಿಟ್ಟು ಬಿಟ್ಟ. ಆ ಯುವತಿ ತುಂಬಾ ದೂರದವರೆಗೂ ನಡೆದು ಹೋದಳು. ಶ್ಯಾಮ ಹತ್ತಿರದ ಮನೆಯ ಗೋಡೆಯ ಮೇಲೆ ಅನೇಕ ಸಲ ಬೆಳಕನ್ನು ಕುಣಿಸಿದ. – ಒಂದು ಕಾಗೆ ಹಾರಿ ಹೋಗುತ್ತಾ ಇದೆ. ಒಂದು ಬಿಳಿ ಬೆಕ್ಕು ಮೆಟ್ಟಲ ಕೆಳಗಿನ ಸಂದಿಯಿಂದ ಹೊರಹಾರಿ ಬರುತ್ತಿದೆ. ಶ್ಯಾಮ ಆ ಬೆಕ್ಕಿನ ಮುಖದ ಮೇಲೆ ಬೆಳಕು ಚೆಲ್ಲಿದ. ಯಾವ ಪ್ರಯೋಜನವೂ ಆಗಲಿಲ್ಲ. ಮುಖ ತಿರುಗಿಸಿಕೊಂಡು, ರಾಜ ಠೀವಿಯಲ್ಲಿ, ಜಂಭದಿಂದ ಆ ಬೆಕ್ಕು ಮೆಟ್ಟಲು ಹಾರಿ, ಬಾಗಿಲು ಹೊಕ್ಕು ಹೊರಟು ಹೋಯಿತು. ರಸ್ತೆಯ ಆ ಬದಿಯಲ್ಲಿ, ದೂರದ ಒಂದು ಮನೆಯ ಕಿಟಕಿಯ ಮೆಲೆ ಮೆಲ್ಲನೆ ಬೆಳಕು ಬೀಳುತ್ತಲೇ, ಕೆಲವೊಂದು ಸಜ್ಜಾಗಿ, ಪೇರಿಸಿ ಇಟ್ಟಿದ್ದ ಲೋಟ ತಟ್ಟೆಗಳು ಪಳ ಪಳ ಹೊಳೆದವು. ಶ್ಯಾಮ ಬೆಳಕು ಚೆಲ್ಲುತ್ತಾ ಚೆಲ್ಲುತ್ತಾ ಕ್ರಮವಾಗಿ ಬೆಳಕಿನ ಓಡಾಟದ ಮೇಲೆ ಒಂದು ರೀತಿಯ ನಿಯಂತ್ರಣ ಸಂಪಾದಿಸಿಕೊಂಡ. ಮಿತ್ರನ ವಯಸ್ಸಾದ ತಂದೆ ಪೇಟೆಯಿಂದ ಹಿಂತಿರುಗುತ್ತಿದ್ದಾರೆ. ಹಿಂದೆಯೇ ಕೆಲಸದಾಳು. ಶ್ಯಾಮ ಅವರಿಬ್ಬರನ್ನು ಬಿಟ್ಟು ಬಿಟ್ಟ. ತುಂಬಾ ವೇಗವಾಗಿ ಒಂದು ಟ್ಯಾಕ್ಸಿ ಹೋಗುತ್ತಾ ಇದೆ. ಕಿಟಕಿಯ ಬದಿಯಲ್ಲಿ ಒಂದು ಅಬಂಗಾಲಿ ಹುಡುಗ ಕುಳಿತಿದ್ದಾನೆ. ಶ್ಯಾಮ ತಟ್ಟನೆ ಆ ಹುಡುಗನ ಮುಖದ ಮೇಲೆ ಬೆಳಕು ಚೆಲ್ಲಿದ. ಆ ಮೇಲೆ ಟ್ಯಾಕ್ಸಿಯ ಚಲನೆಯೊಂದಿಗೆ ಹೊಂದಾಣಿಕೆ ಇಟ್ಟುಕೊಂಡು ಬೆಳಕನ್ನು ಒಂದು ಕ್ಷಣ ಆ ಹುಡುಗನ ಮೇಲೆ ಸ್ಥಿರವಾಗಿರಿಸಿದ. ಅವನು ತನ್ನೆರಡೂ ಕೈಗಳಿಂದ ತನ್ನ ಕಣ್ಣುಗಳನ್ನು ಮರೆ ಮಾಡಿಕೊಂಡು, ಅವನ ಕಡೆ ನೋಡುತ್ತಾನೆ. ಟ್ಯಾಕ್ಸಿ ಸ್ವಲ್ಪ ದೂರ ಹೋಗುತ್ತಲೂ ಹಠಾತ್ ತನ್ನ ನಾಲಿಗೆ ಹೊರಚಾಚಿ ಅವನನ್ನು ಅಣಕಿಸುತ್ತಾನೆ. ಅನಂತರ ಶ್ಯಾಮನಿಗೆ ಬೆಳಕು ಚೆಲ್ಲಲು ಬೇಜಾರೆನಿಸುತ್ತದೆ. ಒಂದು ಹಸು, ಒಬ್ಬ ಮುದುಕಿ ಹಾಗೂ ಒಂದು ಸಿನೇಮಾ ಪೋಸ್ಟರಿನ ನಾಯಕಿಯ ಮುಖದ ಮೇಲೆ ಮೇಲಿಂದ ಮೇಲೆ ಬೆಳಕು ಚೆಲ್ಲುತ್ತಾನೆ. ಬೇಸರದಿಂದ ಶ್ಯಾಮ ಕನ್ನಡಿಯನ್ನು ಒಳಗಿಡಲೆಂದು ಒಳಗೆ ಬಂದಿದ್ದ. ಸರಿಯಾಗಿ ಅದೇ ಸಮಯಕ್ಕೆ, ಅವನಿಗೆ ಮೋಟರ್ ಸೈಕಲ್ ಬರುತ್ತಿರುವ ಶಬ್ದ ಕೇಳಿಸಿತು. ಅದು ಬಲಗಡೆಯ ಓಣಿಯಿಂದ ಬರುತ್ತಿದೆ. ಬೇಗನೆ ಅವನ ಕೈಕಾಲುಗಳ ಸ್ನಾಯುಗಳು ಗಟ್ಟಿಯಾಗುತ್ತವೆ. ಯಾವಾಗಲಿಂದಲೋ ಏನೋ, ಅಂತೂ ತುಂಬಾ ದಿನದಿಂದ ಯಾಕೋ ಏನೋ ಅವನಿಗೆ ಮೋಟಾರ್ ಸೈಕಲಿಸ್ಟ್‌ಗಳ ಮೇಲೆ ಒಂದು ತರಹ ಸಿಟ್ಟಿದೆ. ಅವನು ಬೇಗನೇ ಕಿಟಕಿಯ ಬಳಿ ಬರುತ್ತಾನೆ. ಮೋಟಾರ್ ಸೈಕಲ್ ಆಗತಾನೇ ಓಣಿಯ ತಿರುವಿನಲ್ಲಿ ತಿರುಗುತ್ತದೆ. ದೊಡ್ಡ ರಸ್ತೆಯಲ್ಲಿ ಒಂದು ಹಸು ಮೆಲ್ಲನೆ ರಸ್ತೆ ದಾಟುತ್ತಿರುವುದನ್ನು ಶ್ಯಾಮ ನೋಡಿದ. ರಸ್ತೆಯ ಅಂಚಿನಲ್ಲಿ ಮೋಟಾರ್ ಸೈಕಲಿನ ಮುಖ ಹಾಗೂ ಚಾಲಕನ ಕಪ್ಪು ತಲೆ ಕಾಣುತ್ತಲೇ ಶ್ಯಾಮನ ಕನ್ನಡಿಯ ಬೆಳಕು ಚಾಲಕನ ಮುಖದ ಮೇಲೆ ಹರಡಿ ಬಿತ್ತು. – ಸರಿಯಾಗಿ ಚಾಲಕನ ಮುಖದ ಮೇಲೇ ಬಿತ್ತು. ಬಿರುಗಾಳಿಯಂತೆ ಶಬ್ದ ಮಾಡುತ್ತಾ ಮೋಟಾರ್ ಸೈಕಲ್ ಬರುತ್ತಾ ಇತ್ತು. ಶ್ಯಾಮ ಒಂದು ಕ್ಷಣ ನೋಡಿದ.

ಚಾಲಕ ಆ ಬೆಳಕಿನಿಂದ ತನ್ನ ತಲೆ ಸರಿಸುವುದಕ್ಕಾಗಿ ವಾಲಿದನು. ಅನಂತರ ಕೇವಲ ಮೋಟಾರ್ ಸೈಕಲ್ ಹಾರಿ ಬಿದ್ದ ಭಯಂಕರ ಶಬ್ದವನ್ನು ಬಿಟ್ಟು ಬೇರೇನೂ ಶಬ್ದ ಕೇಳಿ ಬರಲಿಲ್ಲ. ತಟ್ಟನೆ ಶ್ಯಾಮ ನೆಲದ ಮೇಲೆ ಕುಸಿದು ಕುಳಿತುಕೊಂಡ. ಕಿಟಕಿಯ ಬಳಿಯಿಂದ ಅಂಬೆಗಾಲಿಕ್ಕುತ್ತಾ ಶ್ಯಾಮ ಕೋಣೆಯ ಒಳಗೆ ಸರಿದು ಹೋದ. ಕನ್ನಡಿಯನ್ನು ಹಾಸಿಗೆಯ ಮೆಲೆ ಬಿಸಾಡಿ, ಬೇಗ ಬಾಗಿಲಿಗೊಂದು ಬೀಗ ಜಡಿದು ಹೊರ ಹೊರಟ.

ರಸ್ತೆಯ ಗುಂಪನ್ನು ದಾಟಿ ಅವನು ಮುನ್ನಡೆದ. ಜನ ಬೇಗನೆ ಜಮಾಯಿಸಿದ್ದರು. ಶ್ಯಾಮ ಅವರ ಗುಂಪನ್ನೂ ಬಿಟ್ಟು ಬೇರೆ ಕಡೆ ಹೊರಟ. ಇಂದು ಬಿಸಿಲು ಚೆನ್ನಾಗಿದೆ ಹಾಗೂ ಚಳಿ ಕೂಡಾ ಇದೆ. ಅಂತೂ ತುಂಬಾ ಹುಡುಕಾಡಿ ಅವನು ಒಂದು ನಿರ್ಜನ ಚಹದಂಗಡಿಯನ್ನು ಹೊಕ್ಕ; ತುಂಬಾನೆ ನಿಕೃಷ್ಟವಾದ ಚಿಕ್ಕ ಅಂಗಡಿ. ಶ್ಯಾಮ ಮೂಲೆಯಲ್ಲಿನ ಒಂದು ಆಸನವನ್ನು ಆಕ್ರಮಿಸಿಕೊಂಡು ಕುಳಿತುಕೊಂಡ. ಯಾಕೋ ಏನೋ ಅವನಿಗೆ ಮೋಟಾರ್ ಸೈಕಲಿಸ್ಟಿನ ಮೇಲೆ ಏನೋ ಒಂದು ತರಹದ ಸಿಟ್ಟು ತುಂಬಾ ದಿನದಿಂದ ಇದೆ. ಆ ರೀತಿ ಯಾಕೆಂದು ಅವನಿಗೆ ತಿಳಿಯಲಿಲ್ಲ. ತಿಳಿಯ ಬಯಸಿದಾಗ ಅವನ ತಲೆಯೊಳಗೆ ಬಿಸಿ ನೀರು ಸುರಿದಂತೆನಿಸಿತು. ನೆಲದ ಮೇಲೆ ದಿನಪತ್ರಿಕೆ ಹರಡಿ ಬಿದ್ದಿತ್ತು. ಅವನು ಅದನ್ನ ಒಂದುಗೂಡಿಸಿ ಹೆಕ್ಕಿಕೊಂಡ. ತುಂಬಾ ದಿನಗಳಿಂದ ವೃತ್ತಪತ್ರಿಕೆಯನ್ನು ಅವನಿಂದ ಓದಲಾಗಿರಲಿಲ್ಲ. ಅನ್ಯಮನಸ್ಕನಾಗುವುದಕ್ಕೋಸ್ಕರ ಅವನು ವೃತ್ತ ಪತ್ರಿಕೆಯನ್ನು ಮುಖದೆದುರು ಬಿಡಿಸಿ ಇಟ್ಟುಕೊಂಡ. ವೃತ್ತಪತ್ರಿಕೆಯನ್ನು ಮುಖದೆದುರು ಹಿಡಿದುಕೊಂಡ ಕೂಡಲೇ ಅವನು ಪಂದ್ಯ ವೃತ್ತಾಂತವಿರುವ ಕೊನೆಯ ಪುಟದ ವರದಿಯನ್ನು ನೋಡಿದ. ಕ್ರಿಕೆಟ್ ಆಟದ ವರದಿಯಂತೆ ಒಬ್ಬ ಆಟಗಾರ ನಿನ್ನೆಯಿಂದ ತೊಂಭತ್ತೆಂಟು ರನ್ ಹೊಡೆದು ಇನ್ನೂ ನಾಟ್ ಔಟ್ ಆಗಿದ್ದಾನೆ. ಪಾಪ ಆ ಆಟಗಾರನಿಗೆ ನಿನ್ನೆಯಿಂದ ಚೆನ್ನಾಗಿ ನಿದ್ದೆ ಬಂದಿರಲಿಕ್ಕಿಲ್ಲ; ಕಡಿಮೆ ರನ್‌ಗೇ ಔಟಾಗಿ ಹೋಗಿದ್ದರೆ ಚೆನ್ನಾಗಿ ನಿದ್ದೆ ಮಾಡಿತ್ತಿದ್ದನೋ ಏನೋ. ಆದರೂ ಇನ್ನೂ ಎರಡು ರನ್ – ಕೇವಲ ಇನ್ನೆರಡೇ ಎರಡು. ಎಂಥಾ ಭಯಾನಕ ರನ್‌ಗಳು. ಇಪ್ಪತ್ತೆರಡು – ಇಪ್ಪತ್ನಾಲ್ಕು ಗಜ ಮಾತ್ರ. ಆ ವ್ಯಕ್ತಿಗೆ ಈಗಲೇ ನಲವತ್ತೆರಡು ಗಜದಿಂದ ಒಂದು ರನ್ ಕೊಟ್ಟು ಬರಬೇಕೆಂದು ಶ್ಯಾಮನಿಗೆ ಇಚ್ಛೆಯಾಯಿತು. ಆ ಎರಡು ರನ್‌ಗೋಸ್ಕರ ಇಡೀ ರಾತ್ರಿ ನಿದ್ದೆಮಾಡದೆ ಇರುವುದು, ಊಟ ಮಾಡಲು ಮನಸ್ಸಿಲ್ಲ, ಹೆಂಗಸರ ಬಗ್ಗೆ ಶೀತಲ ಆಚರಣೆ ಇವೆಲ್ಲವೂ ಅಸಂಭವ. ಪಾಪ ಈ ಎರಡು ರನ್ ಆಗಿ ಹೋಗಿದ್ದಿದ್ದರೆ....? ಆಗದಿದ್ದರೆ ಏನಾಗಬಹುದು ಎಂದು ಯೋಚಿಸಿ ಶ್ಯಾಮ ಅಸಹಾಯ ಭಾವದಿಂದ ಒಂದು ಸಲ ನಾಲ್ಕೂ ಕಡೆ ದಿಟ್ಟಿಸಿ ನೋಡಿದ. ಅವನ ಮನಸ್ಸಿಗೆನಿಸಿತು. ಆ ಎರಡು ರನ್ ಆಗೇ ಆಗುತ್ತೆ ಎಂದು. ಯಾವ ಮನುಷ್ಯನಿಂದಲೂ ಖಡಾ ಖಂಡಿತವಾಗಿ ಹೇಳಲಾಗುವುದಿಲ್ಲ, ದೈವವೇ ಕೊನೆಯದು. ಅದನ್ನು ಬಿಟ್ಟರೆ ಬೇರಿನ್ನೇನೂ ಇಲ್ಲ. ಹಾಗೇ ಯೋಚಿಸುತ್ತಾ ಯೋಚಿಸುತ್ತಾ ಶ್ಯಾಮನಿಗೆ ಸ್ವಲ್ಪ ಅಸ್ಥಿರತೆ ಎನ್ನಿಸಿತು. ಅವನು ವೃತ್ತಪತ್ರಿಕೆಯನ್ನು ಬಿಸಾಕಿ ಹಾಗೇ ನಿಂತುಕೊಂಡು ಹಣ ಪಾವತಿ ಮಾಡುತ್ತಾನೆ. ಹೊರ ರಸ್ತೆಯ ಬಿಸಿಲು ಗಾಳಿಗೆ ಬಂದು ನಿಂತುಕೊಳ್ಳುತ್ತಾನೆ. ಅನಂತರ ಅಡ್ಡಾದಿಡ್ಡಿಯಾಗಿ ಆ ರಸ್ತೆಯಿಂದ ಈ ರಸ್ತೆಗೆ ಅಲೆದಾಡಿದ.

ಶ್ಯಾಮ ಅ[illegible]ಮು ಮಧ್ಯಾಹ್ನ ಪೈಸ್ ಹೋಟೇಲಿನಲ್ಲಿ ತನ್ನಗೆ ತಾನೇ ಸನ್ಮಾನ ಮಾಡಿಕೊಳ್ಳಲು, ತನಗೇ ಒಂದು ಭೋಜನ ಕೂಟವೊಂದನ್ನು ಏರ್ಪಡಿಸಿಕೊಂಡ. ಮಾಂಸದ ಮೂಳೆಗಳನ್ನು ಕಟ ಕಟನೆ ಕಡಿದು ಹೀರಿದ.ಅಂಗೈಗೆ ಮೊಸರನ್ನು ಹಾಕಿಕೊಂಡು ನೆಕ್ಕಿದ. ಸುಭೋದ್ ಮಿತ್ರ ಬೆಳಿಗ್ಗೆ ಒಂಭತ್ತು ಘಂಟೆಗೇ ಊಟ ಮಾಡಿ ಆಫೀಸಿಗೆ ಹೊರಟು ಹೋಗುತ್ತಾನೆ. ರಾತ್ರಿ ಒಂದು ವೇಳೆ ಮಿತ್ರನನ್ನು ಕಂಡರೆ ಅವನಿಗೂ ಊಟಕ್ಕೆ ಹೇಳಬೇಕು ಎಂದುಕೊಂಡ ಶ್ಯಾಮ.

ಇಂದು ಶ್ಯಾಮ ಅಡಿಕೆ ತೆಗೆದುಕೊಳ್ಳಲಿಲ್ಲ. ಆದರೆ ತುಂಬಾ ಬೆಲೆಯ ಒಂದು ಸಿಗರೇಟ್ ಪ್ಯಾಕೇಟ್ ಕೊಂಡುಕೊಂಡ. ಭಿಕ್ಷುಕರಿಗೆ ಕೊಡುವುದಕ್ಕಾಗಿ ಎಂಟಾಣೆಯನ್ನು ಚಿಲ್ಲರೆ ಮಾಡಿಸಿ ತನ್ನ ಜೇಬಿನಲ್ಲಿ ಇಟ್ಟುಕೊಂಡ. ನಿಜವಾಗಿ ನೋಡಿದರೆ ಈಗ ತಿಂಗಳ ಕೊನೆ. ಆದರೆ ಅವನಿಗೆ ಯಾವ ಚಿಂತೆಯೂ ಇಲ್ಲ. ಬ್ಯಾಂಕಿನಲ್ಲಿ ಈಗ ಎರಡೂವರೆ ಸಾವಿರ ರೂಪಾಯಿ ಉಳಿದಿದೆ. ಮನಸ್ಸಾದರೆ ಅವನು ತಿಂಗಳ ಯಾವುದಾದರೂ ಒಂದು ದಿನವನ್ನು ತಿಂಗಳ ಮೊದಲನೆ ತಾರೀಖಿನ ಸಂಜೆ ಮಜವಾಗಿ ಕಳೆಯುವಂತೆ ಕಳೆಯಬಹುದು. ಮೂವತ್ತೊಂದನೆಯ ಜನ್ಮದಿನದಂದು ಅವನ ಮನಸ್ಸಿಗೆ ತಾನು ತುಂಬಾ ಸ್ವಾಧೀನ ಎಂದೆನಿಸಿತು. ಇಂದಿನ ದಿನ ತುಂಬಾ ಚೆನ್ನಾಗಿ ಕಳೆಯಬಹುದು ಎಂದು ಯಾಕೊ ಏನೋ ಅವನ ಮನಸ್ಸಿಗೆ ಅನಿಸುತ್ತಿತ್ತು. ಮರುಕ್ಷಣದಲ್ಲೇ ಅವನು ಮನದಲ್ಲೇ ತನ್ನನ್ನು ತಾನು ನಿಯಂತ್ರಿಸಿಕೊಳ್ಳುತ್ತಾನೆ. ಭವಿಷ್ಯತ್ತಿನ ಚಿಂತೆಯಲ್ಲಿ ವ್ಯಕ್ತಿಗತ ಸ್ವಾಧೀನತೆಯು ಎಲ್ಲಕ್ಕಿಂತ ಮಿಗಿಲಾದದ್ದು ಎಂದವನಿಗೆ ಅನಿಸುತ್ತದೆ. ಹಾಗೇ ಕಳೆದು ಹೋದ ಭೂತಕಾಲದ ಚಿಂತೆಯೂ ಕೂಡಾ. ಅದರಂತೆಯೇ ಅವನು ಬೆಳಗಿನ ಘಟನೆಯನ್ನು ಮರೆತುಬಿಟ್ಟ; ಪುನಃ ಸಂಜೆಯ ಬಗ್ಗೆ ಯೋಚಿಸಲಿಲ್ಲ. ಅವನ ಮನಸ್ಸು ಮಧ್ಯಾಹ್ನದ ತೀಕ್ಷ್ಣ ಬಿಸಿಲು ಹಾಗೂ ಉತ್ತರದ ರೋಮಾಂಚಕ ಗಾಳಿಯಲ್ಲೇ ತಲ್ಲೀನವಾಯ್ತು.

ಕ್ರಿಸ್‌ಮಸ್ ಹಬ್ಬಕ್ಕೆ ಇನ್ನೇನು ತಡವಿಲ್ಲ. ಹ್ಯಾಪಿ ಕ್ರಿಸ್‌ಮಸ್ ಎಂದು ಕೆಂಪು ಬಟ್ಟೆಗಳಲ್ಲಿ ಬರೆದು, ಅಂಗಡಿಗಳಲ್ಲಿ ತೂಗು ಹಾಕಿದ್ದಾರೆ. ಶೋಕೇಸ್‌ಗಳಲ್ಲಿ ಕೇಕ್, ಹತ್ತಿಯಿಂದ ನಿರ್ಮಿಸಿದ ಮಂಜಿನ ಗಡ್ಡೆ ಹಾಗೂ ವೃದ್ಧ ಸಾಂಟಾಕ್ಲಾಸನ್ನು ಸಜ್ಜುಗೊಳಿಸಲಾಗಿದೆ. ಅಂಗಡಿಯ ಎದುರೇ ಒಂದು ರೊಟ್ಟಿಯ ವ್ಯಾನ್, ಹಿಂಬದಿಯ ತೆರೆದ ಬಾಗಿಲಿನಿಂದ, ನೆಲದಿಂದ ಅಟ್ಟದವರೆಗೆ ಪೇರಿಸಿದ ರೊಟ್ಟಿಗಳು ಕಂಡು ಬರುತ್ತವೆ. ಭೂಮಿಯಲ್ಲಿ ಒಳ್ಳೇ ಕಾಲ ಒದಗಿ ಬಂದಿದೆ ಎಂದು ತಟ್ಟನೆ ಅವನ ಮನಸ್ಸಿಗೆ ಅನಿಸುತ್ತದೆ. ಈ ಸಲ ಹೊಲ ಗದ್ದೆಗಳಲ್ಲಿ ಒಳ್ಳೆ ಫಸಲು ಬಂದಿರಬೇಕು. ರೈತರ ಹೆಂಡಂದಿರು ಸಂತಾನವತಿಯರಾಗಿದ್ದಾರೆ. ತಾಯಂದಿರೇ ಇನ್ನೂ ಸಂತಾನವತಿಯಾರಾಗಿರಿ; ಅಣ್ಣಂದಿರೇ ಜಮಿನನ್ನು ಪತಿತ ಮಾಡಬೇಡಿ ಎಂಬ ಸರಕಾರಿ ವಿಜ್ಞಾಪನೆ ಗ್ರಾಮ ಗ್ರಾಮಗಳಿಗೆ ಹೋಗಿವೆ. ದೇಶವನ್ನು ಸುಸಂತಾನದಿಂದ ತುಂಬಿಸಿ ನಮ್ಮ ಕಾರ್ಖಾನೆಗಳಲ್ಲಿ ಉತ್ಪಾದನೆ ಜಾಸ್ತಿಯಾಗಿದೆ. ನಮ್ಮ ಹೊಲ ಗದ್ದೆಗಳಲ್ಲಿ ಫಸಲು ಜಾಸ್ತಿಯಾಗಿದೆ.ನಮ್ಮ ಗಣಿಗಳಲ್ಲಿ ಉತ್ಪಾದನೆ ಹೆಚ್ಚಾಗಿದೆ. ಇವೆಲ್ಲವನ್ನೂ ಭೋಗಿಸಲು ಜನ ಎಲ್ಲಿದ್ದಾರೆ? ತಿನ್ನಲು ಜನರಿಲ್ಲ ಎಂದು ನಾವು ಹೊಸ ನೀರಿನ ಮೀನುಗಳನ್ನು ಸಮುದ್ರಕ್ಕೆ

ಹೋಗಲು ಬಿಟ್ಟು ಬಿಟ್ಟಿದ್ದೇವೆ. ವರ್ಷಾನುಗಟ್ಟಲೆ ತಿಂದರೂ ಇನ್ನೂ ಮುಗಿಸಲು ಸಾಧ್ಯವಿಲ್ಲ ಎಂದು ನಮ್ಮ ಹಸುಗಳು ಮೊಲೆಗಳು ಹಿಗ್ಗಿ ಹಾಲೆಲ್ಲಾ ನೆಲದ ಮೇಲೆ ಸುರಿಯುತ್ತಿದೆ. ಒಳ್ಳೇ ಫಸಲಿನಿಂದ ತುಂಬಿ ತುಳುಕುವ ನಮ್ಮ ಹೊಲ ಗದ್ದೆಗಳಲ್ಲಿ ನಾವು ಎಮ್ಮೆ ಹಿಂಡುಗಳನ್ನು ಬಿಟ್ಟು ಬಿಟ್ಟಿದ್ದೇವೆ. ನಮ್ಮ ಜೇನುಗೂಡುಗಳಿಂದ ಜೇನುತುಪ್ಪ ಸೋರಿ ಬೀಳುತ್ತಿದೆ. ಅಮ್ಮಾ ತಾಯಂದಿರಾ ದೇಶವನ್ನು ಜನರಿಂದ ತುಂಬಿಸಿರಿ, ಅಪ್ಪಾ ತಂದೆಗಳಿರಾ ಒಳ್ಳೆಯ ಸಂತಾನವನ್ನು ನೀಡಿರಿ. ಮುಖದಲ್ಲಿ ಮುಗುಳ್ನಗೆ, ಮೈಮೇಲೆ ಶೀತ ಕಾಲದ ಸ್ವಾಸ್ಥ್ಯದ ಬಿಸಿಲು, ಹಾಗೂ ತುಂಬಿದ ಹೊಟ್ಟೆ – ಶ್ಯಾಮ ಮೆಲ್ಲ ಮೆಲ್ಲನೆ ನಡೆಯುತ್ತಿದ್ದ, ಅವನ ಮನಸ್ಸಿಗೆ ಭೂತಕಾಲದ ಘಟನೆ ಯಾವುದೂ ನೆನಪಾಗುವುದಿಲ್ಲ. ಭವಿಷ್ಯತ್ತಿನ ಯಾವ ಯೋಚನೆಯೂ, ಮನಸ್ಸನ್ನು ಕಾಡುವುದಿಲ್ಲ. ಅವನ ಮನಸ್ಸಿಗೆ ತಾನು ತುಂಬಾ ಸಂತೃಪ್ತ ಹಾಗೂ ಸ್ನಿಗ್ಧ ಎಂಬ ಭಾವನೆ ಬರುತ್ತದೆ. ಫುಟ್‌ಪಾತಿನ ಟಪಾಲು ಡಬ್ಬಿಯ ಹಿಂದೆ ಚಿಂದಿ ಬಟ್ಟೆಯನ್ನುಟ್ಟು ಒಬ್ಬ ಭಿಕ್ಷುಕ ಭಿಕ್ಷೆ ಬೇಡುತ್ತಾ ಬರುತ್ತಿದ್ದಾನೆ, ಶ್ಯಾಮ ಅವನಿಗೆ ಡಿಕ್ಕಿ ಹೊಡೆದ. ಶ್ಯಾಮನನ್ನು ಉದ್ದೇಶಿಸಿ ಒಬ್ಬ ವ್ಯಾಪಾರೀ ಗೇಂಜೀ ಎಂದು ಕೂಗಿದ. ಶ್ಯಾಮ ಸ್ವಲ್ಪ ಚಕಿತನಾದ. ಅನಂತರ ವೇಗವಾಗಿ ಗೇಂಜಿವಾಲನನ್ನು ದಾಟಿಕೊಂಡು ಹೋದ. ಇಲ್ಲದಿದ್ದರೆ ಭೂತಕಾಲದ ಘಟನೆ ಮನಸ್ಸಿಗೆ ನೆನಪಾಗುತ್ತಿತ್ತು. ಶ್ಯಾಮ ರಸ್ತೆಯ ಎದುರಿನ ತಿರುವಿನಲ್ಲಿ ತಿರುಗಿದ. ನಿಧಾನವಾಗಿ ಒಬ್ಬ ವ್ಯಕ್ತಿ ಆಯಾಸದಿಂದ ಕೈಗಾಡಿಯೊಂದನ್ನು ತಳ್ಳಿಕೊಂಡು ಹೋಗುತ್ತಿದ್ದಾನೆ. ಶ್ಯಾಮ ತಟ್ಟನೆ ಕಣ್ಣು ಮುಚ್ಚಿಕೊಂಡ; ಆದರೂ ಹಾಗೇ ಕಣ್ಣ ಮುಂದೆ ಚಿತ್ರ ಸುಳಿಯುತ್ತದೆ. ಸಾಲ ಸಾಲು ಅಂಗಡಿಗಳು, ಆ ಅಂಗಡಿಯವರು ಸತ್‌ಭಾವದಿಂದ ಕುಳಿತುಕೊಂಡಿದ್ದಾರೆ. ನಮ್ರ ಹಾಗೂ ಸುಂದರ ಯುವತಿಯರು ರಸ್ತೆಯಲ್ಲಿ ತಿರುಗಾಡುತ್ತಿದ್ದಾರೆ. ಶಾಂತ ಹಾಗೂ ಚೆನ್ನಾದ ಮಕ್ಕಳು ನಡೆದು ಹೋಗುತ್ತಿದ್ದಾರೆ. ನಿರ್ಲೋಭ, ವಿನಯ ಹಾಗೂ ಆರೋಗ್ಯವಂತ ಯುವಕರು ವೇಗವಾಗಿ ಕೆಲಸಕ್ಕೆ ಹೋಗುತ್ತಿದ್ದಾರೆ. ಶಿಕ್ಷಿತ ಹಾಗೂ ನಿವೃತ್ತ ವೃದ್ಧರು ವರಾಂಡ ಅಥವಾ ಬಾಲ್ಕನಿಗಳಲ್ಲಿ ಕುಳಿತುಕೊಂಡು ತಮ್ಮ ಜೀವನದ ಸುಂದರ ಅವಶೇಷದ ದಿನಗಳನ್ನು ವ್ಯಯಿಸುತ್ತಿದ್ದಾರೆ. ಎಲ್ಲೆಡೆಯಲ್ಲೂ ಅದೃಶ್ಯ ವಿಜ್ಞಾಪನೆಗಳು – ನಮಗೆ ನಿಮ್ಮ ಜೀವನ ಅತಿ ಅಮೂಲ್ಯವಾದದ್ದು; ಬದುಕಿ ಉಳಿಯಿರಿ!

ಹೈಡ್ರೀಂಟರ್ ನೀರಿನಲ್ಲಿ ಶ್ಯಾಮನ ಬಲಗಾಲು ಮೊಣಕಾಲಿನವರೆಗೂ ಮುಳುಗಿ ಹೋಯಿತು. ಶ್ಯಾಮ ಕಣ್ಣರಳಿಸಿ ನಕ್ಕ. ಅವನಿಗೆ ಅಷ್ಟೇನೂ ಬೇಜಾರೆನಿಸಲಿಲ್ಲ.ಅಭ್ಯಾಸಕ್ಕಿಂತಲೂ ಸ್ವಲ್ಪ ಜಾಸ್ತಿ ಊಟ ಮಾಡಿದುದರಿಂದ ಅವನ ಹೊಟ್ಟೆ ಹಿಡಿದುಕೊಂಡು ಬಿಟ್ಟಿತ್ತು. ಆದರೂ ಅವನಿಗೆ ಮನೆಗೆ ಹಿಂತಿರುಗಿ ಹೋಗಬೇಕೆಂದೆನಿಸಲಿಲ್ಲ. ಅವನು ಹಾಗೇ ದೊಡ್ಡ ರಸ್ತೆಗೆ ಬಂದ. ಚೌರಂಗಿಯಲ್ಲಿ ಕ್ರಿಸ್‌ಮಸ್ ಈವ್‌ನ ಗ್ಯದರಿಂಗ್ ಕೂಡಿದೆ, ಆದುದರಿಂದ ಆ ದಿಕ್ಕಿನಲ್ಲಿ ಹೋದರೆ ಚೆನ್ನಾಗಿರುವುದಿಲ್ಲ. ಬಸ್ ನಿಲ್ದಾಣದಲ್ಲಿ ನಾನಾ ವಯಸ್ಸಿನ ಭಿಕ್ಷುಕರು ತಿರುಗಾಡುತ್ತಿದ್ದಾರೆ. ಕಪ್ಪು ಕನ್ನಡಕ ಹಾಕಿಕೊಂಡ ಒಬ್ಬ ಮಹಿಳೆ, ಕರವಸ್ತ್ರವನ್ನು ಮುಖಕ್ಕೆ ಒತ್ತಿಹಿಡಿದು, ಕಣ್ಣು ತಿರುಗಿಸಿ ಬಸ್ ಬರುವ ಹಾದಿಯನ್ನೇ ನೋಡುತ್ತಿದ್ದಾಳೆ. ಟೆರಲೀನ್ ಬಟ್ಟೆ

ತೊಟ್ಟ ಇಬ್ಬರು ಹುಡುಗರು ರೇಲಿಂಗ್ ಹಿಡಿದುಕೊಂಡು ನಿಂತಿದ್ದಾರೆ. ಬಸ್ ಬಂದೇ ಬಿಟ್ಟಿತು. ಇಳಿಯುವ ಹಾಗೂ ಹತ್ತುವ ಜನರ ಗುಂಪಿನ ಮಧ್ಯೆ ಶ್ಯಾಮನೂ ಸೇರಿಕೊಂಡ. ಬಸ್ ಹತ್ತುವುದರೊಳಗಾಗಿ, ಜೇಬಿನಲ್ಲಿನ ಚಿಲ್ಲರೆ ಹಣವನ್ನು ಕೈಯಲ್ಲಿ ತೆಗೆದುಕೊಂಡು ಶ್ಯಾಮ ರಸ್ತೆಯ ಮೇಲೆ ಬಿಸಾಕಿ ಬಿಟ್ಟ. ಚಿಲ್ಲರೆ ಬಿದ್ದ ಶಬ್ದ, ಒಂದೆರಡು ಕ್ಷಣ ರಸ್ತೆಯಲ್ಲಿನ ಇತರ ಶಬ್ದಗಳನ್ನು ಮರೆ ಮಾಡಿತು. ಆ ಶಬ್ದ ಎಷ್ಟೊಂದು ಜೋರಾಗಿತ್ತೆಂದರೆ, ಅಕ್ಕ ಪಕ್ಕದ ಜನ ಚಕಿತರಾದರು. ಬಸ್ಸನ್ನು ಹತ್ತುತ್ತಲೋ ಅಥವಾ ಇಳಿಯುತ್ತಲೋ ಇದ್ದ ಅನೇಕ ಜನರು ಹಾಗೇ ಸ್ಥಬ್ಧರಾಗಿ ನಿಂತು ಬಿಟ್ಟರು. ಶ್ಯಾಮ ನಗುವನ್ನು ತಡೆದುಕೊಂಡು ನೋಡಿದ, ಫುಟ್ ಬೋರ್ಡಿನ ಮೇಲೆ ನಿಂತುಕೊಂಡ ಒಬ್ಬ ವೃದ್ಧ ಬಸ್ಸಿನ ಕೈಹಿಡಿಯನ್ನು ಬಿಟ್ಟು, ತಾನು ಜೋಲಾಡುವುದನ್ನೂ ಲೆಕ್ಕಿಸದೆ ತನ್ನ ಜೇಬನ್ನು ಮುಟ್ಟಿ ನೋಡಿಕೊಂಡ. ಹಣ! ಅಬ್ಬಾ ಯಾರ ಹಣ ಬಿತ್ತು? ಒಂದು ರೀತಿಯ ಉತ್ತೇಜನದ ವಾತಾವರಣ ಸುತ್ತೆಲ್ಲ ತುಂಬಿತು. ಗುಂಪಿನ ಮಧ್ಯೆ ಒಂದಿಬ್ಬರು ಬಸ್ಸಿನಿಂದ ಕೆಳಗೆ ಧುಮುಕಿದರು. ಶ್ಯಾಮ ನಿಶ್ಚಿಂತನಾಗಿ ಬಸ್ಸಿನ ಒಳಗೆ ಹತ್ತಿ ಹೋದ. ಕಂಡಕ್ಟರ್ ಗಂಟೆಯ ದಾರವನ್ನು ಹಿಡಿದು ಕೊಂಡ. ಅನಂತರ ಸ್ವಲ್ಪ ಹಿಂದೆ ಮುಂದೆ ನೋಡಿ ದಾರವನ್ನು ಜಗ್ಗಿ, ಗಂಟೆ ಬಾರಿಸಿಯೇ ಬಿಟ್ಟ. ಎಲ್ಲಾ ಸರಿಯಾಗಿದೆ ಎಂದು ಜೋರಾಗಿ ಕಿರುಚಿದ. ಶ್ಯಾಮ ಫುಟ್ ಬೋರ್ಡಿನ ಮೇಲೆ ನಿಂತುಕೊಂಡು ಹಿಂದೆ ತಿರುಗಿ ನೋಡಿದ. ಬಸ್ ಸ್ಟ್ಯಾಂಡಿನ ಭಿಕ್ಷುಕರ ಮಧ್ಯೆ ಚಿಕ್ಕ ಯುದ್ಧವೇ ಆರಂಭವಾಗಿ ಬಿಟ್ಟಿದೆ. ಈಗಾಗಲೇ ಒಂದಷ್ಟು ಜನ ಗುಂಪುಗೂಡಿದ್ದಾರೆ. ಶ್ಯಾಮ ಮುಖ ತಿರುಗಿಸಿ, ಬಸ್ಸಿನೊಳಗೆ ನುಗ್ಗುವ ಪ್ರಯತ್ನ ಮಾಡಿದ. ಅನಂತರ ಕಂಬಿ ಹಿಡಿದು ನಿಂತು, ಹಾಗೂ ಸ್ವಲ್ಪ ಕಣ್ಣು ಮುಚ್ಚಿದ. ಸೊಗಸಾದ ಊಟವಾದ ನಂತರ ಆವರಿಸುವ ಸಣ್ಣ ನಿದ್ದೆ ಅವನನ್ನು ಆವರಿಸಿತು.

ಬಸ್ಸು ಎಲ್ಗಿನ್ ರಸ್ತೆ ದಾಟಿದ ಮೇಲೆ, ಶ್ಯಾಮನಿಗೆ ಕುಳಿತುಕೊಳ್ಳಲು ಸ್ಥಳ ದೊರಕಿತು. ಥಿಯೇಟರ್ ರೋಡಿನ ಹತ್ತಿರ ಕಂಡಕ್ಟರ್, ಶ್ಯಾಮನನ್ನು ಟಿಕೇಟಿನ ಹಣ ಕೇಳಿದ. ಶ್ಯಾಮ ಜೇಬಿಗೆ ಕೈಹಾಕಿ ಚಕಿತಗೊಂಡ, ಸ್ವಲ್ಪವೂ ಚಿಲ್ಲರೆ ಹಣ ಇಲ್ಲ.ಮತ್ತೊಂದು ಜೇಬಿನಲ್ಲಿ ಎರಡು ಹತ್ತರ ನೋಟನ್ನು ಶ್ಯಾಮ ಇಟ್ಟುಕೊಂಡಿದ್ದ. ಒಂದು ಹತ್ತರ ನೋಟನ್ನು, ಶ್ಯಾಮ ಕಂಡಕ್ಟರನ ಎದುರು ಹಿಡಿದು, ಅವನ ಮುಖವನ್ನೇ ದಿಟ್ಟಿಸಿ ನೋಡಿದ. ಪುರಚಲು ಕೂದಲಿನಿಂದ ತುಂಬಿದ ಕರ್ಕಶ ಮುಖದ ವ್ಯಕ್ತಿ. ಮುಖದಲ್ಲಿನ ನರನಾಡಿಗಳು ಉಬ್ಬಿ ನಿಂತಿವೆ. ತಲೆವಾಲಿಸಿ ಆ ವ್ಯಕ್ತಿ ಹೇಳಿದ 'ಚಿಲ್ಲರೆ ಹಣ ಕೊಡಿ' – 'ಇಲ್ಲ' ಒಂದು ಸ್ಟಾಪಿನಲ್ಲಿ ಬಸ್ಸು ನಿಂತಿತು. ಶ್ಯಾಮ ಆ ವ್ಯಕ್ತಿಯ ಕಣ್ಣಲ್ಲಿ ಕಣ್ಣಿಟ್ಟು ಹೇಳಿದ.

–ಇಲ್ಲ. ಕಂಡಕ್ಟರ್ ಕೈಯೊಳಗಿನ ಟಿಕೇಟನ್ನು ಟರ್ ಎಂದು ಬೆರಳಿನಿಂದ ಹರಿದು ಶಬ್ದ ಮಾಡಿದ. ಹಿಂದೆ ತಿರುಗಿ ತನ್ನ ಪಾರ್ಟನರ್‌ಗೆ 'ಏನಂತಿಯಾ ಅಣ್ಣಿ' ಎಂದು ಪುರುಷ ಸ್ವರದಲ್ಲಿ ಗಟ್ಟಿಯಾಗಿ ಕೇಳಿದ. ಅನಂತರ ಬೇಗನೆ ಗಂಟೆಯ ದಾರವನ್ನು ಜಗ್ಗಿ, ಶ್ಯಾಮನ ಕಡೆ ನೋಡಿ ಕೇಳಿದ – ಚಿಲ್ಲರೆ ಇಲ್ಲವಾ? ಇಲ್ಲ ಎಂದು ಶ್ಯಾಮ ತಲೆ ಅಲ್ಲಾಡಿಸುತ್ತಾನೆ. ಪುನಃ ಅದೇ ಟಿಕೇಟ್ ಹರಿದ ಶಬ್ದ. ಸಿಟ್ಟಿನಿಂದ ಕಂಡಕ್ಟರ್ ತಲೆ ಕೊಂಕಿಸಿ – ನೋಟಿಗೆ ಚಿಲ್ಲರೆ ಸಿಗುವುದಿಲ್ಲ

ಎಂದೆನ್ನುತ್ತಾನೆ. ಶ್ಯಾಮ ಸ್ಥಿರ ದೃಷ್ಟಿಯಿಂದ ಆ ವ್ಯಕ್ತಿಯ ಕಡೆ ದಿಟ್ಟಿಸಿ ನೋಡಿ ಹೇಳಿದ – ಹಾಗಾದ್ರೆ? ಕಂಡಕ್ಟರ್ ಶ್ಯಾಮನನ್ನು ಅಲಕ್ಷ್ಯದಿಂದ ನೋಡಿ, ಮುಖ ತಿರುಗಿಸಿಕೊಳ್ಳುತ್ತಾನೆ. ಹಾಗೇ ತಾತ್ಸಾರದ ಧ್ವನಿಯಲ್ಲಿ – ಹಾಗಾದ್ರೆ ಇನ್ನೇನು? ಹಾಗೇ ನಡೀರಿ ಎಂದು ಹೇಳುತ್ತಾನೆ. ಈ ರೀತಿ ಹೇಳುತ್ತಾ ಕಂಡಕ್ಟರ್ ಗುಂಪಿನ ಮಧ್ಯೆ ನುಸುಳಿ ಹೊಗುತ್ತಾನೆ. ನೇಪಥ್ಯದಿಂದ ಅವನ ಧ್ವನಿ ಕೇಳಿ ಬರುತ್ತದೆ –ಈಗಾಗಲೇ ಅನೇಕ ಸಲ ಬಸ್ಸಿನಲ್ಲಿ ಚಿಲ್ಲರೆ ಹಣ ದೊರಕುವುದಿಲ್ಲ ಎಂದು ನೋಟೀಸ್ ಕೊಟ್ಟಾಗಿದೆ. ಆ ಕ್ಷಣದಲ್ಲೇ ಶ್ಯಾಮನ ಕಣ್ಣು ಮುಖಗಳಲ್ಲಿ ರಕ್ತ ಹರಿದು ಬಂತು. ಸಿಟ್ಟು ಹಾಗೂ ಅವಮಾನದಿಂದ ಶ್ಯಾಮನ ಶರೀರ ಕಂಪಿಸಿತು. ಶ್ಯಾಮನಿಗೆ ಜೋರಾಗಿ ಚೀತ್ಕಾರ ಮಾಡಿ ಎಲ್ಲರಿಗೂ ಹೇಳಬೇಕು ಎಂದೆನಿಸುತ್ತೆ – ಸಜ್ಜನರೇ, ಸ್ವಲ್ಪ ಹೊತ್ತಿನ ಮೊದಲು, ಗಡಿಯಾ ಹಾಟಿನ ತಿರುವಿನಲ್ಲಿ, ನಾನು ಮುಷ್ಟಿ ತುಂಬಾ ಚಿಲ್ಲರೆ ಹಣವನ್ನು ರಸ್ತೆಯ ಮೇಲೆ ಬಿಸಾಕಿ ಬಂದಿದ್ದೇನೆ... ಆದರೆ ಶ್ಯಾಮ ನಿಜವಾಗಿ ಆ ರೀತಿ ಮಾಡಲಿಲ್ಲ. ಶಾಂತ ಭಾವದಿಂದ ಎದ್ದು ನಿಂತುಕೊಂಡ. ಕಂಡಕ್ಟರ್ ಹಿಂದೆ ತಿರುಗಿ ಆ ಕಡೆ ಇರುವವರಿಗೆ ಟಿಕೇಟ್ ಕೊಡುತ್ತಿದ್ದಾನೆ. ಶ್ಯಾಮ ಆತನ ಬೆನ್ನು ತಟ್ಟಿ ಹೇಳಿದ – ನಾನು ಇಳಿದು ಹೋಗುತ್ತೇನೆ. ಕಂಡಕ್ಟರ್ ಮುಖ ತಿರುಗಿಸಿ ಶ್ಯಾಮನನ್ನು ನೋಡಿ ಒಂದಿಷ್ಟೂ ದುಃಖಿತನಾಗದೆ – ನಿಮ್ಮಿಷ್ಟ ಎಂದು ಹೇಳಿದ. ಬಸ್ಸಿನ ಇತರ ಎಲ್ಲಾ ಜನರೂ ಶ್ಯಾಮನನ್ನು ನೋಡುತ್ತಿದ್ದರು. ವಕೀಲನಂತೆ, ಕಪ್ಪು ಉಡಿಗೆ ತೊಟ್ಟ ಒಬ್ಬ ವೃದ್ಧ ವ್ಯಕ್ತಿ, ಶ್ಯಾಮನನ್ನು ತಡೆದು ಹೇಳಿದ – ನಿಲ್ಲಿ ನನ್ನ ಹತ್ತಿರ ಚಿಲ್ಲರೆ ಇರಬಹುದೇನೋ, ನೋಡುತ್ತೇನೆ. ಶ್ಯಾಮ ವಿನೀತ ಭಾವದಿಂದ ಆತನ ಬ್ಯಾಗನ್ನು ಇಸಿದುಕೊಂಡ. ಆತ ಚಲಿಸುತ್ತಿರುವ ಬಸ್ಸಿನಲ್ಲಿ, ಜೋಲಿ ಹೊಡೆಯುತ್ತಾ ಕುತ್ತಿಗೆ ಮುಚ್ಚುವ ಕೋಟಿನ ಮೂರು ಗುಂಡಿಗಳನ್ನು ಬಿಚ್ಚಿದ. ಅನಂತರ ರಹಸ್ಯಮಯ ಅಂತರ ಮಹಲಿಗೆ ಕೈಹಾಕಿ, ನೋಟಿನ ಕಟ್ಟನ್ನು ಹೊರ ತೆಗೆದ. ಆತ ತನ್ನ ಮೇಲೆ ಜೋಲಿ ತಪ್ಪಿ ಬೀಳಬಹುದೇನೋ ಎಂಬ ಭಯದಿಂದ ಶ್ಯಾಮ ಆತನ ಹೆಗಲನ್ನು ಬಿಗಿಯಾಗಿ ಹಿಡಿದುಕೊಂಡಿದ್ದ. ಹಿಂದೆ ನಿಂತಿದ್ದ ಒಬ್ಬ ದಯಾಳೂ, ಹಿಂದೂಸ್ಥಾನಿ ವ್ಯಕ್ತಿ ಕೂಡಾ, ಆ ವ್ಯಕ್ತಿಯ ಬೆನ್ನಿಗೆ ತನ್ನ ಹೆಗಲನ್ನು ಒತ್ತಿ ಹಿಡಿದಿದ್ದ. ಆ ವ್ಯಕ್ತಿ ಜೇಬಿನಿಂದ ನೋಟಿನ ಕಟ್ಟನ್ನು ತೆಗೆಯುತ್ತಲೇ, ಒಂದು ಪೇಪರಿನ ಕಟ್ಟು ದೊಪ್ಪನೆ ಬಿತ್ತು. ಅಹಾ ಎಂದು ಆ ವೃದ್ಧ ಕೆಳಗೆ ಬಗ್ಗಿ ಅದನ್ನು ಎತ್ತಿಕೊಂಡ. ಶ್ಯಾಮ ಹಾಗೂ ಹಿಂದುಸ್ಥಾನಿ, ವೃದ್ಧನನ್ನು ಬಿಗಿಯಾಗಿ ಹಿಡಿದುಕೊಂಡಿದ್ದರು. ವೃದ್ಧ ಬಹಳ ಜೋಪಾನವಾಗಿ, ಅನೇಕ ಕಾಗದ ಪತ್ರಗಳಿಂದ ಹಣವನ್ನು ಹೊರತೆಗೆದು ಶ್ಯಾಮನ ಕೈಗೆ ಕೊಡುತ್ತಾನೆ. ಶ್ಯಾಮ ಕೃತಜ್ಞತೆಯ ನಗೆ ನಕ್ಕು ಹತ್ತು ರೂಪಾಯಿನ ನೋಟನ್ನು ವೃದ್ಧನ ಕೈಗೆ ಕೊಡುತ್ತಾನೆ. ತನ್ನಿಂದ ಕಿಂಚಿತ್ ಪರೋಪಕಾರ ಮಾಡಲು ಸಾಧ್ಯವಾಯಿತಲ್ಲ ಎಂಬ ಸಂತೃಪ್ತಿಯ ನಗು ಆ ವೃದ್ಧನ ಮುಖದಲ್ಲಿ ಎದ್ದು ಕಂಡು ಬರುತ್ತಿತ್ತು. ಶ್ಯಾಮ ಹಿಂತಿರುಗಿ ನೋಡುವುದಿಲ್ಲ. ಸುಮ್ಮನೆ ಗುಂಪನ್ನು ಬೇಧಿಸಿಕೊಂಡು ಮುಂದೆ ನಡೆಯುತ್ತಾನೆ. ಕಂಡಕ್ಟರನ ಕರ್ಕಶ ಧ್ವನಿ ಕೇಳಿ ಬರುತ್ತದೆ ಹಣ ಏನಾಯ್ತು? ಶ್ಯಾಮ ಉತ್ತರಿಸುವುದಿಲ್ಲ. ಹಣ ಕೊಡುವ ಇಚ್ಛೆಯನ್ನು ಪ್ರಕಟಿಸುವುದಿಲ್ಲ. ಬಸ್ ನಿಲ್ಲುವ

ನಿಲ್ದಾಣದಲ್ಲಿ ಶ್ಯಾಮ ಸ್ವತಃ ತಾನೇ ಗಂಟೆಯ ಹಗ್ಗವನ್ನು ಜಗ್ಗಿ ಎಳೆದು, ತಾನು ಇಳಿಯುವ ಮೊದಲೇ ಹೊರಡುವ ಗಂಟೆಯನ್ನೂ ಬಾರಿಸುತ್ತಾನೆ. ಶ್ಯಾಮ ಬಯಲಿನ ಹತ್ತಿರ ಬಸ್ಸಿನಿಂದ ಇಳಿಯುತ್ತಾನೆ. ಚಲಿಸುತ್ತಿರುವ ಬಸ್ಸಿನಿಂದ ಗಲಾಟೆಯ ಶಬ್ದ ಅವನ ಕಿವಿಗೆ ಕೇಳಿ ಬರುತ್ತೆ. ಆದರೆ ಅವನು ಅದನ್ನು ಕಿವಿಗೆ ಬೀಳಿಸಿಕೊಳ್ಳುವುದಿಲ್ಲ. ನಗೆಮುಖದಿಂದ ಬಯಲಿನ ಝುಳ ಝುಳ ಬಿಸಿಲಿನಲ್ಲಿ ನಡೆದು ಹೋಗುತ್ತಾನೆ.

ಶ್ಯಾಮ ಒಂದು ಕಲ್ಲು ಎಡವಿ ಸ್ವಲ್ಪ ದೂರ ಹೋಗಿ ಬೀಳುತ್ತಾನೆ. ಮುಳ್ಳು ಹುಲ್ಲು ಎಲ್ಲ ಅವನನ್ನು ಚುಚ್ಚುತ್ತವೆ. ಮೆಲ್ಲ ಮೆಲ್ಲನೆ ಅವನು ಮೇಲೆದ್ದು ನಡೆಯುತ್ತಾನೆ. ಮೋಟಾರ ಸೈಕಲಿಸ್ಟಿನ ಮೇಲೆ ಅವನಿಗೆ ಹಳೆಯ ಸೇಡು ಯಾವ ಕಾರಣಕ್ಕಾಗಿ ಎಂದು ಅವನಿಂದ ಯೋಚಿಸಲು ಸಾಧ್ಯವಾಗುವುದಿಲ್ಲ. ಅವನು ಸ್ವಲ್ಪ ಹುಬ್ಬು ಕೊಂಕಿಸಿ ಜೇಬಿಗೆ ಕೈಹಾಕಿ ಸಿಗರೇಟ್ ಪ್ಯಾಕೇಟನ್ನು ಹೊರ ತೆಗೆಯುತ್ತಾನೆ. ಮಧ್ಯಾಹ್ನ ಉಂಡ ಊಟ ಈಗಾಗಲೇ ಹೊಟ್ಟೆಯಲ್ಲಿ ಕರಗಿ ಹೋಗಿದೆ. ಅವನಿಗೆ ಹಸಿವಾಗುತ್ತದೆ. ಬೆಂಕಿ ಕಡ್ಡಿ ಗೀರುವಾಗ ಅವನ ಕೈ ಬೆರಳು ನಡುಗುತ್ತಿರುವುದು ಅವನ ಗಮನಕ್ಕೆ ಬರುತ್ತದೆ. ಒಂದಾನೊಂದು ಕಾಲದಲ್ಲಿ ಪ್ರತಿ ತಿಂಗಳು ನಾಲ್ಕನೇ ತಾರೀಖು, ತನ್ನ ತೂಕ ನೋಡಿಕೊಳ್ಳುವುದು ಅವನ ವಾಡಿಕೆಯಾಗಿತ್ತು. ಆಗ ದಿನಕ್ಕೆ ಹಲವು ಭಾರಿ ತಾನು ಸಣ್ಣಗೆ ಅಥವಾ ದಪ್ಪಗಾಗಿದ್ದೇನೋ ಎನ್ನುವುದರ ಬಗ್ಗೆ ಯೋಚನೆ ಮಾಡುತ್ತಿದ್ದ. ಈಗ ತುಂಬಾ ದಿನದಿಂದ ಅವನಿಗೆ ತನ್ನ ತೂಕ ನೋಡಿಕೊಳ್ಳುವುದಾಗಿರಲಿಲ್ಲ. ಆದರೂ ಅವನಿಗೆ ಈಗ ತನ್ನ ತೂಕ ತುಂಬಾ ಕಡಿಮೆಯಾಗಿದೆ ಎಂದು ಗೊತ್ತು.

ಖುಷಿಯಿಂದ ಶ್ಯಾಮ ಬಯಲಿನಲ್ಲಿ ನಡೆದು ಹೋಗುತ್ತಾನೆ. ಅವನ ಎಣ್ಣೆ ಕಾಣದ ಒಣಗಿದ ಕೂದಲು ಹಣೆಯ ಮೇಲೆ ಹಾರಿ ಬರುತ್ತದೆ. ತಲೆ ಮೇಲೆ ಕೈಯಾಡಿಸಿದರೆ ಕೂದಲು ಜಟೆ ಕಟ್ಟಿರುವ ಅನುಭವವಾಗುತ್ತದೆ. ಬಾಚಣಿಕೆಯಿಂದ ಕೂದಲನ್ನು ಬಾಚಿಕೊಳ್ಳುವಾಗ ಕಣ್ಣಲ್ಲಿ ನೀರಾಡುತ್ತದೆ. ಅನ್ಯಮನಸ್ಕನಾಗಿ ಶ್ಯಾಮ ಬಿಳಿಯ ಉಡುಪು ತೊಟ್ಟ ಕ್ರಿಕೆಟ್ ಆಟಗಾರರ ತಂಡವನ್ನು ದಾಟಿ ಹೋಗುತ್ತಾನೆ. ತಟ್ಟನೆ ಎಲ್ಲೋ ಎಲೆಗಳನ್ನು ಸುಟ್ಟವಾಸನೆ ಮೂಗಿಗೆ ಬಡಿಯುತ್ತೆ. ಬಿಸಿಲು ತುಂಬಿದ ರಸ್ತೆಯಲ್ಲಿ ಶ್ಯಾಮ ತನಗಿಷ್ಟ ಬಂದಂತೆ ನಡೆಯುತ್ತಾನೆ. ಬಲಗಡೆ ವಿಕ್ಟೋರಿಯಾ ಮೆಮೋರಿಯಲ್ ಬಳಿಯ ಶೂನ್ಯತೆ, ಎಡಗಡೆ ಗಂಗೆಯ ತೀರದಲ್ಲಿ ನಡೆಯಲು ಅನುಕೂವಾಗಲೆಂದು ಕಟ್ಟಿದ ಸೇತುವೆ ಕಾಣಿಸುತ್ತಿದೆ. ಧ್ವಂಸಾವ ಶೇಷ ದುರ್ಗೆಯ ಜೀರ್ಣ ಪ್ರತಿಮೆಯ ತರಹ ಒಂಟಿಯಾಗಿ, ವಿವರ್ಣ ಆಕ್ಟರಲೋನಿ ಮಾನ್ಯೂಮೆಂಟ್ ನಿಂತಿದೆ. ಅವನ ಗುರಿ ಒಂದೇಯಾಗಿರುವುದಿಲ್ಲ. ಅವನು ಸ್ಥಂಭಿತನಾದವನಂತೆ ನೋಡುತ್ತಾನೆ. ಹವುಡಾದ ಸೇತುವೆ ಅವನ ಎಡಗಡೆ ಸರಿದು ಹೋಗಿದೆ, ಬಲಗಡೆ ವಿಕ್ಟೋರಿಯಾ ಮೆಮೋರಿಯಲ್. ಪುನಃ ಒಂದೆರಡು ಹೆಜ್ಜೆ ಮುಂದೆ ನಡೆಯುತ್ತಾನೆ. ಎಡ ಬಲ ದಿಕ್ಕುಗಳು ಯಾವುದು ಎಂದು ಅವನಿಂದ ಸರಿಯಾಗಿ ಗುರುತಿಸಲು ಸಾಧ್ಯವಾಗುವುದಿಲ್ಲ. ಹಿಂದೆ ಮುಂದೆ, ಎಡ ಬಲ, ಎಲ್ಲವನ್ನೂ ಒಮ್ಮೊಮ್ಮೆ ನೋಡುತ್ತಾ

ನಿಲ್ಲುತ್ತಾನೆ. ಬಯಲಿನಲ್ಲಿ ಅವನು ಎಷ್ಟು ದೂರ ನಡೆದು ಬಂದಿದ್ದನೆಂದರೆ, ದೂರದಲ್ಲಿ ರಸ್ತೆಯ ಮೇಲೆ ಜನರು ಓಡಾಡುವುದೂ ಅವನಿಗೆ ಕಾಣಿಸುವುದಿಲ್ಲ. ವಿಶಾಲ ಬಯಲಿನಲ್ಲಿ ಭೂತಗ್ರಸ್ಥದ ತರಹ ರಣ ರಣ ಬಿಸಿಲು, ಗಾಳಿ, ಹರಿದ ಕಾಗದದ ತುಂಡುಗಳನ್ನು ಮೇಲೆ ಹಾರಿಸಿ ಆಡವಾಡುತ್ತಿದೆ. ಮತ್ತೆ ಎಲೆ ಸುಡುವ ಆ ವಾಸನೆ. ಅವನ ನರನಾಡಿಗಳಲ್ಲಿ ರಕ್ತದ ಗತಿ ಕ್ರಮೇಣ ಸ್ತಬ್ಧವಾಗುತ್ತಾ ಇದೆ.ಅವನು ಹೇಗೊ ಏನೋ ಒಂದು ಮರದ ನೆರಳಿನ ಕಡೆ ನಡೆದು ಹೋಗುತ್ತಾನೆ. ಮರ, ಎಡ, ಬಲಕ್ಕೆ ಅವನಿಂದ ತುಂಬಾ ದೂರ ಸರಿದು ಹೋಗುತ್ತೆ. ಶ್ಯಾಮ ಏದುಸಿರು ಬಿಡುತ್ತಾನೆ. ಏನೋ ಅಸ್ವಸ್ಥನಾದವನಂತೆ ಹಾಗೇ ನಿಂತು ಬಿಡುತ್ತಾನೆ. ಒಂದು ಸ್ವಲ್ಪ ಹೊತ್ತು ಅವನಿಗೆ ತನಗೆ ಏನಾಗುತ್ತಿದೆ ಎನ್ನುವುದು ಅರ್ಥವಾಗುವುದಿಲ್ಲ. ಪುನಃ ಅವನು ಮತ್ತೊಮ್ಮೆ ಅರ್ಥಮಾಡಿಕೊಳ್ಳುವ ಪ್ರಯತ್ನ ಮಾಡುತ್ತಾನೆ. ಮರದ ಸುತ್ತ ಮುತ್ತ ಅವನು ಓಡಾಡುತ್ತಾನೆ. ಕಣ್ಣು ಮುಚ್ಚಿ ಹಾಗೂ ಕಣ್ಣು ತೆರೆದು ಅವನು ಮರದ ನೆರಳಿನ ಕಡೆ ತಲುಪುವ ಪ್ರಯತ್ನ ಮಾಡುತ್ತಾನೆ. ಮನದಲ್ಲೇ ಶ್ಯಾಮ ಕೃತ್ರಿಮ ನಗೆ ನಗುತ್ತಾನೆ. ಅನಂತರ ಚಿತ್ತ ಭ್ರಮಣೆಯಾದವನಂತೆ ಬಯಲಿನಲ್ಲಿ ಮಲಗಿಕೊಳ್ಳುತ್ತಾನೆ. ಮುಕ್ತ, ವಿಶಾಲ, ಆಕಾಶ ತಟ್ಟನೆ ಅವನ ಚೇತನದ ಮೇಲೆ ಇಳಿದು ಬರುತ್ತಿದೆ. ಕ್ರಮೇಣ ಕಣ್ಣಿನಿಂದ ಬೆಳಕು ಕರಗಿ ಹೋಗುತ್ತದೆ. ಅಸಹಾಯಕನಾಗಿ ಶ್ಯಾಮ ಕೈಚಾಚಿ ಹುಲ್ಲು, ಮಣ್ಣು, ಮರದ ನೆರಳನ್ನು ತಬ್ಬಿಕೊಳ್ಳ ಬಯಸುತ್ತಾನೆ. ಆದರೆ ನಿದ್ದೆಯ ಅಲೆಗಳು, ಅವನ ಜಾಗರಣೆಯ ಮಿತಿಮೀರಿ ಆಕ್ರಮಿಸಿಕೊಂಡು ಬಂದು, ಅವನನ್ನು ಸೆಳೆದುಕೊಂಡು ಒಯ್ಯುತ್ತಿದೆಯೇನೋ ಎಂದೆನಿಸುತ್ತದೆ. ಕೊನೆಯ ಸಲವೇನೋ ಎಂಬಂತೆ ಶ್ಯಾಮ ಒಂದು ಕ್ಷಣ ದಿಟ್ಟಿಸಿ ನೋಡುತ್ತಾನೆ. ತನ್ನ ನಿದ್ದೆ ಅಥವಾ ಜಾಗರಣೆ ಯಾವುದೂ ಅವನ ಇಚ್ಛಾಧೀನವಾಗಿಲ್ಲ. ಯಾವನೋ ಒಬ್ಬ ತುಂಬಾ ಶಕ್ತಿವಂತ ತನ್ನನ್ನು ತನ್ನಿಚ್ಛಾನುಸಾರವಾಗಿ ನಡೆಸಿಕೊಂಡು ಹೋಗುತ್ತಿದ್ದಾನೆ ಎಂದು ಶ್ಯಾಮನಿಗನಿಸುತ್ತೆ. ಆ ಶಕ್ತಿವಂತ ಈ ಬಿಸಿಲು, ಈ ಬಯಲು, ಈ ಹುಲ್ಲು, ಅಥವಾ ಮರದ ನೆರಳು, ಮುಕ್ತ, ವಿಶಾಲ ಆಕಾಶದ ಮಧ್ಯೆ ಎಲ್ಲೋ ಅಡಗಿಕೊಂಡಿದ್ದಾನೆ. ಅವನು ತನ್ನ ಮಾಯಾ ಕೋಲಿನಿಂದ ಸ್ಪರ್ಷಿಸಿ ನಿದ್ದೆ ಬರಿಸುತ್ತಾನೆ. ಕೋಲಿನಿಂದ ಸ್ಪರ್ಷಿಸಿ ನಿದ್ದೆಯಿಂದ ಎಬ್ಬಿಸುತ್ತಾನೆ. ಶ್ಯಾಮ ತುಂಬಾ ಪ್ರಯತ್ನಪಟ್ಟು ಅವನನ್ನು ಹುಡುಕುವ ಪ್ರಯತ್ನ ಮಾಡುತ್ತಾನೆ. ಅನಂತರ ದಪ್ ಎಂದು ಅವನ ಚೇತನಾಹೀನ ತಲೆ ಮೃದು ಹುಲ್ಲು ಮಣ್ಣಿನ ಮಧ್ಯೆ ನಿದ್ದೆಯಲ್ಲಿ ಮುಳುಗಿ ಹೋಗುತ್ತದೆ.

ಮೋಟರ್ ಸೈಕಲಿನ ಭೀಷಣ ಶಬ್ದದಿಂದ ಶ್ಯಾಮನ ನಿದ್ರೆ ಭಂಗವಾಯಿತು. ಅವನು ಒಮ್ಮೆ ಕಂಪಿಸಿ ಎದ್ದು ಕುಳಿತುಕೊಂಡು ನಾಲ್ಕೂ ಕಡೆ ಬೇಗನೆ ಕಣ್ಣರಳಿಸಿ ನೋಡುತ್ತಾನೆ. ಅನಂತರ ಕ್ರಮೇಣ ಆ ಶಬ್ದ ಕ್ಷೀಣವಾಗುತ್ತದೆ. ಆದರೆ ಆ ಶಬ್ದ ತನ್ನೊಳಗಿನಿಂದಲೇ ಬರುತ್ತಿದೆ ಎಂಬುದು ಅವನಿಗೆ ಸ್ಪಷ್ಟವಾಗಿ ಅರಿವಾಗುತ್ತದೆ. ಸರ್ಕಸ್ ಅಥವಾ ಸಿಯಾಲ್‌ದಾರಿನ ರಥೋತ್ಸವಗಳಲ್ಲಿ, ಮೃತ್ಯು ರೂಪದಂತಿರುವ ಕೋಲಾಕಾರದ ಕಬ್ಬಿಣದ ಬಲೆಯೊಳಗೆ, ಯಾವ ರೀತಿ ಮೋಟರ್ ಸೈಕಲ್, ಮೇಲೆ ಕೆಳಗೆ ಸುತ್ತುವರಿಯುತ್ತೆಯೋ, ಅದೇ ರೀತಿ ಇಷ್ಟು ಹೊತ್ತು ಅವನ

ತಲೆಯೊಳಗೆ ಮೋಟಾರ್ ಸೈಕಲ್ ಸುತ್ತಾಡುವ ಆಟ ಆಡುತ್ತಿದೆ. ಅವನು ಎಚ್ಚರಗೊಳ್ಳುತ್ತಿರುವಂತೆಯೇ ಆ ಶಬ್ದ ಕ್ರಮೇಣ ಕ್ಷೀಣವಾಗಿ, ಗಂಭೀರ ನಿಸ್ತಬ್ಧತೆಯೊಂದಿಗೆ ಬೆರತು ಹೋಗುತ್ತದೆ. ಅನಂತರ ಶ್ಯಾಮನಿಗೆ ತನ್ನ ಎದೆಯೊಳಗೆ ದಡ್ ದಡ್ ಎಂಬ ಶಬ್ದ ಕೇಳಿ ಬರುತ್ತದೆ. ಅವನು ತೀರಾ ಪೆದ್ದನಂತೆ ತನ್ನ ಸುತ್ತ ಇರುವ ಅಂಧಕಾರ ಬಯಲು ಹಾಗೂ ಮಂಜು ತುಂಬಿದ ಶೂನ್ಯತೆಯ ಕಡೆ ದಿಟ್ಟಿಸಿ ನೋಡುತ್ತಲೇ ಇರುತ್ತಾನೆ. ನಿಶೆಯ ಪಕ್ಷಿ ಅವನನ್ನು ಹಾರಿಸಿಕೊಂಡು, ಈ ಬಯಲಿನ ನಡುವೆ ತನ್ನನ್ನು ಮಲಗಿಸಿ ಹೋಗಿದೆ ಎಂದು ಅವನಿಗನಿಸುತ್ತೆ. ಆ ಪಕ್ಷಿ ಅವನ ಸ್ಮೃತಿ ಸ್ವಪ್ನ ಹಾಗೂ ಭವಿಷ್ಯತ್ತಿನ ಚಿಂತೆಯನ್ನು ಅವನಿಂದ ಕಸಿದುಕೊಂಡು ಹೋಗಿದೆ. ಈಗ ಅವನಿಗೆ ತನ್ನ ಹೆಸರು, ಪರಿಚಯ ಒಂದೂ ಗೊತ್ತಾಗುವುದಿಲ್ಲ. ಹಿಮ ಬಿದ್ದು ಅವನ ಪಂಚೆ ಹಾಗೂ ಹೊದಿಕೆ ಒದ್ದೆಯಾಗಿ ಹೋಗಿದೆ. ಅವನ ಚಪ್ಪಲಿ ಒದ್ದೆಯಾಗಿ ಕೊಚ ಕೊಚ ಎನ್ನುತ್ತದೆ. ಉತ್ತರದ ಗಾಳಿ ತಗಲಿ, ಅವನು ಚಳಿಯಿಂದ ನಡುಗುತ್ತಾನೆ. ಬಲಗೈಯ ಮುಷ್ಟಿಯಲ್ಲಿ ಹತ್ತು ರೂಪಾಯಿಯ ಚಿಲ್ಲರೆ ಹಣ ಇರುವುದು ತಟ್ಟನೆ ಜ್ಞಾಪಕವಾಗುತ್ತದೆ. ಬಸ್ಸಿನಲ್ಲಿ ಚಿಲ್ಲರೆ ಹಣ ಕೊಡಲಾಗಲಿಲ್ಲ ಎನ್ನುವುದೂ ಜ್ಞಾಪಕಕ್ಕೆ ಬರುತ್ತದೆ. ಹಾಗೆ ಇಂದು ತನ್ನ ಮೂವತ್ತೊಂದನೇಯ ಜನ್ಮ ದಿನ ಎಂದು ಅವನಿಗೆ ಜ್ಞಾಪಕಕ್ಕೆ ಬರುತ್ತದೆ. ತಾನು ಅದೇ ಶ್ಯಾಮ ಎಂದವನಿಗನಿಸುತ್ತೆ.

ಶ್ಯಾಮ ತೀರಾ ಸುಸ್ತಾಗಿ ಎದ್ದು ಕತ್ತಲಾದ ಬಯಲನ್ನು ದಾಟುತ್ತಾನೆ. ಹುಲ್ಲಿನ ಮೇಲೆ ಹಿಮ ತುಂಬಿದೆ. ಹಿಮದಿಂದ ಒದ್ದೆಯಾದ ಕಾಲಿನಡಿಯ ಎಲೆಗಳಿಂದ ಶಬ್ದ ಹೊಮ್ಮಿ, ಚಳಿ ಶರೀರದಲ್ಲಿ ನುಗ್ಗಿ ಬರುತ್ತದೆ. ಇಡೀ ರಸ್ತೆಯಲ್ಲಿ ಅವನಿಂದ ಏನನ್ನೂ ಯೋಚಿಸಲಾಗುವುದಿಲ್ಲ. ಅವನು ಬಯಲಿನ ನಡುವೆ ಯಾಕೆ ನಿದ್ದೆ ಮಾಡಿದ? ಅವನು ಯಾಕೆ ಬಸ್ ಟಿಕೇಟಿನ ಹಣ ಕೊಡಲಿಲ್ಲ? ಯಾಕೆ ಅವನು ಕನ್ನಡಿಯ ಬೆಳಕನ್ನು ಮೋಟರ್ ಸೈಕಲಿಸ್ಟಿನ ಮುಖದ ಮೇಲೆ ಬೀರಿದ?

## 5

ಪೈಸ್ ಹೊಟೇಲಿನ ಎದುರೇ ಶ್ಯಾಮನಿಗೆ ಸುಭೋದ್ ಮಿತ್ರನ ಭೇಟಿಯಾಯಿತು. ಮಿತ್ರ ಶ್ಯಾಮನನ್ನು ಕೇಳಿದ ಏನಿದು ಇನ್ನೂ ಏಳೂವರೆಗೆಲ್ಲ ನೀವು ಇಲ್ಲಿ ಹಾಜರು, ಈಗ ತಾನೇ ನಾನು ಸಂಜೆಯ ಮೂರನೇ ಕಪ್ ಚಹ ಕುಡಿದೆ, ಹತ್ತು ಗಂಟೆಗೆ ಊಟ. ಮಿತ್ರ ಶ್ಯಾಮನ ಕೈ ಹಿಡಿದೆಳೆಯುತ್ತಾನೆ. ನಡೀರಿ ಸ್ವಾಮಿ, ಈಗಲೇ ರಾತ್ರಿಯ ಊಟ ಮುಗಿಸಿ ಬಿಟ್ಟರೆ, ಮಧ್ಯ ರಾತ್ರಿಗೇ ಹಸಿವಾಗುತ್ತೆ ಅಷ್ಟೇ.

ಶ್ಯಾಮನ ಇಷ್ಟು ಹೊತ್ತಿನವರೆಗಿನ ಚಳಿ ಹೊರಟು ಹೋಗುತ್ತದೆ. ಶರೀರದ ಕಾವು ಹಿಂತಿರುಗಿ ಬಂದಂತೆ ಎನಿಸುತ್ತದೆ. ಇಂದು ಇಡೀ ದಿನ ಅವನು ಬಹಳ ಕಡಿಮೆ ಮಾತನಾಡಿದ್ದಾನೆ ಎನ್ನುವುದು ಅವನಿಗೆ ನೆನಪಾಗುತ್ತದೆ. ಲೆಕ್ಕ ಮಾಡಿ ನೋಡುತ್ತಾನೆ, ಬೆಳಗಿನಿಂದ ಅವನು ನಾಲ್ಕು ಜನರೊಡನೆ ಮಾತುಕತೆಯಾಡಿದ್ದಾನೆ. ಮೊದಲು ಚಹದಂಗಡಿಯ ಹುಡುಗನೊಂದಿಗೆ, ಬೀಡದಂಗಡಿಯವನನ್ನು ಬೀಡಾ ಹಾಗು ಸಿಗರೇಟು ಕೊಡು ಅಂತ ಕೇಳಿದ್ದು. ಕಂಡಕ್ಟರನಿಗೆ ಚಿಲ್ಲರೆ ಹಣ ಇಲ್ಲ ಎಂದದ್ದು ಹಾಗೂ ನಾನು ಬಸ್ಸಿನಿಂದ ಇಳಿದು ಹೋಗುತ್ತೇನೆ ಎಂದು ಅವನಿಗೆ ಹೇಳಿದ್ದು ಅಷ್ಟೇ. ಕೇವಲ ನಾಲ್ಕು ಜನರೊಡನೆ ಅವನು ಇಂದು ಮಾತುಕತೆಯಾಡಿದ್ದ.

ಶ್ಯಾಮ ನಕ್ಕು ಮಿತ್ರನಿಗೆ ಹೇಳಿದ. ನನ್ನನ್ನು ಎಲ್ಲಿಗೆ ಕರೆದುಕೊಂಡು ಹೊರಟಿರಿ?

– ನಡೀರಿ ಸ್ವಾಮಿ ನಮ್ಮ ಮನೆ ನೋಡಿಕೊಂಡು ಬರೋಣವಂತೆ.

ಶ್ಯಾಮ ಹಿಂಬಾಲಿಸುವವರಂತೆ, ಮಿತ್ರನೊಡನೆ ಹೊರಟ. ಯಾಕೋ ಏನೋ ಅವನಿಗೆ ಈಗ ಯಾರ ಜೊತೆಯಾದರೂ ಪ್ರಿಯವಾದದ್ದು ಎಂದೆನಿಸುತ್ತಿತ್ತು. ಶ್ಯಾಮ ಮಿತ್ರನನ್ನು ದಿಟ್ಟಿಸಿ ನೋಡುತ್ತಾನೆ. ಹತ್ತಿರದಿಂದ ಮಿತ್ರನ ಮುಖಚರ್ಯೆ ನೋಡಿ, ಮಿತ್ರ ಅಷ್ಟೇನು ಚೆನ್ನಾಗಿಲ್ಲ ಹಾಗೂ ಮಿತ್ರನಿಗೆ ಅಷ್ಟೇನೂ ವಯಸ್ಸಾಗಿರಲಿಕ್ಕಿಲ್ಲ ಎಂದು ಶ್ಯಾಮನ ಮನಸ್ಸಿಗನಿಸುತ್ತದೆ.

ಮಿತ್ರ ಮನೆಯ ಕಡೆ ಹೋಗುತ್ತಾ ಲಾಂಡ್ರಿಯಿಂದ ತನ್ನ ಬಟ್ಟೆಗಳನ್ನು ತೆಗೆದುಕೊಂಡ. ಕಿರಾಣಿ ಅಂಗಡಿಯೊಂದರಿಂದ ಬತ್ತಾಸು ಕೊಂಡುಕೊಂಡ. ಹಾಗೇ ಹೂವಿನಂಗಡಿಯಿಂದ ಶ್ಯಾವಂತಿಗೆ ಹೂವನ್ನು, ಬಾಳೆಎಲೆಯಲ್ಲಿ ಕಟ್ಟಿಸಿಕೊಂಡ. ಇವೆಲ್ಲದರ ನಡುವೆಯೂ ಮಿತ್ರ ನಡು ನಡುವೆ ಮಾತನಾಡುತ್ತಿದ್ದ – ನೋಡಿ ಸ್ವಾಮಿ ನೀವು ಕ್ರಿಮಿನಲ್ , (ಶ್ಯಾಮನಿಗೆ ಚಳಿ ಚಳಿ ಎಂದೆನಿಸುತ್ತೆ) ಅಲ್ಲಾ ನಾನು ಅಂದುಕೊಂಡಿದ್ದೆ ನೀವು ನಿರುದ್ಯೋಗಿ ಅಂತ. ಇಂದು ಹೋಟೆಲಿನ ಮ್ಯಾನೇಜರ್‌ನಿಂದ ನೀವು ಒಳ್ಳೇ ಕೆಲಸದಲ್ಲಿದ್ದಿರಿ – ಆಫೀಸರ ಆಗಿದ್ದಿರಿ, ನೀವು ನಿಮ್ಮ ಡೈರೆಕ್ಟರಿನ ತಪ್ಪು ಎತ್ತಿ ತೋರಿಸಿದಿರಿ ಎಂದು ಕೆಲಸ ಕಳೆದುಕೊಂಡಿರಿ ಎಂದು ಕೇಳಿದೆ. ಹಾಂ ಹಾಂ ನಿಜ ಅಲ್ವಾ, (ಶ್ಯಾಮ ಮೆಲ್ಲನೆ ನಗುತ್ತಾ ) ಹಾಗಾದ್ರೆ ಸ್ವಾಮಿ ನೀವು ತುಂಬಾ ಆದರ್ಶವಾದಿಗಳು ಎಂದು ಓಡಾಡುತ್ತಿದ್ದಿರಿ ಅಂತ ಕಾಣಿಸುತ್ತೆ. ನಾನೂ ನಿಮ್ಮ ತರಹಾನೇ ಇದ್ದೆ ಸ್ವಾಮಿ. ಆ ಆದರ್ಶ ಯಾವುದೂ ಅಂತ ಕೇಳ್ತೀರಾ? – ರಾಜಯೋಗ ಹಾಗೂ ಲೈಫ್ ಡಿವೈನ್ ನನ್ನ ನಿತ್ಯಪರಿಪಾಠವಾಗಿತ್ತು. ಗೀತೆ ಕಂಠಸ್ತವಾಗಿತ್ತು. ಆದರೆ ಸ್ವಾಮಿ... (ಶ್ಯಾಮನಿಗೆ ಮಿತ್ರನ ಮಾತಿಗೆ ತಲೆದೂಗಲು ಸಾಧ್ಯವಾಗಲಿಲ್ಲ) ಏನು ಹೇಳಲಿ, ಸಾಧನ ಮಾರ್ಗದಲ್ಲಿ ನಾನು ಸ್ವಲ್ಪ ಪ್ರಗತಿಯನ್ನೂ ಹೊಂದಿದ್ದೆ. ಕೊನೆ ಕೊನೆಗೆ ಧ್ಯಾನಕ್ಕೆ ಕುಳಿತುಕೊಂಡರೆ ಮೈ ಹಗುರವಾದಂತೆ ಅನಿಸುತ್ತಿತ್ತು; ಹಾಗೇ ಒಂದಿಷ್ಟು ಬೆಳಕು ಪಳಕನ್ನೂ ಕಾಣುತ್ತಿದ್ದೆ. ವಯಸ್ಸು... ಇಲ್ಲ ಆಗಿನ್ನೂ ನನಗೆ ಅಷ್ಟೇನೂ ವಯಸ್ಸಾಗಿರಲಿಲ್ಲ. ಇಪ್ಪತ್ತೋ – ಇಪ್ಪತ್ತೊಂದೊ ಇದ್ದಿರಬಹುದು. ಆರಳಿ ಮರದ ತರಹ ತಲೆ ಎತ್ತಿ, ನೆಟ್ಟಗೆ ನಡಿಯುತ್ತಿದ್ದೆ. ಮನದಲ್ಲೇ ಗೊಣ ಗೊಣ ಎಂದು ಗೊಣಗುಟ್ಟುತ್ತಿದ್ದೆ. ಎದೆಯ ಮೇಲೆ ಕೈ ಅಡ್ಡವಾಗಿ ಮಡಿಸಿಟ್ಟುಕೊಂಡು ಸ್ವಾಮಿ

ವಿವೇಕಾನಂದರಂತೆ ನಿಂತುಕೊಳ್ಳುತ್ತಿದ್ದೆ – ಮೈ ಡಿಯರ್ ಬ್ರದರ್ಸ್ ಎಂಡ್ ಸಿಸ್ಟರ್ಸ್ – ಹಾ ... ಹಾ .... ಆ ಕಾಲದಲ್ಲಿ ಅಂದರೆ ನನ್ನ ಇಪ್ಪತ್ತು ಇಪ್ಪತ್ತೊಂದನೆಯ ವಯಸ್ಸಿನಲ್ಲಿ, ರಸ್ತೆಯಲ್ಲಾಗಲೀ, ಘಟ್ಟದಲ್ಲಾಗಲೀ,. ಮನೆಯ ಗೋಡೆಯ ಕ್ಯಾಲೆಂಡರಿನ ಚಿತ್ರಗಳಲ್ಲಾಗಲೀ, ಸಿನೆಮಾ ಪೋಸ್ಟರುಗಳಲ್ಲಾಗಲೀ, ನೆನಪಿನಲ್ಲಾಗಲೀ, ಕನಸಿನಲ್ಲಾಗಲೀ, ಯಾವುದರಲ್ಲೇ ಆಗಲಿ ಒಂದಿಷ್ಟು ಹುಡುಗಿಯರ ಸುಳಿವಿರಲಿಲ್ಲ. ಸ್ವಾಮಿ ಅದೇ ಈಗ ನೋಡಿ ಗುಂಪುಗೂಡಿ ಇಷ್ಟೊಂದು ಹುಡುಗಿಯರು ಎಲ್ಲಿಂದ ಬಂದರು? ದೇಶವೆಲ್ಲಾ ಅವರಿಂದ ತುಂಬಿ ಹೋಯಿತು ಎಂದು ಹೇಳುತ್ತಾ ಮಿತ್ರನ ಮುಖ ಸ್ವಲ್ಪ ಬಿಳುಚಿಕೊಂಡಿತು. ಆತಂಕದ ಕಣ್ಣುಗಳಿಂದ ಅವನು ನಾಲ್ಕೂ ಕಡೆ ದಿಟ್ಟಿಸಿ ನೋಡಿದ. ಮಿತ್ರನ ಎಡಬಗಲಿನಲ್ಲಿ ಲಾಂಡ್ರಿಯಿಂದ ಒಗೆದು ಬಂದ ಬಟ್ಟೆ. ಎಡಗೈಯಲ್ಲಿ ಬತ್ತಾಸಿನ ಪೊಟ್ಟಣ. ಬಲಗೈಯಲ್ಲಿ ಬಾಳೆಲೆಯಲ್ಲಿ ಸುತ್ತಿದ ಹೂವು. ಈಗ ಮಿತ್ರನ ಕುತ್ತಿಗೆ ವಾಲುತ್ತೆ. ಮಿತ್ರ ಶ್ಯಾಮನಿಗೆ ಹೇಳುತ್ತಾನೆ. ಸ್ವಲ್ಪ ಹಿಡಿಕೊಳ್ಳಿ ಸ್ವಾಮಿ. ನನ್ನ ಕುತ್ತಿಗೆ ಸ್ವಲ್ಪ ವಾಲುತ್ತಾ ಇದೆ. ಮಿತ್ರ ಹೇಳುತ್ತಲೇ ಶ್ಯಾಮ ತುಂಬಾ ವಿನೀತ ಭಾವದಿಂದ ಕೈ ಮುಂದೆ ಚಾಚಿ ಹೇಳಿದ – ನಿಮ್ಮ ಕೈಯೊಳಗಿನ ಹೂವನ್ನು ಸ್ವಲ್ಪ ಕೊಡಿ. ಮಿತ್ರ ಬೇಡ ಬೇಡ ಎಂದು ಕುತ್ತಿಗೆ ಅಲ್ಲಾಡಿಸುತ್ತಾನೆ. ಇದು ನನ್ನ ನಿತ್ಯಕರ್ಮ ಸ್ವಾಮಿ. ನಮ್ಮಮ್ಮ ಮರದ ಮಂಟಪದಲ್ಲಿ ದೇವರನ್ನು ಪ್ರತಿಷ್ಠಾಪಿಸಿದ್ದಳು. ಸಾಯೋ ವೇಳೆಯಲ್ಲಿ ಮೆಲ್ಲನೆ ಪಿಸುಗುಟ್ಟಿದ್ದಳು – ದೇವರಿಗೆ ಒಂದಿಷ್ಟು ಹೂವು ಬತ್ತಾಸು ಕೊಡ್ತೀಯಾ. ನಾನು ದಿನ ಕೊಡುತ್ತಾ ಬಂದಿದ್ದೇನೆ. ಇವೆಲ್ಲಾ ಒಂದು ನಾಲ್ಕು ಆರಾಣೆಯೊಳಗೆ ಮುಗಿದು ಹೋಗುತ್ತೆ. ಅದು ಅಲ್ಲದೆ ದೇವರು ದಿಂಡರು ಅಂದ್ರೆ ನನಗೇನು ಭಕ್ತಿ ಶ್ರದ್ಧೆ ಇಲ್ಲ. ನಿಮಗೆ ದೇವರು ದಿಂಡರು ಇದಾರೆ ಅಂತ ಮನಸ್ಸಿಗನಿಸುತ್ತಾ? ಹೀಗೆಂದು ಮಿತ್ರ ಉತ್ಸುಕ ಕಣ್ಣಿನಿಂದ ಶ್ಯಾಮನ ಕಡೆ ನೋಡುತ್ತಾನೆ. ಅನಂತರ ತಾನೇ ಹೇಳುತ್ತಾನೆ – ಏನೋ ಒಂದು ಇದೆ ಅಂತ ಅನ್ನಿಸುತ್ತೆ. ಆದರೆ ...

ಮಿತ್ರ ಈ ರೀತಿ ಹೇಳುತ್ತಾ ಆ ಓಣಿಯ ಕೊನೆಯಲ್ಲಿ ಮಿತ್ರನ ಮನೆ ಮೊಂದೆ ಅವರು ಬಂದು ತಲುಪುತ್ತಾರೆ. ಮಿತ್ರ ಬೀಗ ತೆಗೆದು ಮನೆ ಒಳಹೊಕ್ಕು ದೀಪ ಹಾಕಿ, ಹೇಳುತ್ತಾನೆ – ಇದೇ ನನ್ನ ಮನೆ ಸ್ವಾಮಿ. ಮಿತ್ರನ ಮನೆಯಲ್ಲಿ, ಗೋಡೆಯ ಮೇಲೆ ಅನೇಕ ದೇವರುಗಳ ಪಟ ತೂಗು ಹಾಕಲಾಗಿದೆ. ಗೂಟಗಳ ಮೇಲೆ ಮೂರು – ನಾಲ್ಕು ಕ್ಯಾಲೆಂಡರುಗಳು, ಆರಾಮಕುರ್ಚಿ, ಟೇಬಲ್ ಹಾಗೂ ಅಲ್ಲಿ ಇಲ್ಲಿ ಕಂಬದ ತರಹ ಪೇರಿಸಿಟ್ಟಿರುವ ಕಾಗದ ಪುಸ್ತಕಗಳು. ಜ್ಯೋತಿಷ್ಯ ವಿದ್ಯೆಯ ಎರಡು ಪುಸ್ತಕಗಳು ಟೇಬಲಿನ ಮೇಲೆ ಮುದುರಿ ಬಿದ್ದಿವೆ. ಟೇಬಲಿನ ಮೇಲೆ ರವೀಂದ್ರನಾಥ ಠಾಕೂರರ ಒಂದು ಪಟ, ಅದಕ್ಕೆ ಒಂದು ಹೂವಿನ ಹಾರ ಹಾಕಲಾಗಿದೆ. ಎದುರಿನಲ್ಲಿ ಒಂದು ಊದಿನ ಕಡ್ಡಿ ಸ್ಟ್ಯಾಂಡ್. ಕೋಣೆಯ ತುಂಬಾ ಧೂಳು ತುಂಬಿದೆ. ಆ ಕೋಣೆಗೆ ಒಂದೇ ಒಂದು ಕಿಟಕಿ ಮಾತ್ರ, ಒಳಗಿನ ಕಡೆ ಮತ್ತೊಂದು ಬಾಗಿಲು. ಮಿತ್ರ ಎಡಗೈಯಿಂದ ತನ್ನ ಶರ್ಟಿನ ಗುಂಡಿಯನ್ನು ಬಿಚ್ಚುತ್ತಾ, ಬಲಗೈಯಿಂದ ಬಾಗಿಲ ಚಿಲಕ ಸರಿಸಿ, ಮುಚ್ಚಿ ಹೇಳಿದ – ಒಳಗಡೆ ನೋಡ್ತೀರೋ ಇಲ್ವೋ. ಶ್ಯಾಮ ಹೇಳ್ತಾನೆ ಇರಲಿ ಬಿಡಿ.

ಮಿತ್ರನೇ ಮಾತು ಮುಂದುವರೆಸುತ್ತಾನೆ – ಒಳಗಡೆ ಒಂದು ಅಡಿಗೆ ಮನೆ ಇದೆ. ಒಲೆ ಹೂಡಿದೆ, ಉಗ್ರಾಣ ಇದೆ. ಫ್ಯಾಮಿಲಿಯ ತೊಂದರ್ರೆ ಏನಿಲ್ಲ. ನಾನೊಬ್ಬ ಅದೃಷ್ಟಹೀನ.

ಮಿತ್ರ ಬೇಗನೆ ಪಂಚೆ, ಶರ್ಟು, ಬದಲಾಯಿಸಿ, ಲುಂಗಿ ಉಟ್ಟುಕೊಂಡ. ಒಂದು ಕ್ಷಣ ಒಳಗೆ ಹೋಗಿ ಕಣ್ಣು, ಮುಖ, ಕೈ ಕಾಲು ತೊಳೆದುಕೊಂಡು ಬಂದ, ಅನಂತರ ಟೇಬಲಿನ ಮುಂದೆ ಒಂದು ಆಸನ ಹಾಕಿ, ನೆಲದ ಮೇಲೆ ಕುಳಿತು ಶ್ಯಾಮನಿಗೆ ಕೈತೋರಿಸಿ, ಸ್ವಲ್ಪ ಹೊತ್ತು ಕಾಯುವಂತೆ ಸನ್ನೆ ಮಾಡಿದ. ಟೇಬಲಿನ ಕೆಳಗೆ, ಒಂದು ಮರದ ಚಿಕ್ಕ ಮಂಚ, ಅದರಲ್ಲಿ ಒಂದು ಹಿತ್ತಾಳೆ ಗೋಪಾಲಕೃಷ್ಣ, ಮಣ್ಣಿನ ಕೆಲವು ದೇವರುಗಳು, ರಾಮಕೃಷ್ಣ ಹಾಗೂ ಶಾರದಾದೇವಿಯ ಪಟ. ಈ ಕಡೆ ಬೇರೆ ಒಂದು ಹಿತ್ತಾಳೆಯ ಮಂಟಪದಲ್ಲಿ, ಪಳಪಳ ಹೊಳೆವ ಒಂದು ಶಿವಲಿಂಗ, ಒಂದು ಚಿಕ್ಕ ತಟ್ಟೆಯಲ್ಲಿ ಬತ್ತಾಸು, ಒಂದು ಲೋಟದಲ್ಲಿ ನೀರು ಎಲ್ಲವನ್ನೂ ಮಿತ್ರ ಸಜ್ಜುಗೊಳಿಸಿದ. ಮಿತ್ರ ಎಲ್ಲಾ ದೇವರಿಗೂ ಹೂವನ್ನು ಭಾಗಮಾಡಿ ಏರಿಸಿದ, ಅನಂತರ ಕಣ್ಣು ಮುಚ್ಚಿ ಕೆಲವೊಂದು ಸೆಕೆಂಡ್ ಕುಳಿತುಕೊಂಡಿದ್ದ.

ಮಿತ್ರ ಧ್ಯಾನ ಮುಗಿಸಿ, ಎದ್ದು ನಿಂತುಕೊಳ್ಳುತ್ತಿರುವಂತೆಯೇ, ಶ್ಯಾಮ ಕೇಳುತ್ತಾನೆ – ಯಾವ ಮಂತ್ರ ಹೇಳಿದಿರಿ.

– ನಾನು ದೇವರಿಗೆ ಹೇಳಿದೆ – ದೇವರೇ ಸ್ವೀಕರಿಸು. ಅಮ್ಮ ಇದೇ ಮಂತ್ರವನ್ನು ಹೇಳುತ್ತಿದ್ದಳು. ಬೇರಿನ್ನೇನು ಇಲ್ಲ. ಸ್ವಾಮಿ, ಇವೆಲ್ಲ ಕೇವಲ ಅಭ್ಯಾಸ ಬಲ, ತುಂಬಾ ದಿನಗಳ ನಂತರ ತಪ್ಪು ಮಾಡಿ, ಒಂದು ಸಲ ಕೊಡೋ ಬತ್ತಾಸನ್ನು ಪುನಃ ದೇವರಿಗೆ ಕೊಟ್ಟಿದ್ದೇನೆ. ಜ್ವರಗಿರ ಬಂದರೆ ಹಾಸಿಗೆಯ ಮೇಲೆ ಮಲಗೇ ಹೇಳುತ್ತೇನೆ, – ದೇವರೇ ಸ್ವೀಕರಿಸು. ದೇವರು ಆವಾಗ ಏನು ತಿನ್ನುತ್ತಾನೋ ಏನೋ ಯಾರಿಗೆ ಗೊತ್ತು? ಆದರೂ ನಾನು ಪ್ರಸಾದದ ಬತ್ತಾಸನ್ನು ಡಬ್ಬಿಯಲ್ಲಿ ಹಾಕಿಡುತ್ತೇನೆ. ಸಾಯಂಕಾಲ ಅರಳಿನೊಂದಿಗೆ ತಿನ್ನುತ್ತೇನೆ...

ಮಿತ್ರ ಶ್ರದ್ಧೆಯಿಂದ ರವೀಂದ್ರನಾಥ ಠಾಕೂರರ ಪಟದ ಎದುರು ಊದಿನ ಕಡ್ಡಿ ಹಚ್ಚಿಟ್ಟ. ಶ್ಯಾಮ ಪಟದ ಮೇಲೆ ಏರಿಸಿದ ಹೂವಿನ ಹಾರ ತುಂಬಾ ಹೊಚ್ಚ ಹೊಸದಾಗಿರುವುದನ್ನು ಗಮನಿಸುತ್ತಾನೆ. ಹೂವನ್ನು ನೋಡಿದರೆ ಬೆಳಗ್ಗೆ ಹೊಸದಾಗಿ ಕೊಂಡು ಏರಿಸಿದ್ದೇನೋ ಎಂದೆನಿಸುತ್ತೆ. ಶ್ಯಾಮ ಮಿತ್ರನನ್ನು ಕೇಳುತ್ತಾನೆ – ಆ ಹಾರ ಏತಕ್ಕೆ?

ಮಿತ್ರ ಸ್ವಲ್ಪ ನಾಚಿಕೆಯಿಂದ ನಕ್ಕು – ಇದಕ್ಕೂ ಅಭ್ಯಾಸ ಬಲ ಎಂದೇ ಹೇಳಬಹುದು. ಮಿತ್ರ ಈ ರೀತಿ ಹೇಳಿ ಹಿಂದೆ ಮುಂದೆ ನೋಡುತ್ತಾನೆ – ನೋಡಿ ನಿಮಗೆ ಈಗಾಗಲೇ ಹೇಳಿದ್ದೇನೆ, ಈ ದೇವರು ದಿಂಡರಲ್ಲಿ ನನಗೆ ಒಂದಿಷ್ಟೂ ಶ್ರದ್ಧೆ ಭಕ್ತಿ ಇಲ್ಲ ಅಂತ. ಆದರೆ ಎಲ್ಲೋ ಏನೋ ಒಂದು ಇದೆ ಸ್ವಾಮಿ ... ರವೀಂದ್ರನಾಥ ಠಾಕೂರರು – ರವೀಂದ್ರನಾಥ ಠಾಕೂರರು. ಎಂದು ಹೇಳುತ್ತಾ, ಪುನಃ ಮಿತ್ರ ನಾಚಿಕೆಯಿಂದ ನಕ್ಕು – ಅದೊಂದು ವಿಷಯ ಇದೆ ಸ್ವಾಮಿ, ಅದೆಲ್ಲ ನಿಮಗೆ ಸರಿಯಾಗಿ ಅರ್ಥವಾಗುವುದಿಲ್ಲ ಎಂದೆನ್ನುತ್ತಾನೆ.

ಶ್ಯಾಮ – ಯಾಕೆ? ಎಂದು ಕೇಳುತ್ತಾನೆ. ಮಿತ್ರ ಕಣ್ಣು ಹೊರಳಿಸಿ ಹೇಳುತ್ತಾನೆ – ನಿಜವಾಗಿ ನೋಡಿದರೆ ನನಗೆ ರವೀಂದ್ರನಾಥ ಠಾಕೂರರಲ್ಲಿ ತುಂಬಾ ಭಕ್ತಿ ಹಾಗೂ ಶ್ರದ್ಧೆ. ಅದಂತೂ ತುಂಬಾ ಜನರಿಗೆ ಇದೆ ಎಂದು ಶ್ಯಾಮ ನಗುತ್ತಾನೆ.

– ಇಲ್ಲ ಸರಿಯಾಗಿ ಅದೇ ರೀತಿಯಲ್ಲಿ ರವೀಂದ್ರ ಜಯಂತಿಯಂದು ನಾನು ಹೋಗುವುದಿಲ್ಲ ಎಂದೂ ಶಾಂತಿನಿಕೇತನವನ್ನು ನಾನು ನೋಡಿಲ್ಲ. ಇಲ್ಲ ಸ್ವಾಮಿ ನಾನು ರವೀಂದ್ರನಾಥ ಠಾಕೂರರ ಕವಿತೆಗಳನ್ನೂ ತುಂಬ್ಸಾ ಓದಿಲ್ಲ. ಶಾಲೆಯಲ್ಲಿನ ಬಂಗಾಲಿ ಪುಸ್ತಕದಲ್ಲಿ ಏನಿದ್ದವೋ ಅವೇ. ಅದೂ ಒಂದೆರಡು ಚಿಕ್ಕ ಪುಟ್ಟವು ಮಾತ್ರ. ಪೂರ್ತಿ ಕವಿತೆ ಯಾವುದೂ ಬಾಯಿಗೆ ಕಂಠಸ್ಥವಾಗಿಲ್ಲ. ಆದರೆ ಒಂದೆರಡು ಸಾಲು ಹೇಳು ಅಂತ ಯಾರಾದರೂ ಹೇಳಿದರೆ ಹೇಳಬಲ್ಲೆ.

–ರಮಣಿಯರ ಮನ ಸಹಸ್ರ ವರ್ಷಗಳ ಸಖಾಸಾಧನದ ಧನ

ಅಥವಾ

ಎಲೇ ವಧೂ ಸುಂದರೀ......

ಹಾಃ ಹಾಃ ಇಲ್ಲ ಸ್ವಾಮಿ, ಸರಿಯಾಗಿ ನೀವು ಯಾವ ದೃಷ್ಟಿಯಿಂದ ನೋಡುತ್ತೀರೋ ಆ ದೃಷ್ಟಿಯಿಂದ ಅಲ್ಲ. ನನಗೆ ರವೀಂದ್ರರು ಬೇರೆಯೇ ತರಹ, – ಏನೋ ಒಂದು ಅನ್ಯವಿಧ, ಬೇರೇನೇ.

ಮಿತ್ರ ಶ್ಯಾಮನ ಬಳಿ ಬಂದು ಮಂಚದ ಮೇಲೆ ಕುಳಿತುಕೊಳ್ಳುತ್ತಾನೆ. ಸ್ವಲ್ಪ ಧ್ವನಿ ಕುಗ್ಗಿಸಿ – ಕಷ್ಟದಲ್ಲಿರುವಾಗ ನಾನು ರವೀಂದ್ರರನ್ನೇ ಕರೆಯೋದು ಸ್ವಾಮಿ. ಮಿತ್ರನ ಕಣ್ಣೊ ಮುಖಗಳಲ್ಲಿ ಒಂದು ರೀತಿಯ ಗಂಭೀರತೆ ಎದ್ದು ಕಂಡು ಬರುತ್ತದೆ. ಅವನು ಹೇಳುತ್ತಾನೆ – ಚಿಕ್ಕ ವಯಸ್ಸಿನಿಂದಲೂ ಅಷ್ಟೇ ಸ್ವಾಮಿ, ನನಗಿದೇ ಅಭ್ಯಾಸ. ಸರಿಯಾಗಿ ನೆನಪಿಲ್ಲ. ಆದರೂ ಚಿಕ್ಕಂದಿನಲ್ಲಿ ಒಂದು ಸಲ ತಲೆಯ ಮೇಲೆ ಒಂದು ಹಲ್ಲಿಮರಿ ಬಿದ್ದುಬಿಟ್ಟಿತ್ತು. ಭಯದಿಂದ ನಾನು ಓಡಿದೆ. ಆದರೆ ಧಡಂ ಎಂದು ನಾನು ಅಪ್ಪನ ಟೇಬಲಿಗೆ ಡಿಕ್ಕಿ ಹೊಡೆದಿದ್ದೆ. ಅಳುತ್ತ ಎದ್ದು ನಿಂತುಕೊಂಡು ನೋಡಿದೆ, ಟೇಬಲಿನ ಮೇಲೆ ರವೀಂದ್ರನಾಥ ಠಾಕೂರರ ಪಟ, ಪಟಕ್ಕೆ ಹಾರ ಹಾಕಲಾಗಿದೆ, ಎದುರು ಊದಿನಕಡ್ಡಿ ಉರಿಯುತ್ತಿದೆ. ನಾನು ಅಳುತ್ತ ರವೀಂದ್ರನಾಥರಿಗೆ ಹೇಳಿದೆ – ನನ್ನ ಘನ ಕೂದಲಿನ ರಾಶಿಯ ಮೇಲೆ ಒಂದು ಹಲ್ಲಿ ಬಿದ್ದುಬಿಟ್ಟಿದೆ. ಅದನ್ನು ಸರಿಸಿ ಬಿಡಿ. ತಕ್ಷಣ ಹಲ್ಲಿಯ ಮರಿ ಟೇಬಲಿನ ಮೇಲೆ ದೊಪ್ಪನೆ ಬಿತ್ತು. ಅನಂತರ ಗೋಡೆ ಏರಿ ಸರ ಸರನೇ ಹೊರಟುಹೋಯಿತು. ನಾನು ಒಂದು ಕ್ಷಣ ನಡುಗಿ ಹೋದೆ. ನಗಬೇಡಿ ಸ್ವಾಮಿ, ಪಟದಲ್ಲಿನ ರವೀಂದ್ರನಾಥರ ಕಣ್ಣು ಮುಖದಲ್ಲಿ ನಗು ಚಿಮ್ಮುತ್ತಿದೆ ಎಂದು ನನಗೆನಿಸಿತು. ಭಯದಿಂದ ನನ್ನ ಮೈಯಲ್ಲಿ ಮುಳ್ಳು ಎದ್ದಿದ್ದವು. ನಾನು ಓಡಿ ಹೋದೆ. ಅನಂತರ ನನಗೆ ಕ್ರಮೇಣ ಅರ್ಥವಾಯಿತು. ನಾನು ರವೀಂದ್ರರನ್ನು ಗುಟ್ಟಾಗಿ ಪಡೆದಿದ್ದೇನೆ ಎಂದೆನಿಸಿತು. ತಾಯಿಯ ಬಳಿ ಶರೀರದ ಜ್ವರವನ್ನು ಬಚ್ಚಿಡುವಂತೆ ನಾನು ಎಲ್ಲರಿಂದಲೂ ರವೀಂದ್ರರನ್ನು ಬೇರ್ಪಡಿಸಿ, ಗುಟ್ಟಾಗಿ ಇಟ್ಟುಕೊಂಡೆ. ರಾತ್ರಿಯ ಹೊತ್ತಿನಲ್ಲಿ ನನ್ನಿಂದ ಒಂದು ಕತ್ತಲು ಕೋಣೆಯನ್ನು ದಾಟಿಕೊಂಡು ಹೋಗಲು ಸಾಧ್ಯವಾಗುತ್ತಿರಲಿಲ್ಲ – ರವೀಂದ್ರರೇ ನಾನು ಕತ್ತಲು ಕೋಣೆಯನ್ನು ದಾಟಿಕೊಂಡು ಹೋಗಲಾರೆ, ನನ್ನನ್ನು ದಾಟಿಸಿ ಬಿಡಿ ಎಂದು ಕೂಗಿ ಮೊರೆ ಇಟ್ಟೆ. ಯಾರೋ ತೀರಾ ಪರಿಚಿತರಂತೆ ನನ್ನ ಕೈ

ಹಿಡಿದುಕೊಳ್ಳುತ್ತಿದ್ದರು. ನಾನು ಆ ಕತ್ತಲು ಕೋಣೆಯನ್ನು ದಾಟಿಬಿಡುತ್ತಿದ್ದೆ. ಗಾಳಿ ಪಟವನ್ನು ಹಿಡಿಯಲು ಹೋಗಿ, ಒಂದು ಸಲ ನಾನು ನಮ್ಮ ವಠಾರದ ಹುಡುಗರೊಂದಿಗೆ ಚೆನ್ನಾಗಿ ಹೊಡೆದಾಡಿ, ಒದೆತ ತಿಂದು ಜೋರಾಗಿ ಬೊಬ್ಬೆಯಿಟ್ಟಿದ್ದೆ. ರವೀಂದ್ರರೇ ನನಗೆ ಇವರೆಲ್ಲ ಹೊಡೆಯುತ್ತಿದ್ದಾರೆ ನೀವು ನನ್ನನ್ನು ಇಲ್ಲಿಂದ ದೂರ ಕರೆದುಕೊಂಡು ಹೋಗಿ. ನನ್ನ ಮಾತನ್ನು ಕೇಳಿ ಹುಡುಗರು ನನ್ನ ಸುತ್ತುವರಿದರು. ನಗುತ್ತಾ ಅವರೆಲ್ಲ ನನ್ನನ್ನು ಗೇಲಿ ಮಾಡಿದರು – ಏನೋ ಹುಡುಗ, ರವೀಂದ್ರರು ನಿನ್ನನ್ನು ಇಲ್ಲಿಂದ ಕರೆದುಕೊಂಡು ಹೋಗುತ್ತಾರಾ?

ಅವರ ನಗುವಿನ ಮಧ್ಯೆ ನಾನು ತಪ್ಪಿಸಿಕೊಂಡು ಓಡಿ ಹೋಗಿಬಿಟ್ಟಿದ್ದೆ.

ನಾನು ಎಷ್ಟೊಂದು ಸಲ ನಮ್ಮ ಹೂದೋಟದಲ್ಲಿ ರವೀಂದ್ರರೊಡನೆ ಸುತ್ತಾಡಿದ್ದೇನೆ. ಎಷ್ಟೋ ಸಲ ದೂರದವರೆಗೆ, ನೀಲಕುಂಠಿತ ಫಲವನ್ನು ತಿನ್ನಲು ಹೋಗಿದ್ದೇನೆ. ರೈಲ್ವೇ ಸೇತುವೆಯನ್ನು ದಾಟಿ ಶಂಭೂಗುಜಿನ ಜಾತ್ರೆಯನ್ನು ನೋಡಲು ಹೋಗಿದ್ದೇನೆ. ಪರಿಚಯವಿಲ್ಲದ ಮೀನುಗಾರರ ದೋಣಿ ಹತ್ತಿ ಕಳ್ಳತನದಲ್ಲಿ ದೋಣಿಯಲ್ಲಿ ವಿಹರಿಸುತ್ತಿದ್ದೆ. ಜನ ಸುಭೋದ್ ಒಬ್ಬನೇ ಹೋಗಿದ್ದಾನೆ ಎಂದು ತಿಳಿದುಕೊಂಡಿದ್ದಾರೆ, ಆದರೆ ಅದು ಸರಿಯಲ್ಲ. ನನ್ನೊಂದಿಗೆ ಯಾವಾಗಲೂ ರವೀಂದ್ರರೂ ಇರುತ್ತಿದ್ದರು. ಅದೇ ಉದ್ದನೆಯ ತಲೆಯಲ್ಲಿ ಕಪ್ಪು ಚಿಕ್ಕದೋಣಿಯಂಥ ಟೋಪಿ. ಮೈ ಮೇಲೆ ಜುಬ್ಬ, ಹಾಲಿನಂತೆ ಬಿಳುಪಾಗಿರುವ ಗಡ್ಡವಿರುವ ರವೀಂದ್ರನಾಥರು ಯಾವಗಲೂ ನನ್ನೊಂದಿಗೇ ಇರುತ್ತಿದ್ದರು. ಸ್ವಲ್ಪ ಬಗ್ಗಿ ಅವರ ಮೆತ್ತಗಿನ ಕೈಯಲ್ಲಿ ನನ್ನ ಕೈಗಳನ್ನು ಹಿಡಿದುಕೊಳ್ಳುತ್ತಿದ್ದರು. ನಾನು ನಿಶ್ಚಿಂತನಾಗಿ ಎಲ್ಲಿ ಬೇಕೆಂದರಲ್ಲಿಗೆ ಹೋಗಿಬಿಡುತ್ತಿದ್ದೆ. ಆಗ ದಾರಿ ತಪ್ಪುವ ಯೋಚನೆ ಇರುತ್ತಿರಲಿಲ್ಲ. ರವೀಂದ್ರರು ನನ್ನನ್ನು ಸರಿಯಾಗಿ ಗುರಿ ತಲುಪಿಸುತ್ತಾರೆ ಎಂದು ನನಗೆ ಚೆನ್ನಾಗಿ ಗೊತ್ತು. ಜೋರಾಗಿ ಬಿರುಗಾಳಿ ಬಂದರೆ, ನನ್ನನ್ನು ತಮ್ಮ ಜುಬ್ಬದ ಮರೆಯಲ್ಲಿ ಅಡಗಿಸಿಬಿಡುತ್ತಾರೆ. ನಿದ್ದೆ ಮಾಡುವ ಮೊದಲು, ನನಗೆ ದಂತಕತೆಗಳನ್ನು ಹೇಳುತ್ತಾರೆ. ಅಮ್ಮ, ಅಕ್ಕ ಹಾಗೂ ಅಜ್ಜಿಯಿಂದ ಎಷ್ಟೊಂದು ಸಲ ಕೇಳಿದ್ದೇನೆ. ಭೂತದ ಭಯವಾದರೆ ಎದೆ ಮೇಲೆ ರಾಮನಾಮ ಬರೆದುಕೋ, ಸಂಜೆ ನಾಲಕ್ಕು ನಕ್ಷತ್ರಗಳನ್ನು ನೋಡದೆ ಮನೆಯೊಳಗೆ ಬರಬೇಡ, ರಾತ್ರಿ ಒಂದು ವೇಳೆ ಹಾವಿನ ಭಯವಾದರೆ ಮೂರು ಸಲ ಆಸ್ತಿಕ ಮುನಿಯ ಹೆಸರು ಹೇಳು – ಇಷ್ಟೆಲ್ಲ ಅವರು ಹೇಳಿದರು ನಾನು ಅವನ್ನೆಲ್ಲ ನಂಬುತ್ತಿರಲಿಲ್ಲ. ರವೀಂದ್ರರಿಗೆ ನಾನು ಹೇಳುತ್ತಿದ್ದೆ – ನನಗೆ ನೀವು ಇದ್ದೀರ ಎನ್ನುವುದು ಇವರಿಗೆ ಗೊತ್ತಿಲ್ಲ. ಆ ಮೇಲೆ ನಾವಿಬ್ಬರೂ ತುಂಬಾ ಹೊತ್ತು ನಗುತ್ತಿದ್ದೆವು.

ಇಲ್ಲಿ ಯಾವಾಗಲೂ, ಏನು ಬೇಕೆನಿಸಿದರೂ ಅದು ಸಿಕ್ಕೇ ಸಿಗುತ್ತೆ ಎನ್ನುವಂತಿಲ್ಲ. ಒಂದು ಸಲ ಒಬ್ಬ ಹುಡುಗ, ನಾನು ಸಾಕಿದ ಗಿಳಿಗೆ ಕಲ್ಲು ಬೀಸಿದ್ದ. ನಾನು ರವೀಂದ್ರರಿಗೆ ಹೇಳಿದ್ದೆ – ರವೀಂದ್ರರೇ ನೀವು ಆ ಹುಡುಗನ ಎರಡೂ ಕಣ್ಣುಗಳನ್ನು ಕುರುಡು ಮಾಡಿಬಿಡಿ. ಅದರ ಫಲವಾಗಿ ಎರಡು ದಿನಗಳ ನಂತರ ನನ್ನ ಕಣ್ಣು ತೆರೆಯಿತು. ಮತ್ತೊಂದು ಸಲ ನಾನು ನನ್ನ ಚಿಕ್ಕ ತಂಗಿಗೆ ಹೇಳಿದ್ದೆ – ನಾನು ಬೇಕಾದರೆ ರಾತ್ರಿ ಹತ್ತು ಗಂಟೆಯ ನಂತರ, ಒಬ್ಬಂಟಿಗನಾಗಿ

ಮುಚ್ಚಣಿಕೆಯ ಮೇಲೆ ಅಡ್ಡಾಡಿ ಬರುತ್ತೇನೆ, ಅವಳು – ಇಸ್ಸೀ ನಿನ್ನಿಂದೇನು ಸಾಧ್ಯ ಎಂದಿದ್ದಳು. ಛಲದಿಂದ ನಾನು ಅವಳಿಗೆ ಹೇಳಿದ್ದೆ – ಬೇಕಾದರೆ ಪಣ ಕಟ್ಟಿ ನೋಡು. ಅವಳು ತಾನು ಕೂಡಿಟ್ಟ ಹಣವನ್ನು ಕೊಡುವುದಾಗಿ ಪಣ ತೊಟ್ಟಳು. ಒಂದು ರಾತ್ರಿ ನಾನು ಹತ್ತು ಗಂಟೆಯ ನಂತರ ನಗು ನಗುತ್ತಾ ಮುಚ್ಚಣಿಕೆಯ ಮೇಲೆ ಒಬ್ಬನೇ ಹೋದೆ. ಆದರೆ ಅಲ್ಲಿಂದ ಇಳಿದು ಬರುವಾಗ ಮಾತ್ರ, ನಮ್ಮ ಮನೆ ಸಾಕು ಬೆಕ್ಕಿನ ಮೈಯನ್ನು ತಡವರಿಸಿ ತುಳಿಯುತ್ತಲೇ ಬೆಕ್ಕು ನನ್ನ ಅಂಗಾಲನ್ನು ಕಚ್ಚಿ ಬಿಟ್ಟಿತು. ಅಂದು ರಾತ್ರಿ ರವೀಂದ್ರರು ನನ್ನೊಡನೆ ಮಾತುಕತೆಯಾಡಲಿಲ್ಲ. ಯಾಕೋ ಏನೋ, ನನಗೆ ತಿಳಿದಿದ್ದರೂ ಅವಳೊಡನೆ ಪಂದ್ಯ ಕಟ್ಟಿದ್ದೆ. ಯಾಕೋ ಏನೋ ನನ್ನ ತಂಗಿ ತಂದು ಕೊಟ್ಟ ತಿಂಡಿಯನ್ನು ನಿರಾಕರಿಸಿದೆ. ಪಾಪ ಕೂಡಿಟ್ಟ ಹಣದಲ್ಲಿ ಸರ ತೆಗೆದುಕೊಳ್ಳದೆ ಹಾಗೇ ಕೂಡಿಟ್ಟು ಜೋಪಾನ ಮಾಡಿದ ಹಣ. ಹೌದು ಸ್ವಾಮಿ ಎಲ್ಲಿಯವರೆಗೂ ನಾನು ಪವಿತ್ರನಾಗಿರುತ್ತೇನೋ, ಶುದ್ಧನಾಗಿರುತ್ತೇನೋ ಅಷ್ಟರವರೆಗೆ ರವೀಂದ್ರನಾಥರು ನನ್ನೊಂದಿಗೆ ಇರುತ್ತಾರೆ. ಬಿರುಗಾಳಿಯಲ್ಲಿ, ಬೆಳಕಿನಲ್ಲಿ, ಕತ್ತಲಲ್ಲಿ, ಮನೆಯಲ್ಲಿ ಅಥವಾ ದೂರದಲ್ಲಿ ಎಲ್ಲಾ ಸಮಯದಲ್ಲೂ ಅದೇ ಉದ್ದನೆಯ ಜುಬ್ಬ ತೊಟ್ಟ, ನೀಳ ಗಡ್ಡ ಬೆಳೆಸಿರುವ, ತಲೆಯ ಮೇಲೆ ಕರಿ ಟೋಪಿ ತೊಟ್ಟ ಆ ವ್ಯಕ್ತಿ ಎಲ್ಲಾ ಕೆಲಸ ಬಿಟ್ಟು ನನ್ನೊಡನೆ ಇರುತ್ತಿದ್ದ.

ಕ್ರಮೇಣ ಮಿತ್ರನ ಕಣ್ಣುಗಳಲ್ಲಿ ನೀರಾಡಿತು – ಇಲ್ಲ ಸ್ವಾಮಿ, ನಿಮ್ಮ ರಕ್ತ ಮಾಂಸದಿಂದ ತುಂಬಿದ ರವೀಂದ್ರರನ್ನು ನಾನು ಕಂಡಿಲ್ಲ. ನಿಮ್ಮ ರವೀಂದ್ರರೊಂದಿಗೆ ನನ್ನ ರವೀಂದ್ರರ ಹೊಂದಾಣಿಕೆ ಏನಾದರೂ ಆಗುತ್ತೆ ಎಂದು ನಿನಗೇನಾದರೂ ಅನಿಸುತ್ತಾ?

ಶ್ಯಾಮ ಇಲ್ಲ ಎಂದು ತಲೆ ಅಲ್ಲಾಡಿಸುತ್ತಾನೆ.

ಹಾಂ ಅದೇ ತರಹ. ನಿಜವಾಗಿ ನೋಡಿದರೆ ನಾನೇ ನಿಜವಾದ ರವೀಂದ್ರರನ್ನು ಪಡೆದಿದ್ದೇನೆ. ಆದರೆ ಇಟ್ಟುಕೊಳ್ಳಲು ನನ್ನಿಂದ ಸಾಧ್ಯವಾಗಲಿಲ್ಲ. ಕ್ರಮೇಣ ವಯಸ್ಸು ಹೆಚ್ಚಾಗುತ್ತಾ ಇದೆ. ಕೆನ್ನೆಯ ಮೇಲೆ ಮೊಡವೆ ಗುಳ್ಳೆಗಳಾದವು. ನಿದ್ದೆಯಲ್ಲಿ ಒಂದೆರಡು ಹುಚ್ಚು ಕನಸುಗಳಾದವು. ಓಡಾಟದಲ್ಲಿ ಒಂದು ರೀತಿಯ ಠೀವಿ ಬಂತು. ಸ್ವಾಮಿ ನನ್ನ ಒಳಗೆ ಪಾಪ ತುಂಬಲು ಆರಂಭವಾಯಿತು. ಆಗ ನಾನು ಸ್ಕೂಲಿನಲ್ಲಿ ರವೀಂದ್ರರ ಕವಿತೆಗಳನ್ನು ಓದುತ್ತಿದ್ದೆ. ಅರ್ಥ ತಿಳಿದುಕೊಳ್ಳದೆ ಸುಮ್ಮನೆ ಕವಿತೆ ಓದುತ್ತಿದ್ದೆ. ನಾನು ಯಾರನ್ನು ನನ್ನ ಗುರುತಿನವರು ಎಂದು ಹೇಳುತ್ತೇನೋ ಅವರು ಅವರಲ್ಲ. ಎಂದಾದರೂ ಒಮ್ಮೊಮ್ಮೆ ಮನಸ್ಸಿಗೆ ಅನಿಸುತ್ತಿತ್ತು. ಒಂದು ದಿನ ನಮ್ಮ ಹೂದೋಟದಲ್ಲಿ ಮೂಲೆಯಲ್ಲಿನ ಶಿಮೋಲ್ ಮರದ ಕೆಳಗೆ ಕುಳಿತು ಹುಲ್ಲಿನ ಗರಿಯೊಂದನ್ನು ಹಲ್ಲಿನಿಂದ ಕಡಿಯುತ್ತ ರವೀಂದ್ರರನ್ನು ಕರೆದೆ – ರವೀಂದ್ರರೇ, ಏನೂ ಪ್ರತ್ಯುತ್ತರ ಬರಲಿಲ್ಲ. ಪುನಃ ಕರೆದೆ ಪುನಃ ಏನೂ ಪ್ರತ್ಯುತ್ತರವಿಲ್ಲ. ಪ್ರತ್ಯುತ್ತರ ಬರಲಿಲ್ಲ ಅಂದರೆ ಬರಲೇ ಇಲ್ಲ. ಮಧ್ಯರಾತ್ರಿ ಅಂದು ನಿದ್ದೆಯಿಂದ ಎದ್ದು ಪುನಃ ಕರೆದೆ. ಬೆಳಿಗ್ಗೆ ಎದ್ದೂ ಕರೆದೆ. ಮೇಲ್ಛಾವಣಿಯ ಮೇಲೆ ಹೋಗಿ ಕರೆದೆ, ಬಯಲಿಗೆ ಹೋಗಿ, ದೋಣಿ ಏರಿ, ಆಕಾಶದ ಕಡೆ ನೋಡಿ, ನದಿ ನೀರಿನ ಕಡೆ ನೋಡಿ ... ಕರೆದೆ ... ಅನಂತರ ಗಟ್ಟಿಯಾಗಿ ಅಳುತ್ತ ಕುಳಿತುಕೊಂಡೆ. ನನ್ನ ರವೀಂದ್ರರು ಹೊರಟೇ ಹೋದರು. ನನ್ನ ಬಾಲ್ಯ, ನನ್ನ ಸಾಹಸ, ಶುದ್ಧತೆ, ನನ್ನ ಶೈಶವ

ಎಲ್ಲಾ ಹೊರಟು ಹೋಯಿತು, ಎದೆಯ ಬಡಿತದಲ್ಲಿ ವಿಸರ್ಜನೆಯ ಗಾನ ಕೇಳಿದೆ.

ಮಿತ್ರನ ಕಣ್ಣುಗಳು ನೀರಾಡಿದವು. ಕಣ್ಣೀರು ಕೆನ್ನೆಯ ಮೇಲಿನಿಂದಿಳಿದು ಬಂತು, ನಿದ್ದೆಯ ನಡುವೆ ಚಿಕ್ಕ ಮಗು ಯಾವ ರೀತಿ ತೊಡೆಯ ಮೇಲಿಂದ ಸರಿದು ಹೋಗುತ್ತೋ ಆ ರೀತಿ ನನ್ನಿಂದ ಎಲ್ಲಾ ಹೊರಟು ಹೋಯಿತು. ಅನಂತರದ ನನ್ನ ಜೀವನವೇ ಒಂದು ಟ್ರ್ಯಾಜಿಡಿ ಸ್ವಾಮಿ...

ಈ ರೀತಿ ಹೇಳುತ್ತಾ ಮಿತ್ರ ಬಿಕ್ಕುತ್ತಾನೆ. ಮೊಣಕೈಯಿಂದ ಮುಖ ಮುಚ್ಚಿಕೊಳ್ಳುತ್ತಾನೆ. ಶ್ಯಾಮ ಸರಿದು ಬಂದು ಮಿತ್ರನ ಬಳಿ ಒತ್ತಿ ಕುಳಿತುಕೊಳ್ಳುತ್ತಾನೆ. ಶ್ಯಾಮ ಮಿತ್ರನ ತಲೆ ಸವರುತ್ತಾನೆ. ಏನೋ ಅಡ್ಡಾದಿಡ್ಡಿಯಾಗಿ ಮಾತನಾಡುವ ಪ್ರಯತ್ನ ಮಾಡುತ್ತಾನೆ... ನನಗೆಲ್ಲಾ ಅರ್ಥವಾಗುತ್ತೆ... ನನಗೆಲ್ಲಾ ಅರ್ಥವಾಗುತ್ತೆ.

ಶ್ಯಾಮ ಮಿತ್ರನ ಅಸ್ಪಷ್ಟ ಮಾತು ಕೇಳಿಸಿಕೊಂಡಿದ್ದ. ರವೀಂದ್ರರನ್ನು ಬಿಟ್ಟರೆ ಬೇರೆ ನನಗೆ ಇನ್ಯಾರೂ ಇಲ್ಲ. ಈಗ ಪುನಃ ನನಗೆ ಹಿಂತಿರುಗಿ ರವೀಂದ್ರರನ್ನು ಯಾರು ತಂದು ಕೊಡುತ್ತಾರೆ?

ಅದೇನೋ ಸರಿ ಎಂದು ಶ್ಯಾಮ ಮಿತ್ರನ ಮಾತಿಗೆ ತುಂಬಾ ದುಃಖಿತನಂತೆ ತಲೆ ತೂಗುತ್ತಾನೆ.

ತಲೆ ಮೇಲೆತ್ತದೆಯೇ ಮಿತ್ರ ಹೇಳುತ್ತಾನೆ. ಎಲ್ಲದಕ್ಕಿಂತ ದೊಡ್ಡ ವಿಷಯ ಯಾವುದು ಅಂತ ನಿಮಗೆ ಗೊತ್ತಾ.

–ಏನು?

–ನನಗೆ ಇನ್ನು ಪ್ರೀತಿಯಿಲ್ಲ.

–ಪ್ರೇಮವಿಲ್ಲ, ಶ್ಯಾಮ ಅರ್ಥವಾಗದವನಂತೆ ಕೇಳುತ್ತಾನೆ.

ಇಲ್ಲಿ ನನ್ನಿಂದ ಎಂದೂ, ಯಾವುದನ್ನೂ ಅಷ್ಟೊಂದು ಪ್ರೀತಿಸಲು ಸಾಧ್ಯವಾಗಿರಲಿಲ್ಲ ಎಂದು ಹೇಳಿ ಮಿತ್ರ ಜೋರಾಗಿ ಅಳಲು ಶುರು ಮಾಡಿದ.

ಮಿತ್ರನನ್ನು ಹಾಗೇ ಅಳಲು ಬಿಟ್ಟು ಶ್ಯಾಮ ಮೆಲ್ಲನೆ ನಿಶ್ಶಬ್ದವಾಗಿ ಎದ್ದು ನಿಂತು ಅಲ್ಲಿಂದ ಹೊರಟು ರಸ್ತೆಗೆ ಬಂದ. ಅನ್ಯಮನಸ್ಕನಾಗಿ ಸಿಗರೇಟಿನ ಪ್ಯಾಕನ್ನು ಜೇಬಿಗೆ ಕೈಹಾಕಿ ಹೊರತೆಗೆದ. ಬೆಂಕಿ ಕಡ್ಡಿಯನ್ನು ಗೀರುವಾಗ ಕಸ್ ಎಂಬ ಶಬ್ದದೊಂದಿಗೆ ಇಂದು ಮೂವತ್ತೊಂದನೆಯ ಜನ್ಮದಿನ ಕಳೆದು ಹೋಯಿತು ಎಂದು ತಟ್ಟನೆ ನೆನಪಾಗುತ್ತದೆ. ಇಂದು ಮಿತ್ರನನ್ನು ಭೋಜನಕ್ಕೆ ಆಹ್ವಾನಿಸಬೇಕಾಗಿತ್ತು. ಸಾಧ್ಯವಾಗಲಿಲ್ಲ ಎಂದು ನೆನೆದು ಶ್ಯಾಮ ಜೋರಾಗಿ ನಗುತ್ತಾನೆ. ಹಾಗೇ ನಡೆಯುತ್ತಾ ಮುಂದೆ ನಡೆಯುತ್ತಾನೆ.

ಓಣಿಯ ನಿರ್ಜನ ರಸ್ತೆಯಲ್ಲಿ, ಹಠಾತ್ ಒಬ್ಬ ತುಂಬಾ ಉದ್ದನೆಯ ವ್ಯಕ್ತಿ ಶ್ಯಾಮನ ಎದುರು ದಿಕ್ಕಿನಿಂದ ನಡೆದು ಬರುತ್ತಿದ್ದ. ಶ್ಯಾಮ ಚಕಿತನಾಗುತ್ತಾನೆ. ಮಿನೂ ಅಲ್ವಾ? ಆದರೆ ಮಿನೂ ಅಲ್ಲ, ಎಷ್ಟೋ ಜನ ಮಿನುವಿನಂತೆ ಕಾಣಿಸುತ್ತಾರೆ.

ಮೊದಲಂತಸ್ತಿನ ಮೆಟ್ಟಲುಗಳ ಮೇಲೆ ಒಂದು ಬಿಳಿ ಬೆಕ್ಕು ಚೆಂಡಿನಂತ ಗುಂಡಾಗಿ ಮಲಗಿಕೊಂಡಿತ್ತು. ಶ್ಯಾಮ ಅನ್ಯಮನಸ್ಕನಾಗಿ ಒಂದು ಕೋಲು ಬೀಸಿದ. ತಟ್ಟನೆ ಬೆಕ್ಕು ಎದ್ದು

ನಿಶ್ಶಬ್ದವಾಗಿ, ಮಿಂಚಿನಂತೆ ಮೆಟ್ಟಲು ಹತ್ತಿ ಓಡಿ ಹೋಯಿತು. ಶ್ಯಾಮ ನಿಂತು ಬೆಕ್ಕಿನ ಕಡೆ ದಿಟ್ಟಿಸಿ ನೋಡುತ್ತಲೇ ಇದ್ದ. ಬೆಕ್ಕಿನ ಕಣ್ಣುಗಳೆರಡೂ ತುಂಬಾ ಸಿಟ್ಟು ಹಾಗೂ ಬೇಜಾರಿನಿಂದ ಉರಿಯುತ್ತಿವೆ ಎಂದು ಶ್ಯಾಮನಿಗನಿಸುತ್ತದೆ. ಹಾಗೇ ಗಾಳಿ ಕೂಡಾ ತುಂಬಾ ದ್ವೇಷದಿಂದ ವಿಯುಕ್ತವಾಗಿದೆ ಎಂದು ಶ್ಯಾಮನಿಗನಿಸುತ್ತದೆ. ಅವನು ಬೇಗ ಬೇಗ ಮೆಟ್ಟಲು ಹಾರಿ ಇಳಿಯಲು ಕಾಲೆತ್ತುತ್ತಾನೆ. ಆದರೆ ಅವನಿಂದ ಬೇಗ ಬೇಗ ಹಾರಲು ಸಾಧ್ಯವಾಗುವುದಿಲ್ಲ. ಬೆಕ್ಕು ಸ್ಥಿರ ಕಣ್ಣುಗಳಿಂದ ಇವನನ್ನೇ ನೋಡುತ್ತಲಿತ್ತು. ತಟ್ಟನೆ ಶ್ಯಾಮನಿಗೆ ಅವನ ಕಾಲಿನ ಹೆಜ್ಜೆಯ ಶಬ್ದ ಕೇಳಿ ಬರುತ್ತೆ. ಅವನು ಮೆಟ್ಟಲು ಹತ್ತುತ್ತಾ ಇದ್ದಾನೆ. ಜೋರಾಗಿ ಆರ್ತನಾದ ಮಾಡಲು ಹೋಗಿ ಶ್ಯಾಮ ಮೆಲ್ಲನೆ ನಗುತ್ತಾನೆ. ಇಲ್ಲಿ ಎಲ್ಲಾ ಸರಿಯಾಗೇ ಇದೆ. ಅವನೇ ಮೆಟ್ಟಲು ಹತ್ತುತ್ತಾ ಇದ್ದಾನೆ. ಕೇವಲ ಒಂದೆರಡು ಕ್ಷಣ ಮಾತ್ರ ಅವನು ತನ್ನ ದೇಹದಿಂದ ವಿಚ್ಛಿನ್ನನಾಗಿದ್ದನು.

ರಾತ್ರಿ ಹೊತ್ತು ಮೀರಿದ್ದರೂ ಶ್ಯಾಮ ತನ್ನ ಕೋಣೆಯ ಕಿಟಕಿಯ ಬಳಿ ನಿಂತುಕೊಂಡೇ ಇದ್ದ. ಹೊರಗೆ ದಟ್ಟ ಮಂಜು ಮರ ಗಿಡಗಳು ಸ್ತಬ್ಧವಾಗಿವೆ. ಒಂದು ಲ್ಯಾಂಪ್ ಪೋಸ್ಟಿನ ತಿಳಿ ಬೆಳಕಿನಲ್ಲಿ ಶೂನ್ಯ ರಸ್ತೆಯಲ್ಲಿ ಒಂದು ಕಜ್ಜಿ ನಾಯಿ ಹೊರಟು ಹೋದದ್ದು ಕಾಣಿಸಿತು. ದೂರದಲ್ಲಿ ಪೋಲೀಸಿನವನ ಬೂಟ್ಸಿನ ಶಬ್ದ ಕೇಳಿ ಬರುತ್ತಿದೆ.

ಶ್ಯಾಮ ತಾನು ಬೆಳಿಗ್ಗೆ ಕೊಂಡುಕೊಂಡ ಸಿಗರೇಟಿನ ಪ್ಯಾಕಿನ ಕೊನೆಯ ಸಿಗರೇಟನ್ನು ತನ್ನ ತುಟಿಯಲ್ಲಿ ಕಚ್ಚಿ ಹಿಡಿದ.

ಬೆಂಕಿ ಕಡ್ಡಿ ಗೀರುವಾಗ ಆಗುವ ಕಸ್ ಎಂಬ ಶಬ್ದ ಕೇಳಿ ಅವನು ಚಕಿತನಾದ. ಅವನ ತಲೆಯೊಳಗೆ ಬಿಸಿ ನೀರು ಬಿದ್ದಂತಾಯಿತು. ಶೂನ್ಯ ಕಣ್ಣುಗಳಿಂದ ಅವನು ಮಂಜಿನ ಕಡೆ ನೋಡಿದ. ಅವನಿಗೆ ತಟ್ಟನೆ ನೆನಪಾಯಿತು.

– ಮೈ – ಗುಡ್ – ನೆಸ್ –ಟುಡೆ – ಐ ಕಿಲ್ಡ್ ಎ ಮ್ಯಾನ್.

## 6

ಆ ವ್ಯಕ್ತಿ ಸತ್ತೇ ಹೋಗಿದ್ದಾನೆ ಎಂಬ ಮಾತನ್ನು ಖಚಿತವಾಗಿ ಹೇಳಲು ಬರುವಂತಿರಲಿಲ್ಲ. ಅನೇಕ ಜನರು ಇದನ್ನು ನೋಡಿದ್ದಾರೆ. ವಠಾರದಲ್ಲಿ ಒಂದಿಷ್ಟು ವಿಚಾರಿಸಿದರೆ ಸುದ್ದಿ ತಿಳಿದುಕೊಳ್ಳಬಹುದು. ಆದರೂ ಶ್ಯಾಮ ಪೇಚಿಗೆ ಸಿಕ್ಕಿಕೊಂಡ. ಯಾಕೋ ಏನೋ ಅವನು ಯಾವ ಕಿಟಕಿಯಲ್ಲಿ ನಿಂತು ಕನ್ನಡಿಯ ಬೆಳಕನ್ನು ಬೀರಿದ್ದನೋ ಅದನ್ನು ಕೂಡಾ ಅನೇಕರು ನೋಡಿರಬಹುದಾದ ಸಂಭವವಿದೆ.

ಅದಕ್ಕೇ ಶ್ಯಾಮ ಬೆಳಿಗ್ಗೆ ಎದ್ದು ಮೊದಲು ವೃತ್ತ ಪತ್ರಿಕೆಯನ್ನು ನೋಡಿದ. ಇಲ್ಲಿ ಅದರಲ್ಲಿ ಯಾವ ಮೋಟರ್ ಸೈಕಲಿಸ್ಟಿನ ಮೃತ್ಯುವಿನ ಸುದ್ದಿಯೂ ಇಲ್ಲ. ಚಿತ್‌ಪುರ್‌ನಲ್ಲಿ, ಒಬ್ಬ ಸೈಕಲಿಸ್ಟ್ ಒಂದು ಟೆಂಪೋ ವ್ಯಾನ್‌ಗೆ ಡಿಕ್ಕಿ ಹೊಡೆದದ್ದು, ಒಂದು ಮಗು ಫ್ರೀ ಸ್ಕೂಲ್ ಸ್ಟ್ರೀಟ್ ರಸ್ತೆಯನ್ನು ದಾಟಲು ಹೋಗಿ, ಲಾರಿಯ ಕೆಳಗೆ ಸಿಕ್ಕಿ ಹಾಕಿಕೊಂಡದ್ದು, ಒಬ್ಬ ಅನಾಮಧೇಯ, 40 ವರ್ಷದ ವ್ಯಕ್ತಿ ಪಾರ್ಕ್ ಸ್ಟ್ರೀಟಿನ ಓಣಿಯಲ್ಲಿ ಬಿದ್ದಿದ್ದಾನೆ. ಇನ್ನೂ ಮತ್ತೊಬ್ಬ... ಇಲ್ಲಿ ಯಾವ ಮೋಟರ್ ಸೈಕಲಿಸ್ಟ್ ಕೂಡಾ ಇಲ್ಲ. ನಿನ್ನೆ ಕಲ್ಕತ್ತೆಯಲ್ಲಿ ಯಾವ ಮೋಟರ್ ಸೈಕಲಿಸ್ಟಿನ ಮೃತ್ಯುವೂ ಆಗಿಲ್ಲ.

ಶ್ಯಾಮ ತುಂಬಾ ಹತಾಶನಾದ, ಈಗ ಇದೇ ವ್ಯಕ್ತಿ, ಇದೇ ಮೋಟರ್ ಸೈಕಲಿಸ್ಟ ಒಂದು ವೇಳೆ ಸತ್ತು ಹೋಗದೇ ಇದ್ದರೆ, ಆಗ ಅವನ ಕೈಕಾಲು ಒಂದು ವೇಳೆ ತುಂಡು ತುಂಡಾಗಿದ್ದರೆ ಅಥವಾ ಒಂದೆರಡು ಮೂಳೆಗೀಳೆ ತುಂಡಾಗಿದ್ದರೆ, ಅವನು ಕ್ಷೇತ್ರೇ ಆಸ್ಪತ್ರೆಯಿಂದ ಹಿಂತಿರುಗಿ ಬಂದ ಮೇಲೆ, ಅನಾಯಾಸವಾಗಿ, ಇವನ ಕಿಟಕಿಯನ್ನು ಹುಡುಕಬಹುದು. ಆಮೇಲೆ ಇವನನ್ನೂ ಕೂಡಾ. ಆಗ ಒಂದಲ್ಲ ಒಂದು ದಿನ ಅಕಾರಣವಾಗಿ ಕನ್ನಡಿಯ ಬೆಳಕನ್ನು ಬೀರಿದುದರ ಸಲುವಾಗಿ ಅವನೊಬ್ಬ ಅಪರಿಚಿತ ವ್ಯಕ್ತಿಗೆದುರು ನಿಂತುಕೊಳ್ಳಬೇಕಾಗುತ್ತದೆ.

ಆ ವ್ಯಕ್ತಿ ಕಾನೂನಿನಿಂದ ಏನನ್ನೂ ಮಾಡಲು ಸಾಧ್ಯವಿಲ್ಲ ಎಂದು ಶ್ಯಾಮನಿಗೆ ಗೊತ್ತು. ಆದರೂ ಆ ವ್ಯಕ್ತಿ ತುಂಬಾ ಉದ್ದ, ಅಗಲ, ಹಾಗೂ ನಿಷ್ಠುರನಾಗಿರಲೂಬಹುದು; ಇಲ್ಲ ಶ್ಯಾಮ ಅವನನ್ನು ಸರಿಯಾಗಿ ನೋಡಿಲ್ಲ. ಕೇವಲ ಕನ್ನಡಿಯ ಬೆಳಕನ್ನು ಅವನ ಮುಖದ ಮೇಲೆ ಬೀರಿ, ತಟ್ಟನೆ ಅವನು ಕಿಟಕಿಯ ಕೆಳಗೆ ಕುಳಿತು ಬಿಟ್ಟಿದ್ದ. ತಾನು ಏಕೆ ಬೆಳಕು ಬೀರಿದ್ದೆ ಎನ್ನುವುದು ಶ್ಯಾಮನಿಗೆ ತಿಳಿದಿಲ್ಲ. ಆದರೂ ಶ್ಯಾಮ ಇಷ್ಟು ಮಾತ್ರ ಹೇಳಬಲ್ಲ. – ಇಲ್ಲ ಸ್ವಾಮಿ, ನಿಮ್ಮ ಮೇಲೆ ನನಗೇನೂ ಸಿಟ್ಟಿರಲಿಲ್ಲ. ನಿಮ್ಮ ಪರಿಚಯ ಕೂಡಾ ನನಗಿಲ್ಲ. ತುಂಬಾ ದಿನಗಳಿಂದ ಕೈಯಲ್ಲಿ ಕೆಲಸವಿಲ್ಲ. ಕೂಡಿಟ್ಟ ಹಣ ಖರ್ಚಾಗುತ್ತ ಬಂದಿದೆ. ಅದೂ ಅಲ್ಲದೆ ನಾನೂ ಕ್ರಮೇಣ ತಣ್ಣಗಾಗಿ, ಸಾಯುತ್ತಾ ಬಂದಿದ್ದೇನೆ. ಶರೀರ ಹಾಗೂ ಮನಸ್ಸನ್ನು ಬಿಸಿಯಾಗಿಟ್ಟುಕೊಳ್ಳಲು, ಕೈಗಳನ್ನು ಮರಗಟ್ಟುವುದರಿಂದ, ನನ್ನನ್ನು ನಾನೇ ರಕ್ಷಿಸಿಕೊಳ್ಳಲು, ಇಡೀ ದಿನ ನನಗೆ ನಾನಾ ವಿಧಧ ಆಟ ತಯಾರಿ ಮಾಡಿಟ್ಟುಕೊಳ್ಳಬೇಕಾಗುತ್ತದೆ. ಇವೆಲ್ಲವೂ ಸ್ವಾಮಿ ಒಂದು ಕಾರ್ಯಾಕಾರಣ ಸೂತ್ರದಲ್ಲಿ ಬಂಧಿಯಾಗಿದೆ. ಒಂದು ವೇಳೆ ಅಮ್ಮ ಅಪ್ಪನ ಬೈಗಳನ್ನು ನನ್ನಿಂದ ಸಹಿಸಲು ಸಾಧ್ಯವಾಗುತ್ತಿದ್ದರೆ ನಾನು ಅದೇ ಶ್ಯಾಮನಾಗಿಯೇ ಉಳಿದಿರುತ್ತಿದ್ದೆ. ಅಂದರೆ ಟೆಲಿಫೋನ್ ಎತ್ತಿ ಹಿಡಿದು ಮಾತನಾಡುವಾಗ, ಮೆಟ್ಟಿಲು ಹತ್ತಿ ಇಳಿಯುವಾಗ ಈ ಎಲ್ಲಾ ಕೆಲಸಗಳನ್ನು ತುಂಬಾ ಸುಂದರವಾಗಿ ಜವಾಬ್ದಾರಿಯಿಂದ ಮಾಡುತ್ತಿದ್ದೆ. ಯಾವನು ಇಡೀ ದಿನ ತನ್ನ ವಿಷಯವನ್ನೇ ಯೋಚಿಸುತ್ತಾನೋ ಅವನು ಇದೇ ಬೆಳಕು ಚೆಲ್ಲುವ ಆಟವನ್ನು ಆಡುತ್ತಿರಲಿಲ್ಲ. ನೀವು ಕೂಡಾ ಅಂತೇ ಹೆದರಿಕೆಯಿಲ್ಲದೆ ಓಣಿಯ ತಿರುವಿನಲ್ಲಿ ತಿರುಗಾಡಬಹುದಾಗಿತ್ತು.

ಶ್ಯಾಮನ ಈ ಯುಕ್ತಿಯನ್ನು, ಶ್ಯಾಮನ ವಿಚಾರ ಧಾರೆಯನ್ನು ಯಾರು ಒಪ್ಪುತ್ತಾರೋ

ಅವರನ್ನು ಬಿಟ್ಟು ಮತ್ತಿನ್ಯಾರಿಂದಲೂ ಅವನನ್ನು ಅರ್ಥಮಾಡಿಕೊಳ್ಳಲಾಗುವುದಿಲ್ಲ. ಆ ವ್ಯಕ್ತಿ ಒಂದೆರಡು ಹೆಜ್ಜೆ ಶ್ಯಾಮನ ಬಳಿ ಸರಿದು ಬರಬಹುದು. ಹಾಗಾದರೆ ಏನು ಮಾಡಿದರೆ ಉಚಿತ ಎಂದು ಶ್ಯಾಮ ಯೋಚನೆ ಮಾಡಿ ನೋಡಿದ. ಆಗ ಕೈಯೊಳಗೆ ಏನಾದರೂ ಅಸ್ತ್ರ ಶಸ್ತ್ರ ಇರುವುದು ಉಚಿತ. ಗೋಡೆಯಲ್ಲಿ ಅಂತೇ ತಪ್ಪಿಸಿಕೊಂಡು ಓಡಿ ಹೋಗಲು ಒಂದು ಗುಪ್ತ ಬಾಗಿಲು ಇರುವುದೂ ಉಚಿತ. ಹಾಗೇ ಕಿಟಕಿಯಿಂದ ಇಳಿದು ಹೋಗುವ ಸಲುವಾಗಿ, ಹುರಿಯ ನಿಚ್ಚಣಿಕೆ ಅಥವಾ ಶ್ಯಾಮ ಇತುವಿನೊಡನೆ ಜೂಜಾಟವಾಡಿದಂತೆ ಅದೇ ಆಟವನ್ನು ಕೂಡ ಆಡಬಹುದು. ಅಥವಾ ಸುಬೋದ್ ಮಿತ್ರನಿಗೆ ಹೋಗಿ ಹೇಳಬಹುದು. ಒಂದೇ ಜಾಗದಲ್ಲಿ ತುಂಬಾ ದಿನ ಇರುವುದು ಚೆನ್ನಾಗಿರೊಲ್ಲ ಸ್ವಾಮಿ, ಬನ್ನಿ ನಾವಿಬ್ಬರೂ ನಮ್ಮ ಮನೆಗಳನ್ನು ಬದಲಿ ಮಾಡಿಕೊಂಡು ಬಿಡೋಣ.

ಶ್ಯಾಮನಿಗೆ ಸ್ವಲ್ಪ ಉತ್ತೇಜನ ಪಡೆದಂತೆ ಅನ್ನಿಸಿತು. ಅವನು ಬೇಗನೆ ತನ್ನ ಕೋಣೆಯ ನಾಲ್ಕೂ ಕಡೆ ಸುತ್ತಾಡಿ ನೋಡಿ ಬಂದ. ಒಂದೇ ಒಂದು ಬಾಗಿಲು, ಆಮೇಲೆ ಚಿಕ್ಕ ಪ್ಯಾಸೇಜು, ಮೆಟ್ಟಲು. ಕಿಟಕಿಯ ಬಳಿ ನಿಂತುಕೊಂಡು ನೋಡುತ್ತಾನೆ. ಪ್ರಾಯಶಃ ಹನ್ನೆರಡು ಹದಿನಾಲ್ಕು ಅಡಿಗಳ ಕೆಳಗೆ ಸಿಮೆಂಟಿನಿಂದ ಕಟ್ಟಿದ ಫುಟ್‌ಪಾತ್. ಪುನಃ ಶ್ಯಾಮ ಹಿಂದೆ ತಿರುಗಿ ಕೋಣೆಯನ್ನು ದಿಟ್ಟಿಸಿ ನೋಡುತ್ತಾನೆ. ಚಿಂತೆಯಿಂದ ಅವನ ಹುಬ್ಬು ಕೊಂಕಾಗುತ್ತದೆ. ಬಲ ದಿಕ್ಕಿನ ಗೋಡೆಯಲ್ಲಿ ಬಾತ್ ರೂಮಿನ ಬಾಗಿಲು. ಶ್ಯಾಮನ ಮನಸ್ಸಿಗೆ ಈಗ ತಾನು ಒಬ್ಬಂಟಿಗ ಎಂದೆನಿಸುವುದಿಲ್ಲ. ಆದರೂ ತಾನು ಸುರಕ್ಷಿತ ಎಂದೇನು ಮನಸ್ಸಿಗೆ ಅನ್ನಿಸುವುದಿಲ್ಲ. ಯಾವುದನ್ನಾದರೂ ಮುಚ್ಚಿಡುವ ಗುಟ್ಟಿನ ಜಾಗ, ಅಥವಾ ಓಡಿ ಹೋಗಲು ಸಹಜವಾದ ರಸ್ತೆ ಯಾವುದೂ ಇಲ್ಲ. ಒಂದು ವೇಳೆ ಆ ವ್ಯಕ್ತಿ ತುಂಬಾ ಬಲಶಾಲಿಯಾಗಿದ್ದರೆ, ಒಂದು ವೇಳೆ ತುಂಬಾ ಉದ್ದ ಹಾಗೂ ಅಗಲವಾಗಿದ್ದರೆ, ಶ್ಯಾಮ ಆತ್ಮ ರಕ್ಷಣೆಗೋಸ್ಕರ ಉದ್ಯುಕ್ತನಾಗಬೇಕು. ಈ ರೀತಿ ಯೋಚಿಸುತ್ತಾ ಯೋಚಿಸುತ್ತಾ ಶ್ಯಾಮ ತನ್ನ ಕೋಣೆಯೊಳಗೆ ಅದೃಶ್ಯ ಹಾಗೂ ಅನುಪಸ್ಥಿತ ಪ್ರತಿ ಪಕ್ಷಿಯನ್ನು ಬೇಗನೆ ಜೋರಾಗಿ ಬೈದು ಆ ಕಡೆ ಈ ಕಡೆ ಓಡಿಸಿ ಬಿಟ್ಟ. ಮಂಚವನ್ನು ಜೋರಾಗಿ ಒದ್ದು, ಛಂದಿಷ್ಟು ಕೋಣೆಯೆಲ್ಲಾ ಸುತ್ತಾಡಿದ. ಗಾಳಿಯನ್ನು ಮುಷ್ಟಿಯಿಂದ ಹೊಡೆಯುತ್ತಾ ಹೊಡೆಯುತ್ತಾ ಮನೆಯೆಲ್ಲಾ ಓಡಾಡಿದ. ಯಾವ ರೀತಿ ಒಂದು ಸಲ ಗುದ್ದಿನ ಹೊಡೆತ ತಿಂದು, ರೂಪಶ್ರೀ, ಫರ್ನಿಚರ್ಸ್ ವಾರ್ಡರೋಬಿನ ಬಾಗಿಲು ಒದೆತ ತಿಂದಿತ್ತೋ ಹಾಗೇ, ಗೋಡೆಯ ಒಂದು ದುರ್ಬಲ ಭಾಗ ಕುಸಿದು ಬಿದ್ದಿತ್ತೋ ಅದೇ ರೀತಿ ಈ ಸಲವೂ ಅವನು ಗುದ್ದಿದ್ದು ಮಾತ್ರ ಗೋಡೆಗೆ.

ಅನಂತರ ಏದುಸಿರು ಬಿಡುತ್ತಾ ಶ್ಯಾಮ ಹೇಳಿದ – ಇಲ್ಲ ಸ್ವಾಮಿ ನಿಮ್ಮ ಮೇಲೆ ನನಗೇನೂ ಸಿಟ್ಟಿಲ್ಲ. ಇರಲೂ ಇಲ್ಲ, ಈ ರೀತಿ ಹೇಳುತ್ತ ಶ್ಯಾಮ ತುಂಬ ವಿನೀತ ಭಾವದಿಂದ ಗಾಳಿಯಲ್ಲಿ ಕೈಚಾಚಿದ. ಅದೃಶ್ಯ ಹಾಗೂ ಅನುಪಸ್ಥಿತ ವ್ಯಕ್ತಿಯ ಕೈಹಿಡಿದು ಕುಲುಕಿ ಚಹ ತೆಗೆದುಕೊಳ್ತೀರಾ? ಎಂದು ಕೇಳಿದ. ಕುಳಿತುಕೊಳ್ಳಿ, ಪರವಾಗಿಲ್ಲ. ಹಾಸಿಗೆಯ ಮೇಲೆ ಕುಳಿತುಕೊಳ್ಳಿ ಅಥವಾ ಎಂದು ಹೇಳುತ್ತಾ ಶ್ಯಾಮ ಕೋಣೆಯ ಏಕ ಮಾತ್ರ ಕುರ್ಚಿಯನ್ನು

ಕಿಟಿಕಿಯ ಬಳಿ ಎಳೆದು ತಂದ – ಅಥವಾ ಇದೇ ಕುರ್ಚಿಯಲ್ಲಿ ಕುಳಿತುಕೊಳ್ಳಿ ಬಿಸಿಲಿಗೆ ಬೆನ್ನು ಮಾಡಿ, ತುಂಬಾ ಆರಾಮವಾಗಿರುತ್ತೆ, ಆನಂತರ ನಿಮಗೆ ನಾನು ಬಿಸಿ ಬಿಸಿ ಚಹ ತಂದು ಕೊಡುತ್ತೇನೆ.

ಹೀಗೆ ಹೇಳುತ್ತ ಶ್ಯಾಮ ಇಡೀ ಮನೆಯನ್ನು ಠಳಾಯಿಸುತ್ತಾನೆ. ನೀವು ತುಂಬಾ ಬಳಲಿದಂತೆ ಕಾಣಿಸುತ್ತೀರ ಅಲ್ಲವಾ ಆದರೂ ನಿಮ್ಮ ಮುಖ ಸ್ವಲ್ಪ ಬಾಡಿದಂತೆ ಕಾಣಿಸುತ್ತದೆ – ಅನೇಕ ಸೋಲ್ಜರುಗಳು ಯುದ್ಧದಿಂದ ಹಿಂತಿರುಗುವಂತೆ, ಏನು ತಾವು ವಿವಾಹಿತರೋ ಅಲ್ವೋ? ಹಾಗಿದ್ದರೆ ತುಂಬಾ ಒಳ್ಳೆಯದು. ಈ ಅವಸ್ಥೆಯಲ್ಲೇ ನೀವು ಹುಡಗಿಯರನ್ನು ಚೆನ್ನಾಗಿ ನೋಡಿ ಬಿಡಿ... ನಮ್ಮ ದೇಶದ ಹುಡುಗಿಯರು ವೀರ ಪುರುಷ ಹಡುಗರನ್ನು ನೋಡುವುದೇ ಇಲ್ಲ. ಅವರೆಲ್ಲ ಯಾವ ಪುರಷರು, ಹುಡುಗರು, ಹುಡುಗಿಯರ ಸ್ಕೂಲು ಕಾಲೇಜುಗಳ ಅಕ್ಕ ಪಕ್ಕ ತಿರುಗಾಡುತ್ತಲೋ, ಹೋಗಿ ಬರುವ ರಸ್ತೆಯಲ್ಲಿ ಅವರು ಸ್ವಲ್ಪ ದೂರ ಹುಡುಗಿಯರನ್ನು ಹಿಂಬಾಲಿಸುತ್ತಾರೋ, ಬೇರೆ ಬೇರೆ ಹೆಸರುಗಳಲ್ಲಿ ಪ್ರೇಮ ಪತ್ರ ಬರೆಯುತ್ತಾರೋ, ಪರಿಚಯವಾದ ಮೇಲೆ ಅವರನ್ನು ಲೇತ್ ಅಥವಾ ಗಾರ್ಡನ್ನಿಗೋ, ವಿಕ್ಟೋರಿಯಾ ಅಥವಾ ಗಾರ್ಡನ್‌ಗೆ ಕರೆದುಕೊಂಡು ಹೋಗುತ್ತಾರೋ – ಆಮೇಲೆ ಅಲ್ಲಿ ಕುಳಿತು... ಇರಲಿ ಬಿಡಿ ನಿಜವಾಗಿ ನೋಡಿದರೆ ಇಂಥವನ್ನೇ ಹುಡುಗ ಹುಡುಗಿಯರು ಇಷ್ಟಪಡುವುದು. ಅದೂ ಬಿಟ್ಟು ನಿಮ್ಮನ್ನು ನೀವು ಸುರಕ್ಷಿತವಾಗಿಟ್ಟುಕೊಂಡಿದ್ದೀರ. ನೀವು ಟೆಂಪೋ ಹಾಗೂ ಕೈಗಾಡಿಯಿಂದ ಡಿಕ್ಕಿ ಹೊಡೆಯಿಸಿಕೊಂಡಿಲ್ಲ. ಯಾವಾಗಲೂ ರಸ್ತೆಯಲ್ಲಿ ನಡೆಯುವ ಗಲಾಟೆಯಲ್ಲಿ ಇಟ್ಟಿಗೆಯ ತುಂಡು ಒಂದು ನಿಮ್ಮ ಮೇಲೆ ಬಿದ್ದಿಲ್ಲ, ನೀವು ಹಳ್ಳ ಗುಂಡಿಯಲ್ಲೂ ಬಿದ್ದಿಲ್ಲ. ನೀವು ಮೋಟಾರ ಸೈಕಲಿನ ದುರ್ಘಟನೆಯಲ್ಲಿ ಗಾಯಗೊಂಡಿದ್ದೀರ. ಈ ಘಟನೆಯಲ್ಲಿ ಸ್ವಲ್ಪ ವೀರತ್ವದ ಗಂಧವಿದೆ ಅಲ್ವಾ? ಎಂದು ಹೇಳುತ್ತಲೇ ಶ್ಯಾಮನ ಕಣ್ಣ ಮುಂದೆ ಚಿತ್ರ ತೇಲಿ ಹೋಗುತ್ತದೆ. ಒಬ್ಬ ಅಹಂಕಾರಿ, ಸಾಹಸಿ ಪುರುಷ ಮೋಟರ ಸೈಕಲಿನ ನಡಗುವ ಹ್ಯಾಂಡಲ್ಲನ್ನು ತನ್ನೆರಡೂ ಕೈಚಾಚಿ ಮುಷ್ಟಿಯಲ್ಲಿ ಬಿಗಿಯಾಗಿ ಹಿಡದುಕೊಂಡಿದ್ದ. ಎದೆ ಸೆಟಸಿ ಕಾಲು ತಿರುಚಿ ಕುಳಿತುಕೊಂಡಿರುವ ಅದೇ ಭಂಗಿ ಗಾಳಿಯಲ್ಲಿ ಕೂದಲು ಹಾರಾಡುತ್ತಿದೆ. ಶರ್ಟಿನ ಕಲಾರ್ ಅಡ್ಡಾದಿಡ್ಡಿಯಾಗಿದೆ. ಹಲ್ಲು ಕಚ್ಚಿ ಒಂದು ತರಹದ ನಗುವಿನ ಮುಖಭಾವ... ಆಶ್ಚರ್ಯವಲ್ಲ ಚಿಕ್ಕ ಹುಡುಗನಾಗಿದ್ದಾಗಿನಿಂದಲೂ ಮೋಟರ ಸೈಕಲಿಸ್ಟರ ಕಣ್ಣುಗಳಲ್ಲಿ ನಾನು ಆ ನಗುವನ್ನು ಕಾಣುತ್ತಾ ಬಂದಿದ್ದೇನೆ. ಏನು ಹೇಳಲಿ ನನ್ನ ಜೀವನದಲ್ಲಿ ಒಂದಾನೊಂದು ಕಾಲದಲ್ಲಿ ಒಬ್ಬ ಮೋಟರ ಸೈಕಲಿಸ್ಟನಾಗುವ ಒಂದೇ ಒಂದು ಆಸೆ ಇತ್ತು. ಮತ್ತೇನಿಲ್ಲ. ವೇಗವಾಗಿ ಬಿಡುವ ಒಂದು ಮೋಟರ್ ಸೈಕಲಿನಲ್ಲಿ ಅದೇ ರೀತಿ ಕುಳಿತುಕೊಳ್ಳುವ ಬಯಕೆ ಅದೇ ಕಾರಣಕ್ಕಾಗಿ ನಾನು ನನ್ನ ಹದಿನಾರು, ಹದಿನೆಂಟನೆಯ ವಯಸ್ಸಿನಲ್ಲಿ ಮೊದಲು ಕಲ್ಕತ್ತೆಗೆ ಬಂದು, ಸಾರ್ಜೆಂಟನನ್ನು ನೋಡಿ ಮುಗ್ಧನಾಗಿದ್ದೆ. ಸೊಂಟದಲ್ಲಿ ಬೂದು ಬಣ್ಣದ ಪಿಸ್ತೋಲು, ತಲೆಯಲ್ಲಿ ಕಪ್ಪು ಟೋಪಿ, ಹಾಗೂ ಅದೇ ಕೆಂಪು ಮೋಟರ್ ಸೈಕಲ್. ಸಾರ್ಜೆಂಟರನ್ನು ನೋಡುವ ಕುತೂಹಲದಲ್ಲಿ ನಾನು ರಸ್ತೆಯ ಇತರ ಹುಡುಗಿಯರನ್ನೂ ಕೂಡಾ ಗಮನಿಸುತ್ತಿರಲಿಲ್ಲ.

ಕುರ್ಚಿಯಲ್ಲಿನ ಅದೃಶ್ಯ ವ್ಯಕ್ತಿ ತಲೆ ಅಲ್ಲಾಡಿಸಿದಂತೆ.

ಶ್ಯಾಮ ತನ್ನೆರಡೂ ಕೈ ಮೇಲೆತ್ತಿ ಹೇಳುತ್ತಾನೆ. ಇಲ್ಲ ಸ್ವಾಮಿ ನಾನು ಆತ್ಮ ರಕ್ಷಣೆಗೋಸ್ಕರ ಏನನ್ನೂ ಹೇಳುವುದಿಲ್ಲ. ನಾನು ಆಟ ಆಡುವುದಕ್ಕೆಂದು ನಿಮ್ಮ ಮೇಲೆ ಕನ್ನಡಿಯ ಬೆಳಕನ್ನು ಬೀರಿದ್ದು – ಈ ಮಾತು ನಿಜ... ಆದರೆ ನನ್ನದು ಏನೂ ಕರಾರಿಲ್ಲ ನನಗೀಗ, ಒಳ್ಳೇ ಕಾಲವಿಲ್ಲ ಸ್ವಾಮಿ. ಬೆಳಗಿನಿಂದಲೇ ದಿನ ಶುದ್ಧವಾಗಿ ಪ್ರಾರಂಭವಾಗುತ್ತದೆ. ಸಾಯಂಕಾಲದಿಂದಲೇ ನನ್ನ ಮನಸ್ಸಿಗೆ ರಾತ್ರಿ ಅಸಂಪೂರ್ಣ ಎಂದೆನಿಸುತ್ತದೆ. ಏನೂ ಘಟಿಸುವುದಿಲ್ಲ. ನಿಜವಾಗಿಯೂ ಏನೂ ಘಟಿಸುವುದಿಲ್ಲ. ದಿನದಲ್ಲಿ ಎರಡು ಸಲ ಟಪಾಲಿನ ಡಬ್ಬಿಯನ್ನು ತೆರೆದು ನೋಡುತ್ತೇನೆ – ಪ್ರತಿ ಸಲ ಹಕ್ಕಿಯ ಗೂಡಿನಂತಿರುವ ಚಿಕ್ಕ ಟಪಾಲಿನ ಡಬ್ಬಿಯನ್ನು ತೆರೆಯಲಿ ಹೋಗಿ ಮನಸ್ಸಿಗೆ ಅನಿಸುತ್ತದೆ. ಬಾಗಿಲು ತೆರೆಯುತ್ತಿದ್ದಂತೆಯೇ ಒಂದು ಮೊಲದ ಮರಿ ಹೊರಗೆ ಹಾರಿ ಬೀಳುತ್ತದೆ ಅಥವಾ ಕೈ ಹಾಕುತ್ತಲೇ ಗುಲಾಬಿ ರಿಂಗನ ಕಾಗದದಲ್ಲಿ ಸುತ್ತಿದ ಯಾವುದಾದರೊಂದು ಉಡುಗೊರೆ. ಅಥವಾ ಪರಿಚಯವಿಲ್ಲದ ಒಬ್ಬ ಹುಡುಗಿಯ ಪ್ರೇಮ ಪತ್ರ ಸಿಗುತ್ತದೆ ... ಏನೂ ಘಟಿಸುವುದಿಲ್ಲ... ಸಹಜವಾಗೆಯೇ ಏನೂ ಘಟಿಸುವುದಿಲ್ಲ. ಬೆಳಗ್ಗೆ ಎದ್ದ ತಕ್ಷಣ ಇಂದು ಯಾರಾದರೂ ಬರಬಹುದು ಎಂದು ಮನಸ್ಸಿಗೆನಿಸುತ್ತದೆ. ಅವರ ಪರಿಚಯವಿದೆ ಎನಿಸಿದರೂ ಅವರನ್ನು ಗುರುತಿಸಲು ಸಾಧ್ಯವಾಗುವುದಿಲ್ಲ. ಅವರು ಹೋಗುವ ಮೊದಲು ಏನಾದರೊಂದು ರಹಸ್ಯ ಬಿಟ್ಟು ಹೋಗುತ್ತಾರೆ. ಮಲಗುವ ಮೊದಲು ಇಂದು ಸ್ವಪ್ನದಲ್ಲಿ ಯಾವುದಾದರೂ ಕ್ಯಾನ್ಸರಿನ ದಿವ್ಯೌಷಧ ಅಥವಾ ಗುಪ್ತಧನ ಬಚ್ಚಿಟ್ಟಿರುವ ಸ್ಥಳ ಯಾವುದಾದರ ಸುಳಿವು ಸಿಗಬಹುದೆಂದೆನಿಸುತ್ತದೆ. ಮಂಜಿನ ರಸ್ತೆಯಲ್ಲಿ ನಡೆಯುತ್ತಿರುವಾಗ ಮಂಜು ಕರಗಿದ ತಕ್ಷಣ ನಾನು ಅಪರಿಚಿತ ವಿದೇಶ ದೇಶಕ್ಕೆ ಬಂದು ತೇಲುತ್ತೇನೆ ಎಂದೆನಿಸುತ್ತದೆ. ತಿನ್ನಲು ಜನ ಇಲ್ಲ ಎಂದು ಹೊಸ ನೀರಿನ ಮೀನುಗಳು ಸಮುದ್ರಕ್ಕೆ ಹೋಗುತ್ತಿವೆ. ಹಸುವಿನ ಕೆಚ್ಚಲಿನಿಂದ ಹಾಲು ನೆಲದ ಮೇಲೆ ಸುರಿದು ಹೋಗುತ್ತಿದೆ. ಜೇನುಗೂಡಿನಿಂದ ಜೇನು ಸೋರಿ ನೆಲವೆಲ್ಲಾ ಒದ್ದೆಯಾಗಿದೆ. ಎಲ್ಲಿ ಸತ್ ವ್ಯಾಪಾರಿಗಳು ತಮ್ಮ ಅಂಗಡಿಯನ್ನು ಚೆನ್ನಾಗಿ ಸಜ್ಜುಗೊಳಿಸಿ ಇಟ್ಟಿದ್ದಾರೋ ಅಲ್ಲಿ ಇಡೀ ದೇಶದಲ್ಲಿ ಒಂದೇ ಬೆಲೆ. ಶಾಂತ ಧಾರ್ಮಿಕ ಮನುಷ್ಯರು ಧೀರ ಹೆಜ್ಜೆಯಲ್ಲಿ ನಡೆಯುತ್ತಾರೋ ಅಲ್ಲಿ ಇಡೀ ವರ್ಷ ಉತ್ಸವಗಳು ನಡೆಯುತ್ತಾ ಇರುತ್ತವೆ.

ಶ್ಯಾಮ ಕುರ್ಚಿಯ ಎದುರು ಬಂದು ನಿಂತುಕೊಂಡು ತಲೆ ಅಲ್ಲಾಡಿಸುತ್ತಾನೆ. ಇಲ್ಲ ಏನೂ ಘಟಿಸುವುದಿಲ್ಲ ನಿಜವಾಗಿಯೂ ಏನೂ ಘಟಿಸುವುದಿಲ್ಲ.

ಅನಂತರ ಶ್ಯಾಮ ವಿನೀತ ಭಾವದಿಂದ ಅದೃಶ್ಯ ಅನುಪಸ್ಥಿತ ವ್ಯಕ್ತಿಯನ್ನು ಬಾಗಿಲವರೆಗೂ ಹೋಗಿ ಬಿಟ್ಕೊಟ್ಟು ಬರುತ್ತಾನೆ. – ಸರಿ ಮತ್ತೊಮ್ಮೆ ಭೇಟಿಯಾಗೋಣ–

ಶ್ಯಾಮ ಕೋಣೆಗೆ ಹಿಂತಿರುಗಿ ವಿವಣ್ಣ ಭಾವದಿಂದ ತುಂಬಾ ಹೊತ್ತಿನವರೆಗು ನಿಂತುಕೊಂಡಿರುತ್ತಾನೆ. ಅನಂತರ ತಟ್ಟನೆ ಯಾಕೆ ಎಂದು ಜೋರಾಗಿ ನಗುತ್ತಾನೆ. ಸಿಗರೇಟನ್ನು ತುಟಿಗಿಟ್ಟು, ಪುನಃ ಕೈಗೆ ವೃತ್ತ ಪತ್ರಿಕೆಯನ್ನು ತೆಗೆದುಕೊಂಡು ಗೊಣಗುತ್ತಾನೆ ..., ಮೈ ...ಗು ....ಡ್ ....ನೆ ......ಸ್ ಐ ಕುಡುಂಟ್ ಕಿಲ್ ದಟ್ ಮ್ಯಾನ್.

ಅನ್ಯಮನಸ್ಕನಾಗಿ ಶ್ಯಾಮ ಕೋಣೆಯ ನಾಲ್ಕೂ ಕಡೆ ದಿಟ್ಟಿಸಿ ನೋಡುತ್ತಾನೆ. ಇಲ್ಲಿ ಬಚ್ಚಿಟ್ಟುಕೊಳ್ಳಲು ಜಾಗ ಇಲ್ಲ ಅಥವಾ ಓಡಿ ಹೋಗಲು ಸಹಜವಾದ ದಾರಿಯಿಲ್ಲ.

ಮಧ್ಯಾಹ್ನ ಹೊರಗೆ ಹೊರಡುವ ಸಮಯಕ್ಕೆ ಶ್ಯಾಮ ಟಪಾಲಿನಲ್ಲಿ ತನ್ನ ಹೆಸರಿಗೆ ಎರಡು ಕಾಗದ ಪಡೆದ.

ಜೀವ ವಿಮೆಯ ಪ್ರಿಮಿಯಮ್ಮಿನ ಕಾಗದದ ಲಕೋಟೆಯ ಮೇಲೆ ಎರಡೂ ಕೈಜೋಡಿಸಿದ ಪ್ರಣತಿಯ ಚಿತ್ರ. ನಿಮ್ಮ ಜೀವನ ಅತಿ ಅಮೂಲ್ಯವಾದದ್ದು. ಇಲೆಕ್ಟ್ರಿಕ್‌ನ ಬಿಲ್ಲು. ಹಾಗೂ ಪಾಕಿಸ್ತಾನದ ಕರಿಯ ಲಕೋಟೆಯಲ್ಲಿ ಅಪ್ಪನ ಕಾಗದ. ಶ್ಯಾಮ ಯಾವುದನ್ನೂ ಒಡೆದು ಸರಿಯಾಗಿ ಓದುವುದಿಲ್ಲ. ಶ್ಯಾಮ ಕೇವಲ ಅಪ್ಪನ ಕಾಗದದ ಕಡೆ ದಿಟ್ಟಿಸಿ ನೋಡುತ್ತಾನೆ – ಯಾವುದನ್ನೂ ಓದುವುದಿಲ್ಲ. ಆದರೂ ತಟ್ಟನೆ ಒಂದೆರಡು ಪಂಕ್ತಿ ಕಣ್ಣಿಗೆ ಬೀಳುತ್ತದೆ. ಇಷ್ಟು ದೂರ ಇದ್ದುಕೊಂಡು ನಾವು ನಿನಗೇನು ಮಾಡಲು ಸಾಧ್ಯ. ದಯಾಲೂ ಠಾಕೂರ್ ಒಬ್ಬನೇ ಭರವಸೆ... ಕೆಲಸದ ವ್ಯವಸ್ಥೆ ಏನಾದರೂ ಆಯಿತೋ ಇಲ್ಲವೋ ತಿಳಿದು ... ಸೋನಾ ಕಕ್ಕ ಹಾಗೂ ರಂಗತ್ತೆಯ ಮನೆಯ ಕಡೆ ಹೋಗಿ ವಿಚಾರಿಸು.. ಅಭವಾ ಕಾಲದಲ್ಲಿ ಆತ್ಮೀಯ ಸಜ್ಜನರು... ಹಾಗೆಯೇ ಆಶೂ ಗಂಗೊಲಿಯನ್ನು ಹೋಗಿ ಕಂಡು ಬಾ. ಅವನು ನನ್ನ ಬಾಲ್ಯ ಸ್ನೇಹಿತ. ಹೌರಾನಲ್ಲಿ ಮೂರು ಉಕ್ಕಿನ ಕಾರ್ಖಾನೆ, ಅಗಸರ ಓಣಿಯಲ್ಲಿ ನಾಲ್ಕಂತಸ್ಥಿನ ಮನೆ, ಗಾಡಿ, ... ಭೂಮಿ ಕಾಣಿ ಎಲ್ಲಾ ಇದೆ. ಕಾಲ ಚೆನ್ನಾಗಿಲ್ಲ. ಕಾಲ ಚೆನ್ನಾಗಿದ್ದಾಗ ಹಿಂದುಸ್ಥಾನಕ್ಕೆ ಹಿಂತಿರುಗದೇ ಇದ್ದುದು ಅವಿವೇಕದ ಕೆಲಸವಾಗಿದೆ... ಇಲ್ಲಿ ಗಂಗೆ ಇಲ್ಲ ಅದೇ ತುಂಬಾ ದುಃಖದ ವಿಷಯ. ಧನಣ್ಣನ ಅಂತ್ಯ ಕರ್ಮ ನಡೆಯಿತು ಹಿಂದುಸ್ಥಾನದಿಂದ ಅವನ ಮಕ್ಕಳು ಬರಲಾಗಲಿಲ್ಲ. ಬಂಧುಗಳೇ ಅಗ್ನಿಸ್ಪರ್ಷ ಮಾಡಿದರು. ಅಂತ್ಯಕರ್ಮ ಆಡಂಬರದಿಂದ ಆಗಲಿಲ್ಲ. ನನಗೆ ತುಂಬಾ ದಿಗಿಲಾಗುತ್ತೆ... ನಿನ್ನ ತಾಯಿಯ ಅವಸ್ಥೆ ಹಿಂದಿನಂತೆ ಶಯ್ಯಾಶಾಯಿ. ಪುಲೀನನ ಹೆಂಡತಿ ಬಂದು ಅಡಿಗೆ, ಮೇಲಿನ ಕೆಲಸ ಮಾಡಿಕೊಟ್ಟು ಹೋಗುತ್ತಾಳೆ... ನಿಮ್ಮನ್ನು ನಿದ್ದೆಯಲ್ಲೂ ನಿನ್ನ ಹೆಸರನ್ನು ಕನವರಿಸುತ್ತಾಳೆ – ಅಲ್ಲಿ ಸಾಮಾನಿನ ಬೆಲೆ ... ಅಕ್ಕಿ ಬೆಲೆ ಕೇಳಿ ತುಂಬಾ ಆಶ್ಚರ್ಯವಾಗುತ್ತದೆ ...ಬಂಗಾಲಿ ಹುಡುಗರು ಎರಡೂ ಹೊತ್ತು ಅನ್ನ ತಿನ್ನದಿದ್ದರೆ ಹೇಗೆ? ಅವರ ಆರೋಗ್ಯ ಹೇಗಿರುತ್ತೆ? ... ನೀನು ಎಚ್ಚರಿಕೆಯಿಂದ ಇರು ... ಎಲ್ಲಾ ದೇವರ ದಯೆ ...ನೀನು ಸಂಸಾರಿಯಾಗಿದ್ದನ್ನು ನೋಡಿ ಕಣ್ಣು ಮುಚ್ಚುತ್ತೇನೆ.

ಹತ್ತು ವರುಷಗಳ ಕೆಳಗೆ ಅಪ್ಪ ಕೊನೆಯ ಸಲ ಕಲ್ಕತ್ತೆಗೆ ಬಂದಿದ್ದರು. ಶ್ಯಾಮ ಅವರನ್ನು ಕರೆದುಕೊಂಡು ಬರಲು ಶಿಯಾಲ್ ದಾರಿಗೆ ಹೋಗಿದ್ದ. ಒಬ್ಬ ಪರಿಚಯವಿಲ್ಲದ ಸ್ವಲ್ಪ ಕುಗ್ಗಿದ ವ್ಯಕ್ತಿ ಕಪ್ಪು ರೋಗಿಷ್ಟ ಮುಖವನ್ನು ನೋಡಿದ್ದ. ನಮಸ್ಕಾರ ಮಾಡುತ್ತಲೇ ಅಪ್ಪ ಬೆನ್ನಿನ ಮೇಲೆ ಕೈಸವರಿದ್ದರು. ಮಾತನಾಡಲು ಹೋಗಿ ಅವರ ಧ್ವನಿ ಕಂಪಿಸಿತ್ತು. –ಮನೂ ಹೇಗಿದ್ದೀಯಾಪ್ಪಾ? ಅಪ್ಪ ಸ್ಥಿರವಾಗಿ ಒಂದೆಡೆ ಎಂದೂ ನಿಲ್ಲುವುದಿಲ್ಲ. ಕಾಂಚಾಡ್ ಪಾಪಾ. ಶಾಲಿ ಶಹರ್, ಬೆಂಚಿ ಗ್ರಾಮ್, ಸೋದ್‌ಪುರ್ ಅಥವಾ ಡಯಮಂಡ್ ಹಾರ್ಬರ್ ಸುತ್ತಾಡಿ ಬಂದಿದ್ದರು. ಆತ್ಮೀಯ ಸ್ವಜನರ ಮನೆಗಳಿಗೆ ಹೋಗಿ ಬಂದಿದ್ದರು. ಅವನನ್ನು ಹತ್ತಿರ ಕರೆದು ಹೇಳುತ್ತಿದ್ದರು

– ಮನು ಚೆನ್ನಾಗಿ ನೆನಪಿಟ್ಟುಕೋ – ಆತ್ಮೀಯ, ಸ್ವಜನ, ಒಂದು ಮಿತ್ರರನ್ನು ಯಾವಾಗಲೂ ಚೆನ್ನಾಗಿ ಇಟ್ಟುಕೊಳ್ಳಬೇಕು. ವಿಪತ್ತು ಆಪತ್ತುಗಳಲ್ಲಿ ನಮಗೆ ರಕ್ತ ಸಂಬಂಧಿಗಳೇ ಬೇಕಾಗೋದು. ಇಲ್ಲಿ ಜಮೀನನ್ನು ವಿಚಾರಿಸಿದೆ. ಸಂಪತ್ತು ವಿನಿಮಯವನ್ನು ವಿಚಾರಿಸಿದೆ. ಸ್ವಲ್ಪ ಹೊತ್ತು ಬಿಟ್ಟುಕೊಂಡು – ಇಲ್ಲಪ್ಪ ಇನ್ನು ಸಹಿಸಲಾಗುವುದಿಲ್ಲ. ಇಲ್ಲ ಕಣಪ್ಪ ನನಗೆ ಇಲ್ಲಿ ಸರಿ ಬೀಳವುದಿಲ್ಲ. ಮನು ಈ ದೇಶ ತುಂಬಾ ಕೆಟ್ಟು ಹೋಗಿದೆ. ಪಾಕಿಸ್ತಾನ ಮೇಲೇರುತ್ತೋ ಇಲ್ಲವೋ ಅಂತ ಹೇಳಲಾಗುವುದಿಲ್ಲ. ಅಮ್ಮ ಅಪ್ಪನ ಕೈಯಲ್ಲಿ ಮಾವಿನಕಾಯಿ ತೊಕ್ಕು ಸಿಹಿ ತಿಂಡಿ ಹಾಗೂ ಹೊಸ ಬಟ್ಟೆ ಕಳಿಸಿಕೊಟ್ಟಿದ್ದಳು. ಕೆಲವು ತಿಂಗಳ ನಂತರ ಶ್ಯಾಮ ಅಪ್ಪನನ್ನು ವನಾಂತದ ಸೀಮೆಯವರೆಗೂ ಹೋಗಿ ಬಿಟ್ಟು ಬಂದಿದ್ದ. ಮಗು ಚೆನ್ನಾಗಿರಲಪ್ಪ ಎಂದು ಹೇಳಿ ಅಪ್ಪ ಈ ದೇಶದ ಸೀಮೆಯನ್ನು ದಾಟಿದ್ದರು.

ಈಗ ಅದೇ ವ್ಯಕ್ತಿ ಶ್ಯಾಮನಿಗೆ ಕಾಗದ ಬರೆಯುತ್ತಾರೆ. ಅವನ ಸೌಖ್ಯ ... ಅಸೌಖ್ಯಗಳ ಬಗ್ಗೆ ವಿಚಾರಿಸುತ್ತಾರೆ. – ಈ ವ್ಯಕ್ತಿ ಯಾರು? ಅಪ್ಪ? ಯಾವ ತರಹದ ಅಪ್ಪ ಅವನ ಮಾತು ಮನಸ್ಸಿಗೆ ಹೊಳೆಯುವುದಿಲ್ಲ. ದೇಶವಿಲ್ಲದ ಒಬ್ಬ ಪರಿಚಯವಿಲ್ಲದ ವ್ಯಕ್ತಿ, ನೆಲೆಸಿದ ನೆಲದ ಮೋಹ ತೊರೆದು ಬರಲು ಸಾಧ್ಯವಿಲ್ಲ – ಈ ವ್ಯಕ್ತಿಯ ಜೊತೆ ಅವನ ಸಂಪರ್ಕವೇನು? ಶ್ಯಾಮನು ಪೆಟ್ಟಿಗೆಯಲ್ಲಿ ಅಮ್ಮ ಅಪ್ಪ ಒಟ್ಟಿಗೆ ತೆಗೆಸಿಕೊಂಡಿರುವ ಫೋಟೋ ಒಂದಿದೆ. ಹಿಂದೆ ಒಂದು ದೊಡ್ಡ ಅರಮನೆಯ ಸೀನು ಹರಡಿದೆ. ಪಕ್ಕದಲ್ಲಿ ಹೂವಿನ ಕುಂಡ, ಮೈಮೇಲೆ ಚೌಕಳಿಯ ಉಣ್ಣೆಯ ಕೋಟು, ಪಂಚೆ, ಗಾಹೂ ಪಂಪ್ ಶೂ ತೊಟ್ಟುಕೊಂಡಿರುವ ಒಬ್ಬ ಗ್ರಾಮ್ಯಾ ವ್ಯಕ್ತಿ ಎದೆ ಸೆಟೆಸಿ ಕುಳಿತುಕೊಂಡಿದ್ದಾನೆ. ಪಕ್ಕದಲ್ಲಿ ಒಗೆದು ಮುದುರಾದ, ದೊಡ್ಡಂಚಿನ ಸೀರೆ ಉಟ್ಟು ಅಮ್ಮ ಸಪ್ಪಗೆ ಕುಳತುಕೊಂಡಿದ್ದಾಳೆ. ಚಿಕ್ಕ ಒಬ್ಬ ಹುಡುಗ, ಕ್ಯಾಮರ ಲೆನ್ಸಿನ ಕಡೆ ಕುತೂಹಲದ ಕಣ್ಣು. ಇವರೇ ಶ್ಯಾಮನ ಜನ್ಮಕ್ಕೆ ಕಾರಣ, ಇವರೇ ಶ್ಯಾಮನ ಅಪ್ಪ ಅಮ್ಮ ಎಂದು ನಂಬಿಕೆಯಾಗುವುದಿಲ್ಲ. ಇವರಿಗೂ ಶ್ಯಾಮ ಎಲ್ಲಿಂದ ಬಂದ ಅಥವಾ ಶ್ಯಾಮ ಯಾರು ಅಂತ ಗೊತ್ತಿಲ್ಲ.

ತುಂಬಾ ದಿನಗಳಿಂದ ಶ್ಯಾಮ ಆ ಫೋಟೋವನ್ನು ಹೊರತೆಗದು ನೋಡಿರಲಿಲ್ಲ. ಮೊದಮೊದಲು ಅವನು ಅಮ್ಮನಿಗೋಸ್ಕರ ಅಳುತ್ತಿದ್ದ. ಪರೀಕ್ಷೆಗೆ ಹೊರಡುವ ಮೊದಲು ಅಥವಾ ಹೊಸ ಕೆಲಸಕ್ಕೆ ಹೊರಡುವಾಗ, ಮೊದಲು ಈ ಫೋಟೋಗೆ ನಮಸ್ಕಾರ ಮಾಡಿ ಹೊರಡುತ್ತಿದ್ದ. ಅನಂತರ ಕ್ರಮೇಣ ಕರ್ಪೂರದ ಗಂಧದ ತರಹ ಈ ಎರಡೂ ಮುಖಗಳು ಅವನ ಮನದಿಂದ ಅಳಸಿ ಹೋಗಿದೆ. ಆ ರೀತಿ ಎಂದೂ ಅವರ ನೆನಪಾಗುವುದಿಲ್ಲ. ಒಮ್ಮೊಮ್ಮೆ ದೇವರನಾಮ ಹಾಡುತ್ತ, ಯಾರಾದರೂ ಹೆಣವನ್ನು ಎತ್ತಿಕೊಂಡು ಹೋದರೆ ಅವನಿಗೆ ತಟ್ಟನೆ ಭಾವಿಯ ಕಟ್ಟೆ ಘಟ್ಟಕ್ಕೆ ಹೋಗುವ ಸಣ್ಣ ರಸ್ತೆ, ಅಲದ ಮರ, ಎಲ್ಲಾ ನೆನಪಾಗುತ್ತದೆ. ಆಗ ಮನಸ್ಸಿಗನಿಸುತ್ತೆ ಗಾಢ ಅಂಧಕಾರದ ನಡುವೆ, ಗೋಡೆಯ ಮೇಲಿಟ್ಟ ಲಾಂದ್ರದ ದೀಪದ ಬೆಳಕಿನಲ್ಲಿ ಅಮ್ಮ ಕುಳಿತುಕೊಂಡಿದ್ದಾಳೆ. ಮುಖದಲ್ಲಿನ ನೆರಿಗೆಗಳು ಸುಕ್ಕುಗಟ್ಟಿವೆ. ಮಾತನಾಡಿದರೆ ತಲೆ ಅದರುತ್ತದೆ. –ಎದುರಿನ ಅಂಧಕಾರ –ಆಕಾಶದಲ್ಲಿ

ಅಸ್ಪಷ್ಟ ನಕ್ಷತ್ರ –ಮನಸ್ಸಿನಲ್ಲಿ ಕಾಣದ ಮೃತ್ಯುವಿನ ಹಿಮದಂತಹ ಅನುಭವ ಪಡೆಯುತ್ತ, ಅಸಹಾಯಕ, ಅಮ್ಮ ಬೀಜಮಂತ್ರ ಮರೆತು ಗೊಣಗುಟ್ಟುತ್ತಿದ್ದಾಳೆ – ಮನು, ಮನು, ಮನುರೇ, ಮನುರೇ...

ಶ್ಯಾಮ ಮನದಲ್ಲೇ ಪ್ರಶ್ನಿಸುತ್ತಾನೆ. ನೀವು ನನಗ್ಯಾರು? ನೀವು ಯಾರ ಕಡೆಯವರು? ಇಲ್ಲ ನನಗೆ ನಿಮ್ಮ ಪರಿಚಯವಿಲ್ಲ. ಅನಂತರ ಚಕಿತನಾಗಿ ಅವನು ಅಸ್ಥಿರವಾಗಿ ಗೊಣಗುಟ್ಟುತ್ತಾನೆ – ನೀವು ಚೆನ್ನಾಗಿರಿ ಚೆನ್ನಾಗಿ ಬದುಕಿ ಬಾಳಿರಿ. ನನಗೋಸ್ಕರ ಯೋಚನೆ ಮಾಡಬೇಡಿ. ನಾನು ಚೆನ್ನಾಗಿದ್ದೇನೆ. ನೋಡುತ್ತಾ ಇರಿ ಒಂದು ದಿನ ಒಳ್ಳೆ ಕಾಲ ಬಂದೇ ಬರುತ್ತೆ, ಒಳ್ಳೇ ಸ್ಥಳದಲ್ಲಿ ನಾವು ಮನೆ ಕಟ್ಟುತ್ತೇವೆ. ಒಳ್ಳೆ ಮನೆ ಸುತ್ತ ಹೂದೋಟ ಮಾಡುತ್ತೇನೆ, ಹೊಂಡದಲ್ಲಿ ಮೀನನ್ನು ಸಾಕುತ್ತೇನೆ. ಮಿಕ್ಕ ಜಾಗದಲ್ಲಿ ಬಳಗದವರಿಗೆ ಮನೆ ಕಟ್ಟಿಕೊಡುತ್ತೇನೆ. ನಾಪಿತ ಅಗಸ ಎಲ್ಲರನ್ನೂ ನೇಮಿಸುತ್ತೇನೆ. ದೂರ ವಿದೇಶದಿಂದ ನಾನು ನಿನ್ನ ಬಳಿ ಮರಳಿ ಬರುತ್ತೇನೆ. ನಾನು ಹಡಗಿನಲ್ಲಿ ಕುಳಿತು ನಿಮ್ಮ ಬಳಿ ಒಳ್ಳೇ ಸುಕಾಲುವನ್ನು ತರುತ್ತೇನೆ...

ಶ್ಯಾಮ ಅದೇ ತನ್ನ ಬಾಲ್ಯಕಾಲದ ಜೋಗುಳವನ್ನು ಗೊಣಗುತ್ತಾನೆ.

ಅಮ್ಮನಿಗೆ ಶಂಖದ ಬಳೆ<br>
ಅಪ್ಪನಿಗೆ ಬಂಗಾರದ ಪಂಚೆ<br>
ಅಣ್ಣನಿಗೆ ಮದುವೆ

# 7

ಸರಿಯಾಗಿ ಮಧ್ಯಾಹ್ನ, ಶ್ಯಾಮ ಅಕಾರಣವಾಗಿ ಗಡಿಯಾಹಾಟಿನ ತಿರುವಿನಿಂದ, ಒಬ್ಬ ವ್ಯಕ್ತಿಯನ್ನು ಹಿಂಬಾಲಿಸಿದ. ಆತನ ಮುಖ ಕಪ್ಪು, ಮೂಳೆ ಕಾಣುವ, ರೋಗಿಷ್ಟ ಶರೀರ; ಆ ಮುಖದಲ್ಲಿ ದೊಡ್ಡ ಮೀಸೆ, ಕಣ್ಣಲ್ಲಿ ತಂಪು ಕನ್ನಡಕ. ಕಡು ನೇರಳೆ ಬಣ್ಣದ ಟೆರಿಕಾಟನ್ ಪ್ಯಾಂಟ್, ಮೈ ಮೇಲೆ ಕ್ರೀಮ ಬಣ್ಣದ ಶರ್ಟ್, ಕೈಯಲ್ಲಿ ಪೋಲೀಯೋ ಬ್ಯಾಗು. ಆ ಪೋಷಾಕಿನ ಒಳಗೆ ಮೂಳೆ ಕಾಣಿಸುವ, ಸಪೂರ ಕಪ್ಪು ವ್ಯಕ್ತಿ. ತುಂಬಾ ನಂಬಲನರ್ಹ ಹಾಗೂ ಕುರೂಪನಾಗಿ ಕಾಣಿಸಿದ. ಯಾರದೋ ಪ್ಯಾಂಟು ಶರ್ಟ್ ಕಳ್ಳತನ ಮಾಡಿ, ಅವನು ಹಾಕಿಕೊಂಡಿರುವಂತೆ ಅನ್ನಿಸಿತು.

ಆ ವ್ಯಕ್ತಿ ಬಾಬಾ ಅಂಗಡಿಯ ಎದುರು ನಿಂತು, ಸ್ವಲ್ಪ ಹೊತ್ತು ಬೂಟ್ಸುಗಳನ್ನು ನೋಡಿದ. ಅನಂತರ ವೇಗವಾಗಿ ಆ ರಸ್ತೆಯ ತಿರುವಿನವರೆಗೂ ನಡೆದು ಹೋದ. ಸಿಗರೇಟಿನ ಅಂಗಡಿಯಿಂದ, ಕಡಿಮೆ ಬೆಲೆಯ ಸಿಗರೇಟನ್ನು ಕೊಂಡುಕೊಂಡ. ಬಟ್ಟೆ ಅಂಗಡಿಯ ಕಡೆ ದಿಟ್ಟಿಸಿ ನೋಡಿದ. ತನ್ನಲ್ಲೇ ತಾನು ನಕ್ಕ. ಒಬ್ಬ ಕುರುಡ ಭಿಕ್ಷುಕನನ್ನು ಗದರಿಸಿದ, ಅಲ್ಲೇ ನಿಂತು ಒಬ್ಬ ಸುಂದರ ಯುವತಿ ಹೋಗುತ್ತಿರುವುದನ್ನು ನೋಡಿದ. ಅನಂತರ ಆ ವ್ಯಕ್ತಿ ಧೀರ ನಡಿಗೆಯಲ್ಲಿ, ರಸ್ತೆದಾಟಿ, ಟ್ರಾಮ್ ಸ್ಟಾಪಿನ ಕಡೆ ಹೊರಟ.

ಶ್ಯಾಮ ಆ ವ್ಯಕ್ತಿಯನ್ನು ಮೇಲಿನಿಂದ ಕೆಳಗಿನವರೆಗೂ ಗಮನಿಸುತ್ತಿದ್ದ. ಆ ವ್ಯಕ್ತಿ ಸರಳ ಹಾಗೂ ಮರ್ಯಾದೆಯ ಜೀವನ ಸಾಗಿಸುತ್ತಿಲ್ಲ ಎಂದು ಶ್ಯಾಮನಿಗೆ ಅನ್ನಿಸುತ್ತದೆ. ಅವನ ಸತರ್ಕ ಕಣ್ಣುಗಳು, ನಾಲ್ಕೂ ಕಡೆ ಹೊರಳುತ್ತಿವೆ. ಗುಂಪಿನ ಮಧ್ಯೆ ಈ ತರಹದ ವ್ಯಕ್ತಿಗಳೇ ಹೆಚ್ಚಾಗಿ ಜನರ ಪರ್ಸುಗಳನ್ನು ಎಗರಿಸುವುದು. ಅಥವಾ ಮೆಲ್ಲನೆ ಯಾರಿಗೂ ತಿಳಿಯದಂತೆ ಹೆಂಗಸರ ಎದೆಗೆ ಕೈ ತಾಗಿಸಿ ಸರಿದು ಹೋಗುತ್ತಾರೆ. ಈ ತರಹದ ಯಾವುದಾದರೂ ಕೆಲಸವನ್ನು ಆ ವ್ಯಕ್ತಿ ಮಾಡೇ ಮಾಡುತ್ತಾನೆ. ಶ್ಯಾಮ ನಿಶ್ಚಿಂತನಾಗಿದ್ದ. ಶ್ಯಾಮನಿಗೆ ಸ್ವಲ್ಪ ಉತ್ತೇಜನ ಬಂದಂತೆ ಎನಿಸಿತು. ಶ್ಯಾಮ ಅ ವ್ಯಕ್ತಿಯನ್ನು ಕಣ್ಣಲ್ಲಿ ಕಣ್ಣಿಟ್ಟು ಗಮನಿಸುತ್ತಾನೆ. ಅವನನ್ನು ಹಿಂಬಾಲಿಸುತ್ತಾ ಟ್ರಾಮ್ ಸ್ಟಾಪಿಗೆ ಬಂದು ನಿಂತುಕೊಳ್ಳುತ್ತಾನೆ. ಆ ವ್ಯಕ್ತಿ ಹಸಿರು ಬಣ್ಣದ ಕರವಸ್ತ್ರವನ್ನು ಹೊರ ತೆಗೆಯುತ್ತಾನೆ. ಆತನ ಕಣ್ಣು, ಮುಖದಲ್ಲಿ ಕಾಮನೆಯ ವಾಸನೆ ಎದ್ದು ಕಂಡುಬರುತ್ತಿದೆ. ಆದರೆ ಆ ವ್ಯಕ್ತಿ ಏನನ್ನೂ ಮಾಡುವುದಿಲ್ಲ.

ಟ್ರಾಮಿನಲ್ಲಿ ಹತ್ತಿ ಕೂಡಾ, ಆ ವ್ಯಕ್ತಿ ತುಂಬಾ ಗಂಭೀರನಾಗಿ ನಿಂತುಕೊಂಡಿರುತ್ತಾನೆ. ಹೆಣ್ಣು ಹುಡುಗಿಯರ ಕಡೆ ನೋಡುವುದಿಲ್ಲ, ಬೇರೆ ಜನರ ಪರ್ಸಿನ ಕಡೆ ಕಣ್ಣು ಹೊರಳಿಸುವುದಿಲ್ಲ.

ರೇಶಿಮೆಯ ಶಾಲಿನ ಒಳಗೆ, ಶ್ಯಾಮನ ಕೈಗಳು ಮುಷ್ಟಿ ಬಿಗಿಯಾಗುತ್ತವೆ. ಅವನು ಮನದಲ್ಲೇ ಹೇಳುತ್ತಾನೆ – ನನ್ಮಗನೇ, ಈ ಸಲ ಏನಾದರೂ ಮಾಡು, ನಾನು ನಿನಗೋಸ್ಕರಾನೇ ಕಾಯುತ್ತಾ ಇದ್ದೆ. ಭಯ ಯಾಕೆ? ಅದೇ ತರಹದ ವ್ಯಕ್ತಿ.... ಪಂಚೆ, ಪಂಜಾಬಿ, ಜುಬ್ಬ ತೊಟ್ಟುಕೊಂಡಿದ್ದಾನೆ, ಕುತ್ತಿಗೆಯ ಹತ್ತಿರದ ಕೂದಲು ಪೋಲೀಸರ ತರಹ ಕತ್ತರಿಸಲ್ಪಟ್ಟಿವೆ. ಗಮನವಿಟ್ಟು ನೋಡು, ಆ ವ್ಯಕ್ತಿ ತೂಕಡಿಸುತ್ತಾ ಇದ್ದಾನೆ. ಅವನ ತೆರೆದ ಎದೆಯ, ಜುಬ್ಬದ ಜೇಬಿನಿಂದ ಒಂದು ಲಕೋಟೆ ಮುಖ ಹೊರ ಹಾಕಿದೆ. ಅದನ್ನು ಎತ್ತಿಕೋ, ಆ ಹುಡುಗಿ ಎದ್ದು ನಿಂತುಕೊಂಡಳಲ್ಲಾ, ತಿಳಿ ಬಣ್ಣ ಸೀರೆ, ತಲೆ ಕೂದಲನ್ನು ಮುಡಿಕಟ್ಟಿಕೊಂಡಿದ್ದಾಳೆ, ಅವಳ ಮುಖ ನೋಡು ಸುಂದರವಾಗಿಲ್ಲ – ಆದರೆ ಹೆಣ್ಣು ಹುಲಿಯಂತೆ ಕಾಮುಕ – ನಾಲಿಗೆ ಹೊರ ತೆಗೆದು, ತುಟಿ ಸವರಿಕೊಳ್ಳುವುದು ಆಕೆಯ ಸ್ವಭಾವ– ಅವಳ ಮೈಮೇಲೆ ನೀನು ನಿಶ್ಚಿಂತನಾಗಿ ಕೈಹಾಕಬಹುದು. ಏನೂ ಆಗುವುದಿಲ್ಲ. ಭಯ ಯಾಕೆ? ಆದರೆ ಆ ವ್ಯಕ್ತಿ, ನಿರ್ಯೋಚನೆಯಿಂದ, ನಿಂತುಕೊಂಡೇ, ಸ್ವಲ್ಪ ಬಗ್ಗಿ, ಕಿಟಕಿಯಿಂದ ಹೊರಗಿನ ರಸ್ತೆಯನ್ನು ನೋಡುವ ಪ್ರಯತ್ನ ಮಾಡುತ್ತಾನೆ. ಶ್ಯಾಮ ಹತಾಶನಾಗುತ್ತಾನೆ. ನಿನ್ನ ಮುಖ ಪಕ್ಕಾ ಕದೀಮನಂತಿದೆ. ಶ್ಯಾಮ ಮನದಲ್ಲಿ

ಮಾತನ್ನಾಡುತ್ತಲೇ ಇದ್ದ. ನೀನು ಬರೀ ನಿನ್ನ ಕಣ್ಣುಗಳಿಂದಲೇ ಹುಡುಗಿಯರನ್ನು ನೋಡಿ, ಅವರನ್ನು ಗರ್ಭಿಣಿಯರನ್ನಾಗಿ ಮಾಡಬಲ್ಲೆ. ಕೇವಲ ಕಣ್ಣ ಸನ್ನೆಯಿಂದಲೇ ಯಾರದ್ದಾದರೂ ಜೇಬಿನ ಹಣವನ್ನು ಎಗರಿಸಬಲ್ಲೆ. ತೋರಿಸು ನೋಡೋಣ ನಿನ್ನ ಅದೇ ಮ್ಯಾಜಿಕನ್ನು. ನಿನಗೆ ಯಾಕೋ ಅಷ್ಟೊಂದು ಭಯ. ಬಕ್ ಅಪ್ ಚಿಯರ್ ಅಪ್.

ಆದರೂ ಆ ವ್ಯಕ್ತಿ ನಿಂತುಕೊಂಡೇ ಇದ್ದಾನೆ. ಅವನ ಅನ್ಯಮನಸ್ಕ ಕಣ್ಣು ಮುಖದಲ್ಲಿ ಮೃದುವಾದ ಒಂದು ರೀತಿಯ ಕವಿತ್ವಭಾವ ಎದ್ದು ಕಾಣುತ್ತದೆ. ಶ್ಯಾಮ ತುಂಬಾ ಅಧೀರನಾಗಿ ಅವನನ್ನು ಗಮನಿಸುತ್ತಾನೆ.

ಆದರೂ ಶ್ಯಾಮ ಆ ವ್ಯಕ್ತಿಯನ್ನು ಹಿಂಬಾಲಿಸುವುದನ್ನು ಬಿಡಲಿಲ್ಲ.

ಆ ವ್ಯಕ್ತಿ ಗ್ರ್ಯಾಂಡ್ ಹೋಟೇಲಿನ ಎದುರು ದಿಕ್ಕಿನಲ್ಲಿ ಇಳಿಯುತ್ತಾನೆ. ಅನಂತರ ರಸ್ತೆ ದಾಟಿ ದೊಡ್ಡ ರಸ್ತೆ ಹಿಡಿದು ಬಹಳ ದೂರ ನಡೆದು ಹೋಗುತ್ತಾನೆ. ಸ್ವಲ್ಪ ದೂರದಿಂದ ಶ್ಯಾಮ ಅವನನ್ನು ಹಿಂಬಾಲಿಸುತ್ತಾನೆ. ಆತ ಸುರೇನ್ ಬ್ಯಾನರ್ಜಿ ರಸ್ತೆಯನ್ನು ಹೊಕ್ಕುತ್ತಾನೆ. ಆ ವ್ಯಕ್ತಿ ಒಮ್ಮೆ ಕುತ್ತಿಗೆ ಹೊರಳಿಸುತ್ತಲೇ, ಅವನ ಕಣ್ಣುಗಳೊಂದಿಗೆ, ಶ್ಯಾಮನ ಕಣ್ಣುಗಳು ಒಂದುಗೂಡುತ್ತವೆ. ತಕ್ಷಣ ಶ್ಯಾಮ ಸ್ವಲ್ಪ ನಗಲು ಪ್ರಯತ್ನಿಸುತ್ತಾನೆ. ನಕ್ಕು ಆ ವ್ಯಕ್ತಿಗೆ ಹೇಳಬಯಸುತ್ತಾನೆ. ಭಯಪಡಬೇಡ, ನೀನು ಏನು ಮಾಡುವಿಯೋ ಎನ್ನುವುದನ್ನು ನಾನು ನೋಡಬಯಸುತ್ತೇನೆ. ನೀನು ಏನಾದರೂ ಮಾಡು, ನೀನು ನಿರತ ಕರ್ಮಿ – ಏನನ್ನಾದರೂ ಮಾಡು, ನನ್ನನ್ನು ನಂಬು, ನಾನು ನಿನ್ನನ್ನು ಹಿಡಿಯುವುದಿಲ್ಲ ಅಥವಾ ಹಿಡಿದು ಕೊಡುವುದಿಲ್ಲ. ನೀನು ನಿಶ್ಚಿಂತನಾಗಿರು.

ಆ ವ್ಯಕ್ತಿ ಸ್ವಲ್ಪ ಹುಬ್ಬು ಕೊಂಕಿಸುತ್ತಾನೆ. ಅನಂತರ ಅವನು ಮುಖ ತಿರುಗಿಸಿ, ಮುಂದೆ ನಡೆಯುತ್ತಾನೆ. ಅಡ್ಡಾದಿಡ್ಡಿ ರಸ್ತೆಗಳನ್ನು ಸುತ್ತುತ್ತಾನೆ. ಹಲವೊಮ್ಮೆ ಕುತ್ತಿಗೆ ತಿರುಗಿಸಿ, ಶ್ಯಾಮನನ್ನು ಗಮನಿಸುತ್ತಾನೆ. ಶ್ಯಾಮನಿಗೆ ತುಂಬಾ ಉತ್ತೇಜನ ಸಿಕ್ಕಂತೆ ಅನಿಸುತ್ತದೆ. ಆ ವ್ಯಕ್ತಿ ಫ್ರೀ ಸ್ಕೂಲ್ ಸ್ಟ್ರೀಟಿನ ಹತ್ತಿರ ಬಂದು, ಒಂದು ದೊಡ್ಡ ಮನೆಯೊಳಗೆ ನೇರವಾಗಿ ಪ್ರವೇಶಿಸಿ, ಮನೆಯ ಒಳಗೆ ಹೊರಟು ಹೋದ. ಶ್ಯಾಮ ಆ ವ್ಯಕ್ತಿ ಹೆದರಿಕೊಂಡಿದ್ದಾನೆ ಎಂದೆಂದುಕೊಂಡ. ಪುನಃ ಶ್ಯಾಮನಿಗೆ ಚಳಿಯಾದಂತೆ ಅನಿಸುತ್ತದೆ, ಶ್ಯಾಮ ಹತಾಶನಾಗುತ್ತಾನೆ.

ಶ್ಯಾಮ ಶೂನ್ಯಮನಸ್ಕನಾಗಿ ಒಂದಿಷ್ಟು ಅಡ್ಡಾಡುತ್ತಾನೆ. ಅನಂತರ ಒಂದು ರೆಸ್ಟೋರೆಂಟನ್ನು ಪ್ರವೇಶಿಸುತ್ತಾನೆ. ಶಾಂತಭಾವದಿಂದ ತುಂಬಾ ಹೊತ್ತು ಕುಳಿತುಕೊಂಡೇ ಇರುತ್ತಾನೆ. ಅವನ ಮುಂದೆ ಒಂದು ಕಪ್ ಚಹ ನೀರಿನೊಂದಿಗೆ ಬೆರೆತು ನೀರಾಗಿ ಹೋಗುತ್ತದೆ.

ಪಕ್ಕದ ಟೇಬಲಿನಿಂದ ಇಬ್ಬರು ಸಿಂಧಿ ವ್ಯಾಪಾರಿಗಳು ಎದ್ದು ಹೋಗುತ್ತಾರೆ. ತುಂಬಿದ ಕೆನ್ನೆಯ ಮೇಲೆ, ದಟ್ಟನೆಯ ಕಂಬಳಿಯಂತೆ ಕೂದಲುಳ್ಳ ಒಬ್ಬ ಪಂಜಾಬಿ, ಬೇರೆ ದಿಕ್ಕಿನಿಂದ ಅಲ್ಲಿಗೆ ಬಂದು ಕುಳಿತುಕೊಳ್ಳುತ್ತಾನೆ. ಅವನು ಶ್ಯಾಮನನ್ನು ಒಮ್ಮೆ ನಿದ್ದೆಗಣ್ಣಿನಿಂದ ದಿಟ್ಟಿಸಿ ನೋಡಿದ. ಹೊರಗೆ ರಸ್ತೆಯಲ್ಲಿ ನೆರಳಿಲ್ಲದ ಬಿಸಿಲು. ಆ ಕಡೆಯ ಮನೆಯ ಸಂದಿಯಿಂದ ಇಬ್ಬರು ಆಂಗ್ಲೋ ಇಂಡಿಯನ್ ಹುಡುಗಿಯರು ನಡೆದು ಹೋದರು.

ಶ್ಯಾಮ ರೆಸ್ಟೋರೆಂಟಿನಿಂದ ಎದ್ದು ಹೊರಡುತ್ತಾನೆ. ಕೌಂಟರಿನಲ್ಲಿ ಹಣ ಕೊಟ್ಟು ಬರುತ್ತಿರುವಾಗ, ಅದೇ ಸಮಯಕ್ಕೆ ಸರಿಯಾಗಿ ಬಾಗಿಲ ಚೌಕಟ್ಟಿನ ಬಳಿ, ಅವನ ಮುಖದ ಮೇಲೆ ನೆರಳು ಬೀಳುತ್ತೆ. ವಿದ್ಯುತ್ ವೇಗದಿಂದ ಶ್ಯಾಮನ ಎದೆ ಹೊಡೆದುಕೊಳ್ಳುತ್ತದೆ. ಅದೇ ವ್ಯಕ್ತಿ. ಹಿಂದೆ ಬಿಸಿಲು ಜಿಕ್ ಜಿಕ್ ಎನ್ನುತ್ತಿದೆ. ಅದಕ್ಕೆ ಮುಖ ಕತ್ತಲಾಗಿ ಕಾಣುತ್ತೆ. ಮುಂಗೈಯಿಂದ ಕಣ್ಣನ್ನು ಮರೆ ಮಾಡಿ ಶ್ಯಾಮ ಒಂದು ಹೆಜ್ಜೆ ಹಿಂದೆ ಸರಿಯುತ್ತಾನೆ – ಆ ವ್ಯಕ್ತಿ ಒಂದು ಹೆಜ್ಜೆ ಮುಂದೆ ಸರಿದು ಬರುತ್ತಾನೆ.

ಇಲ್ಲ, ಆ ವ್ಯಕ್ತಿ ಅಲ್ಲ. ನೇವೀ ಬ್ಲ್ಯೂ ಸೂಟ್, ಕುತ್ತಿಗೆಯಲ್ಲಿ ಬೋ, ಒಳ್ಳೆಯ ಸುಂದರ ಮುಖದ ಬೆಳ್ಳಗಿನ ಒಬ್ಬ ವ್ಯಕ್ತಿ ಶ್ಯಾಮನ ಮುಂದೆ ನಿಂತುಕೊಂಡಿದ್ದಾನೆ.

ಅರುಣ್ ಯಾಕೋ ಶ್ಯಾಮ್ ಮುಳುಗಿ ಹೋಗುತ್ತಿದ್ದ. ತಕ್ಷಣ ಶ್ಯಾಮ ಕೈ ಮುಂದೆ ಮಾಡಿ, ಅರುಣನ ಕೈಯನ್ನು ತಬ್ಬಿ ಹಿಡಿಯುತ್ತಾನೆ – ಹೇ ಅರುಣ್.

– ಅಯ್ಯೋ ನಿನ್ನ ಗುರುತೇ ಹಿಡಿಯೋಕಾಗೋಲ್ಲ.

– ನಾನು, ಶ್ಯಾಮ ಅರುಣನನ್ನು ಚೆನ್ನಾಗಿ ನೋಡುತ್ತಾನೆ.

– ನೀನು ತುಂಬಾ ಚೆನ್ನಾಗಿ ಆಗಿದ್ದಿಯಾ.

–ಹೋಗಪ್ಪಾ. ಅರುಣ ಮೆಲ್ಲನೆ ನಗುತ್ತಾನೆ. ಎಲ್ಲಾ ಆಲ್ಕೋಹಾಲಿಕ್ ಫ್ಯಾಟ್. ನಿನ್ನ ಸಮಾಚಾರ ಏನು?

– ಚೆನ್ನಾಗಿದ್ದೀನಿ. ಶ್ಯಾಮ ತಲೆ ಅಲ್ಲಾಡಿಸುತ್ತಾನೆ. ಆದರೆ ನೀನು ಯಾಕೋ ಸರಿಯಾಗಿಲ್ಲ ಅಂತ ಅನ್ನಿಸುತ್ತೆ. ಈ ಗಡ್ಡ, ಮೀಸೆ ಬಿಟ್ಟು, ಯಾಕೆ ಮುಖವನ್ನು ಹೀಗೆ ಮಾಡಿಕೊಂಡಿದೀಯಾ ಎಂದು ಹೇಳುತ್ತ ಅರುಣ ಶ್ಯಾಮನ ಕೈ ಹಿಡಿದೆಳೆಯುತ್ತಾನೆ. ಇಬ್ಬರೂ ಎದುರು ಬದಿರು ಕುಳಿತುಕೊಳ್ಳುತ್ತಾರೆ. ಕುಳಿತೇ ಅರುಣ ಹೇಳುತ್ತಾನೆ – ಜಗಳ ಮಾಡಿ ಕೆಲಸ ಬಿಟ್ಟಿದ್ದೀಯಾ ಅಂತ ಕೇಳಿದೆ.

ಶ್ಯಾಮ ನಿಶ್ಶಬ್ದವಾಗಿ ತಲೆ ಅಲ್ಲಾಡಿಸುತ್ತಾನೆ – ಹೌದು.

–ಅದೂ ಅಲ್ಲದೆ ನೀನು ಯಾಕೆ ಅಷ್ಟೊಂದು ಡ್ಯಾಸಿಂಗ್, ಮ್ಯಾಸಿಂಗ್ ಆಗಿದ್ದಿ? ನೀನು ಎಷ್ಟೊಂದು ಉನ್ನತಿ ಹೊಂದಬಹುದಾಗಿತ್ತು. ಇದೇನು ನಿನ್ನ ಅವಸ್ಥೆ ಈ ರೀತಿ ಮಾಡಿಕೊಂಡಿದೀಯ.

ಶ್ಯಾಮ ಸುಮ್ಮನೇ ಇರುತ್ತಾನೆ.

–ಸುಮ್ಮನಿರಪ್ಪಾ. ನನಗೂ ಆಸೆ ಇತ್ತು. ಆದರೆ ಬದುಕುವ ಸಲುವಾಗಿ, ಒಂದು ದಿನ ಕಪ್ಪು, ಕುರೂಪ ಹುಡುಗಿಯನ್ನು ಹಿಡಿದುಕೊಂಡೆ. ಆ ವ್ಯಕ್ತಿ ಕಿರುಚಾಡಿದ, ಆದರು ಕೊನೆಗೆ ಅವನನ್ನು ಒಲಿಸಿಕೊಂಡೆ. ಆ ಮೇಲೆ ಮೇಲಿಂದ ಮೇಲೆ ಎರಡು ಲಿಫ್ಟ್ ಸಿಕ್ಕಿತು. ಒಂದು ದುಃಖದ ವಿಚಾರ ಅಂದರೆ ಚಿಕ್ಕಂದಿನಿಂದಲೂ ನನಗೆ ಸ್ವಲ್ಪ ಸುಂದರ ಯುವತಿಯರ ಬಗ್ಗೆ ಆಸಕ್ತಿ ಇತ್ತು. ಆದರೆ ಅದು ನಡೆಯಲಿಲ್ಲ. ಎಂದು ಹೇಳಿ ಅರುಣ ನಗುತ್ತಾನೆ. ಆದರೂ ಪರವಾಗಿಲ್ಲ ಬಿಡು, ನೋಡುತ್ತಾ ಇರು ಫೆಬ್ರುವರಿಯಲ್ಲಿ ಅಮೇರಿಕಾಕ್ಕೆ ಹೋಗುತ್ತೇನೆ. ಹೆಂಡತಿಯನ್ನು ಅವಳ ಅಪ್ಪನ ಮನೆಯಲ್ಲಿ ಬಿಟ್ಟು ಹೋಗುತ್ತೇನೆ ಎಂದೆನ್ನುತ್ತಾನೆ.

ಶ್ಯಾಮ ಅರುಣನನ್ನು ಎವೆಯಿಕ್ಕದೆ ನೋಡುತ್ತಾ ಇರುತ್ತಾನೆ. ಅರುಣ ತುಂಬಾ ಬೆಳ್ಳಗೆ ಕಾಣಿಸುತ್ತಾನೆ. ಶ್ಯಾಮ ಗಮನವಿಟ್ಟು ನೋಡುತ್ತಾನೆ. ಅರುಣನ ಕಣ್ಣು ಮುಖದಲ್ಲಿ ವಿದೇಶೀ ಛಾಯೆ ಮೂಡಿದೆ. ತಟ್ಟನೆ ಅವನೊಬ್ಬ ದೂರ ವಿದೇಶದ, ಒಬ್ಬ ಅಪರಿಚಿತ ವ್ಯಕ್ತಿ ಏನೋ ಎಂದು ಮನಸ್ಸಿಗೆ ಅನ್ನಿಸುತ್ತದೆ. ಇಬ್ಬರೂ ಚಹ ಮುಗಿಸಿ, ಎದ್ದು ಹೊರಡುತ್ತಾರೆ.

ಎಲ್ಲಿಗೆ ಹೋಗ್ತೀಯಾ? ಅರುಣ ರಸ್ತೆಯಲ್ಲಿ ಶ್ಯಾಮನನ್ನು ವಿಚಾರಿಸಿದ.

ಶ್ಯಾಮ ತಲೆ ಅಲ್ಲಾಡಿಸುತ್ತಾನೆ – ಗೊತ್ತಿಲ್ಲ – ಹೋಗೋ ನನ್ಮಗನೇ, ಅರುಣ ನಗುತ್ತಾನೆ. ನೀನು ಎಷ್ಟು ಬಡವಾಗಿ ಬಿಟ್ಟಿದ್ದೀಯಾ. ನನ್ನೊಡನೆ ನಡಿ...

–ಎಲ್ಲಿಗೆ? ತುಂಬಾ ನಿಸ್ತೇಜ ಭಾವದಿಂದ ಶ್ಯಾಮ ಕೇಳುತ್ತಾನೆ.

ಕಣ್ಣು ಕುಣಿಸಿ, ಅರುಣ ನಗುತ್ತಾನೆ. ಒಳ್ಳೇ ಸ್ಥಳಕ್ಕೆ. ಸಾಹೇಬರ, ಆಫೀಸಿನ ಸುಂದರ ರಿಸೆಪ್ಷನಿಸ್ಟನ ಎದುರು ಕುಳಿತುಕೊಳ್ಳುವಿಯಂತೆ. ವೀಸಾ ವಿಚಾರಕ್ಕಾಗಿ ಒಬ್ಬ ಆಂಗ್ಲ ಸಾಹೇಬನನ್ನು ಹಿಡಿಯೋ ಯೋಚನೆ ಇದೆ, ಅರ್ಧ ಗಂಟೆ ಕೆಲಸ ನಡಿ....

ಅರುಣ ರಸ್ತೆಯಲ್ಲಿ, ಒಬ್ಬ ಬೂಟ್ಸ್ ಪಾಲೀಶ್ ಮಾಡುವ ಹುಡುಗನನ್ನು ಕರೆದು, ತನ್ನ ಬೂಟ್ಸನ್ನು ಪಾಲೀಶ್ ಮಾಡಿಸಿಕೊಂಡ. ಬಗ್ಗಿ ಪಾಲೀಶ್ ಮಾಡುವ ಹುಡುಗನಿಗೆ – ನೋಡು ಬೂಟ್ಸಿನಲ್ಲಿ ನಿನ್ನ ಮುಖ ಕಾಣಿಸುತ್ತಾ ಇದೆಯಾ ಎಂದು ಕೇಳಿದ.

ಹುಡುಗ ಬಗ್ಗಿ ಮುಖ ಎತ್ತಿ ಹೇಳಿದ. ಹುಂ ಸಾರ್. ಹಾಗಾದ್ರೆ ಸರಿ ಎಂದು ಅರುಣ ಹುಡುಗನಿಗೆ ಹಣ ಕೊಡುತ್ತಾನೆ. ಅವರು ಮುಂದೆ ನಡೆಯುತ್ತಾರೆ.

ಶ್ಯಾಮ ತನ್ನೊಳಗೆ ಅದ್ಭುತ ಶೀತಲತೆಯನ್ನು ಪಡೆಯುತ್ತಾನೆ. ಏನೋ ಒಂದು ರೀತಿ, ಕೆಲಸ, ಆನಂದ, ಹಾಗೂ ಉತ್ಸಾಹಗಳಿಂದ ಸುಯೋಗ ಒದಗಿದಂತೆ ಅನ್ನಿಸುತ್ತದೆ. ಈಗ ಅವನ ಸುಯೋಗದ, ಧೀರ ಗತಿಯ ಜೀವನ ನಡೆಯುತ್ತಿದೆ. ಶರೀರದಲ್ಲಿ ಏನೋ ಸಂಜೆಯಾದಂತೆ ಎನಿಸುತ್ತದೆ. ಸಂಜೆ, ತನ್ನ ಮುಗಿಯದ ರಜೆಯೊಂದು, ಅವನು ತನ್ನ ಬಾಲ್ಕನಿಯಲ್ಲಿ ಆರಾಮ ಕುರ್ಚಿಯಲ್ಲಿ ಕುಳಿತು ರಸ್ತೆಯಲ್ಲಿ ನಡೆಯುವ ದೃಶ್ಯಗಳನ್ನು ನೋಡುತ್ತಾನೆ. ಯಾವ ದೃಶ್ಯದಲ್ಲಿ ತನ್ನನ್ನು ಅವನು ಕಾಣುವುದಿಲ್ಲ. ಚಟ್‌ಪಟ್ ಎಂದು ನಡೆಯುವ, ಅರುಣನ ನಡಿಗೆಯೊಂದಿಗೆ, ತಾಳವಿಟ್ಟು ನಡೆಯಲು ಶ್ಯಾಮನಿಗೆ ಕಷ್ಟವೆನಿಸುತ್ತಿತ್ತು. ಅವನಿಗೆ ಏದುಸಿರು ಬಂತು – ಏಯ್ ಅರುಣ ಸ್ವಲ್ಪ ಮೆಲ್ಲಗೆ ನಡೆಯೋ ಎಂದ.

ಒಂದೆರಡು ಹೆಜ್ಜೆ ಮುಂದಿದ್ದ, ಅರುಣ ಹಿಂದೆ ತಿರುಗಿ ನೋಡುತ್ತಾನೆ. ಬಡ್ಡಿ ಮಗನೇ, ನೀನೀಗ ತುಂಬಾ ಸೋಮಾರಿಯಾಗಿ ಬಿಟ್ಟಿದೀಯ. ಎಲ್ಲಿ ಆ ಚಟ್‌ಪಟ್ ಲೆಫ್ಟ್ ರೈಟ್? ಎಲ್ಲಿ ನಿನ್ನ ಕ್ವಿಕ್ ರಿಫ್ಲೆಕ್ಸ್? ಅರುಣ ಹಾ ಹಾ ಎಂದು ಬಾಯಿ ತೆರೆದು – ನೀನೇನೂ ಮುದುಕಾನಾ ಎಂದು ಜೋರಾಗಿ ನಗುತ್ತಾನೆ.

–ಇಲ್ಲ, ಶ್ಯಾಮ ತಲೆ ಅಲ್ಲಾಡಿಸುತ್ತಾನೆ. ಇಲ್ಲಿ ನನಗೆ ಎಲ್ಲಿ ಹೋಗಲೂ ಅವಸರವೇನಿಲ್ಲ. ಮನದಲ್ಲೇ ಅವನು ಗೊಣಗುಟ್ಟುತ್ತಾನೆ – ನಿಂತುಕೊಂಡರೆ ನೀನು ಅದೃಷ್ಟಹೀನಳು. ನಿಂತುಕೊಂಡರೆ ನೀನು ಮುದುಕಿ – ನಿಂತುಕೊಂಡರೆ ನೀನು ಮಣ್ಣಿನ ಮುದ್ದೆ... ಯಾರಿಗೆ, ಯಾವಾಗ, ಎಲ್ಲಿ ಶ್ಯಾಮ ಈ ರೀತಿ ಹೇಳಿದ್ದ.

ಚೆನ್ನಾಗಿ ಸಜ್ಜುಗೊಳಿಸಿದ ರಿಸೆಪ್‌ಷನಿಸ್ಟ್ ಕೋಣೆಯಲ್ಲಿ, ಶ್ಯಾಮನನ್ನು ಕೂಡಿಸಿ, ಅರುಣ ಒಳಗೆ ಹೊರಟುಹೋದ. ಶೀತ, ತಾಪನಿಯಂತ್ರಿತ, ಆ ಕೋಣೆಯಲ್ಲಿನ ಸೋಫಾದಲ್ಲಿ ಶ್ಯಾಮ ಕುಳಿತುಕೊಂಡ. ಅವನ ಅಕ್ಕಪಕ್ಕ ಇನ್ನೂ ಕೆಲವರು ಕುಳಿತುಕೊಂಡಿದ್ದರು. ರಿಸೆಪ್‌ಷನ್ ಕೌಂಟರಿನ ಆ ಕಡೆ ಒಬ್ಬ ಹುಡುಗಿ ಟೆಲಿಫೋನ್ ಹಾಗೂ ವಿಜಿಟರ್ಸ್ ಎರಡೂ ಕಡೆ ಗಮನವಿಟ್ಟು ತನ್ನ ಕಾರ್ಯದಲ್ಲಿ ತುಂಬಾ ವ್ಯಸ್ತಳಾಗಿದ್ದಾಳೆ. ಅರುಣ ಸರಿಯಾಗಿಯೇ ಹೇಳಿದ್ದ – ಹುಡುಗಿ ತುಂಬಾ ಸುಂದರಿ. ಹೆಗಲಿನಿಂದ ಇಳಿಬಿದ್ದ ಎರಡು ಬಿಳಿಯ ಕೈಗಳು ಜೇನುತುಪ್ಪ ಬಣ್ಣದ ಮೇಜಿನ ಮೇಲೆ, ಒರಗಿವೆ. ಟೆಲಿಫೋನಿನ ಕೀ ಬೋರ್ಡ್‌ನಿಂದ ಇಳಿ ಬಿದ್ದ ಕಾಗದ ಹಾಗೂ ನೋಟ್‌ಬುಕ್ ಕಡುನೇರಳೆ ಬಣ್ಣದ ಕುಬುಸ, ಅದೇ ಬಣ್ಣದ ಸೀರೆ, ಶಾಂಪೂ ಹಾಕಿ ಎರೆದುಕೊಂಡ ಅವಳ ತಲೆ ಕೂದಲು, ಕುತ್ತಿಗೆಯ ಮೇಲೆ ಇಳಿ ಬಿದ್ದಿದೆ. ಕೂದಲನ್ನು ಒಟ್ಟುಮಾಡಿ ರಿಬ್ಬನ್ನಿನಿಂದ ಗಂಟುಹಾಕಿಕೊಂಡಿದ್ದಾಳೆ. ಅವಳ ಕಣ್ಣು ಹಾಗೂ ಮುಖ ಪಳಪಳ ಹೊಳೆಯುತ್ತಿದೆ. ದುಂಡನೆಯ ಮುಖ, ಹಣೆ ಮೇಲೆ ಕೂದಲು ಹಾರಾಡುತ್ತಿದೆ. ಅದೇ ಕಣ್ಣು ಮುಖ ನಿಶ್ಶಬ್ದವಾಗಿ ಕಥೆ ಹೇಳುತ್ತಿದೆ – ನಾನು ಚೆನ್ನಾಗಿಯೆ ಬದುಕಿದ್ದೇನೆ. ನೋಡು ರಾತ್ರಿ ನಾನು ಚೆನ್ನಾಗಿಯೇ ನಿದ್ದೆ ಮಾಡಿದ್ದೆ. ನಿಮಗೆ ಗೊತ್ತಾ ನನಗಿನ್ನೂ ವಯಸ್ಸಾಗಿಲ್ಲ ನನಗೇನೂ ರೋಗವಿಲ್ಲ. ನಾನು ಬೆಳಗ್ಗೆ ಚೆನ್ನಾಗಿ ಸ್ನಾನ ಮಾಡುತ್ತೇನೆ. ನಾನು ನಿಮಗೆ ಅಪರಿಚಿತಳು.

ಅವಳ ಚಂಚಲವಾದ ಕಣ್ಣುಗಳು, ಹಾಗೂ ಅವಳ ನಗ್ನ ಎರಡು ಕೈ, ಕಾಂತಿಹೀನ ಟೆಲಿಫೋನಿನ ಕೀಯಿಂದ ನೋಟ್‌ಬುಕ್ ತೆರೆದ ಕಾಗದಕ್ಕೆ ಹಾಗೂ ಪುನಃ ಟೆಲಿಫೋನಿನ ಮೇಲೆ ಹರಿದಾಡುತ್ತಿದೆ. ಎರಡೂ ಕಾರ್ಯದಲ್ಲೂ ಅವಳ ಕೈ ನಿರತ ಸ್ವಯಂ ಕ್ರಿಯೆಯಾದರೂ ಶ್ಯಾಮನಿಗೆ ಅವಳು ಪಿಯಾನೋವಿನ ಕೀ ಒತ್ತುತ್ತಿದ್ದಾಳೇನೋ ಎಂದೆನಸುತ್ತಿತ್ತು.

ಶ್ಯಾಮನ ಅಕ್ಕಪಕ್ಕದಲ್ಲಿ ಕುಳಿತ ಪ್ರತಿಯೊಬ್ಬರೂ, ಏನಾದರೊಂದು ಕೆಲಸದ ಮೇರೆಗೇ ಇಲ್ಲಿಗೆ ಬಂದಿದ್ದಾರೆ. ಅದಕ್ಕೇ ಪ್ರತಿಯೊಬ್ಬರಿಗೂ ಸರದಿಯ ಪ್ರಕಾರ ಒಳಗಿನಿಂದ ಕರೆ ಬಂತು. ಹಾಗೇ ಶ್ಯಾಮನ ಅಕ್ಕಪಕ್ಕದಲ್ಲಿ ಮೆಲ್ಲನೆ ಜನ ಕರಗಿದರು. ಸ್ವಲ್ಪ ಹೊತ್ತಿನ ನಂತರ ಶ್ಯಾಮನಿಗೆ ತಾನೊಬ್ಬನೇ ಕುಳಿತುಕೊಂಡಿರುವುದು ತಿಳಿಯಿತು. ಆ ರಿಸೆಪ್‌ಷನಿಸ್ಟ್ ಹುಡುಗಿ, ತನ್ನ ಅಷ್ಟೊಂದು ಕಾರ್ಯಗಳ ನಡುವೆಯೂ ಶ್ಯಾಮನನ್ನು ಗಮನಿಸುತ್ತಿದ್ದಾಳೆ.

ಆಶ್ಚರ್ಯ ಶ್ಯಾಮನಿಗೆ ಅವನ ಎದೆಯಲ್ಲಿ, ಅದೇ ಸ್ಟೇಷನ್ ಬಿಟ್ಟು ಕದಲಿದ ರೈಲುಗಾಡಿಯ ಶಬ್ದ ಕೇಳಿ ಬರುತ್ತೆ, ಮೆಲ್ಲಗೆ, ಕ್ರಮೇಣ ಶಬ್ದ ಜೋರಾಗುತ್ತಾ ಹೋಗುತ್ತಿದೆ. ಅವನಿಗೆ ಸ್ವಲ್ಪ ಬಾಯಾರಿಕೆ ಎಂದೆನಿಸಿತು. ಜೇಬಿಗೆ ಕೈ ಹಾಕಿ ನೋಡಿದ ಸಿಗರೇಟಿಲ್ಲ. ಗಾಜಿನ ಬಾಗಿಲನ್ನು ದೂಡಿಕೊಂಡು, ಇಬ್ಬರು ಆಂಗ್ಲ ಮಹಾಶಯರು, ಕೋಣೆಯೊಳಗೆ ಬಂದು, ಕೌಂಟರಿನ ಎದುರು ನಿಂತುಕೊಂಡು, ಮೆಲು ಧ್ವನಿಯಲ್ಲಿ ಏನೋ ಹಾಸ್ಯ ಮಾಡಿದರು. ಅ ಹುಡುಗಿ ನಕ್ಕು ತನ್ನ ಹೊಳೆಯುವ ಕಣ್ಣು ಮುಖದಿಂದ ಉತ್ತರಿಸುತ್ತಾಳೆ. ಪುನಃ ಅ ಕೋಣೆ ಶೂನ್ಯವಾಗುತ್ತದೆ. ಏನೋ ಬರೆಯಲು ಹೋಗಿ, ಸ್ವಲ್ಪ ತಪ್ಪಾಗಿ ಆ ಹುಡುಗಿ ನಾಲಿಗೆ ಕಚ್ಚಿ, ಸ್ವಚ್ಛ ಬಂಗಾಲಿಯಲ್ಲಿ ಹೇಳುತ್ತಾಳೆ ಆಯ್ಯೋ ಅಮ್ಮಾ! ತಟ್ಟನೆ ಒಂದು ಕ್ಷಣ ಶ್ಯಾಮನನ್ನು ಗಮನಿಸಿಕಣ್ಣು ತಗ್ಗಿಸುತ್ತಾಳೆ.

ಟೆಲಿಫೋನ್ ಸದ್ದು ಮಾಡುತ್ತಲೇ ಟೆಲಿಫೋನ್ ಎತ್ತಿ ನಿರರ್ಗಳ ಇಂಗ್ಲೀಷ್‌ನಲ್ಲಿ ಮಾತನಾಡುತ್ತಾಳೆ ... ಹುಂ ಬೋಸ್ ..ಮಿ. ಬೋಸ್ ಎಸ್ ಮಿ. ಬೋಸ್... ಹಿಯರ್ ಹೀ ಈಸ್...ಥ್ಯಾಂಕ್ಯೂ. ಪುನಃ ಅವರಿಬ್ಬರ ಕಣ್ಣು ಒಂದುಗೂಡುತ್ತೆ.

ಶ್ಯಾಮ ಮೆಲ್ಲಗೆ ಅಸ್ಪಷ್ಟವಾಗಿ ನಗುತ್ತಾನೆ. ಇದೇ ಮೊದಲ ಸಲ, ಅವನಿಗೆ ತಾನು, ತನ್ನನ್ನು ಸರಿಯಾಗಿ ಅಲಂಕರಿಸಿಕೊಂಡಿಲ್ಲ ಎಂದೆನಿಸುತ್ತೆ. ಅವನ ಶರೀರ, ಸರಿಯಾದ ಪೋಷಣೆ ಇಲ್ಲದಿರುವ ಹೂದೋಟದ ತರಹ ಆಗಿಹೋಗಿದೆ. ಹಳೆಯ ಮುದುರಿದ ಕಾಗದದ ತರಹ ಅವನ ಕಣ್ಣಿನ ದೃಷ್ಟಿ ಜರ್ಜರಿತವಾಗಿದೆ. ರೇಶಿಮೆಯ ಶಾಲಿನ ಒಳಗೆ, ತನ್ನ ಜಡ ಕೈಗಳಿಂದ, ಹೊಟ್ಟೆಯಿಂದ ಎದೆಯವರೆಗೂ ಅವನು ತನ್ನನ್ನು ತಾನೇ ಪರೀಕ್ಷೆ ಮಾಡಿ ನೋಡಿಕೊಳ್ಳುತ್ತಾನೆ. ಇಲ್ಲ – ಇಲ್ಲ ಏನೊಂದು ವ್ಯತ್ಯಾಸವಿಲ್ಲ; ಅದೇ ಹಿಂದಿನ ಶ್ಯಾಮನೇ, ನಿಜವಾಗಿ ಅವನ ಮನಸ್ಸಿಗೆ ಅನಿಸುತ್ತದೆ – ಈ ವ್ಯಕ್ತಿಯೇ ತಾನು, ಮೈಮೇಲೆ ರೇಶಿಮೆಯ ಶಾಲು, ಕೆನ್ನೆಯ ಮೇಲೆ ಗಡ್ಡ. ಒಳಗೆ ಅಸ್ಥಿರ ಒಂದು ರೈಲುಗಾಡಿ, ಸೇತುವೆ ದಾಟಿ ಹೋಗುತ್ತಿರುವ ಗಡ ಗಡ ಶಬ್ದ – ಇವನನ್ನು ಶ್ಯಾಮ ಎಂದಿಗೂ, ಯಾವ ಕಾಲಕ್ಕೂ ಗುರುತಿಸುವುದಿಲ್ಲ. ಹುಡುಗಿಯ ಎದಿರು ಸಿಕ್ಕಿ ಬಿದ್ದ ಅಸಹಾಯ ಒಬ್ಬ ಅಪರಿಚಿತ ವ್ಯಕ್ತಿ ಕುಳಿತುಕೊಂಡಿದ್ದಾನೆ.

ಏನು ಯೋಚನೆ ಮಾಡುತ್ತಾ ಇದ್ದಿ? ನಾನು ಹೊರಗಿನ ಬಿಸಿಲಿನಿಂದ ತಪ್ಪಿಸಿಕೊಳ್ಳಲು ತುಂಬಾ ಬುದ್ಧಿವಂತಿಕೆಯಿಂದ ಈ ತಣ್ಣನೆಯ ಕೋಣೆಯನ್ನು ಹೊಕ್ಕು, ಅನ್ಯಾಯವಾಗಿ ಕುಳಿತುಕೊಂಡಿದ್ದೇನೆ. ಅಥವಾ ನಾನು ಕೆಟ್ಟವನು. ನೀನು ತುಂಬಾ ಚೆನ್ನಾಗಿದ್ದಿ, ಎಂದು ನಿನ್ನೆದುರು ಕುಳಿತುಕೊಂಡಿದ್ದೇನೆ... ಸಮಯಾನುಕೂಲವಾಗಿದ್ದರೆ ನಿನ್ನನ್ನು ಹಿಂಬಾಲಿಸುತ್ತಿದ್ದೆ. ಅಥವಾ ನಾನು ಕಳ್ಳಕಾಕರ ತರಹ ಕೆಟ್ಟವನೇನಲ್ಲ. ಅದರ ಬಗ್ಗೆ ನೀನು ನಿಶ್ಚಿಂತಳಾಗಿರಲು ಸಾಧ್ಯವಿಲ್ಲ. ಶ್ಯಾಮ ಮನದಲ್ಲೂ ಆ ಹುಡುಗಿಗೆ ಈ ಮಾತುಗಳನ್ನು ಹೇಳುತ್ತಾನೆ – ಯಾಕೋ ಏನೋ, ಒಬ್ಬನನ್ನು ಈ ಕೋಣೆಯೊಳಗೆ, ಒಬ್ಬ ಸುಂದರ ಯುವತಿಯ ಎದುರು ಕೂಡಿಸಿ, ಒಂದು ತರಹ ಮನಸ್ತಾತ್ವಿಕ ಪರೀಕ್ಷೆ ನಡಿಸುತ್ತಿರುವಂತಿದೆ.

ಶ್ಯಾಮನಿಂದ ಅದನ್ನು ಸಹಿಸಲು ಸಾಧ್ಯವಾಗಲಿಲ್ಲ, ಎದುರು ಮೇಜಿನ ಮೇಲೆ ಸ್ತೂಪದಂತೆ ಪೇರಿಸಿಟ್ಟ ಪತ್ರ ಪತ್ರಿಕೆಗಳಿಂದ, ಒಂದು ಚಿತ್ರದ ಕಾಗದ ಎತ್ತಿ, ಆ ಚಿತ್ರದ ಮೇಲೆ ತನ್ನ ಮುಖವನ್ನು ತಗ್ಗಿಸಿಕೊಳ್ಳುತ್ತಾನೆ. ಸಿಗರೇಟಿಲ್ಲ ಎನ್ನುವುದನ್ನು ಮರೆತು ಜೇಬಿನ ಕಡೆ ಕೈ ಹಾಕುತ್ತಲೇ, ಕೈಯೊಳಗಿನ ಕಾಗದ ದೊಪ್ ಎಂದು ನೆಲದ ಮೇಲೆ ಬೀಳುತ್ತೆ. ಆ ಶಬ್ದ ಸಾಧಾರಣವಾಗಿದ್ದರು ಶ್ಯಾಮನಿಗೆ ಮಾತ್ರ ಭೀಖರ ಎಂದೆನಿಸುತ್ತೆ, ಅವನ ಕೈಕಾಲುಗಳು ಕಂಪಿಸುತ್ತವೆ.

ಇವೆಲ್ಲ ಚಿಕ್ಕಪುಟ್ಟ ಘಟನೆಗಳು. ಆದರೂ ಗುರುತರವಾದ ಘಟನೆ, ಘಟಿಸಲೂಬಹುದು. ಶ್ಯಾಮ ಆ ಹುಡುಗಿಯ ಕಡೆ ಇನ್ನೊಮ್ಮೆ ನೋಡುವ ಪ್ರಯತ್ನ ಮಾಡುತ್ತಾನೆ. ಆದರೆ ಒಂದು ಗಂಟೆಯಾಯ್ತು, ಇನ್ಯಾವ ವಿಸಿಟರ್ ಬರಲಿಲ್ಲ. ಟೆಲಿಫೋನಿನ ಶಬ್ದವೂ ಇಲ್ಲ. ಶೂನ್ಯ ಕೋಣೆಯಲ್ಲಿ, ನೀರವತೆಯ ಮಧ್ಯೆ ಶ್ಯಾಮ ಹಾಗೂ ಆ ಹುಡುಗಿ ಕುಳಿತುಕೊಂಡಿದ್ದರು.

ಅನಂತರ ಟೆಲಿಫೋನಿನ ಕ್ರೆಡಲಿನಿಂದ, ರಿಸೀವರನ್ನು ತೆಗೆದ ಶಬ್ದ. ಬೇಗ ಡಯಲ್ ಮಾಡಿದ ಶಬ್ದ. ಹುಡುಗಿ ತನ್ನ ಕೆಲಸದಲ್ಲಿ ತುಂಬಾ ನಿರತಳಾಗಿರಬೇಕು ಎಂದು ಯೋಚಿಸಿ, ಶ್ಯಾಮ ಮೆಲ್ಲನೆ ಕಣ್ಣೆತ್ತಿ ನೋಡುತ್ತಲೇ ಆಶ್ಚರ್ಯಗೊಂಡ, ಆ ಹುಡುಗಿ ಎಡಗೈಯಲ್ಲಿ ಟೆಲಿಫೋನನ್ನು ಕಿವಿಯ ಬಳಿ ಎತ್ತಿ ಹಿಡಿದುಕೊಂಡಿದ್ದಾಳೆ. ಬಲಗೈಯಲ್ಲಿ ಎದುರಿನ ರಿಸೆಪ್‌ಷನ್ ಕೌಂಟರಿನ, ಒಂದು ಹಳಿದಿ ಪೆನ್ಸಿಲ್ಲನ್ನು ಹಿಡಿದುಕೊಂಡಿದ್ದಾಳೆ. ಆದರೆ ಆಕೆ ಏಕ ದೃಷ್ಟಿಯಿಂದ, ಎವೆಯಿಕ್ಕದೆ ಶ್ಯಾಮನನ್ನೇ ದಿಟ್ಟಿಸಿ ನೋಡುತ್ತಿದ್ದಾಳೆ.

ಕಣ್ಣು ಕಣ್ಣು ಕೂಡಿದಾಕ್ಷಣ ಆಕೆ ತಕ್ಷಣ ಪೆನ್ಸಿಲ್ ಕೆಳಗಿಟ್ಟು, ತನ್ನ ಬಲಗೈ ಎತ್ತಿ ಮೌತ್ ಪೀಸನ್ನು ಒತ್ತಿ ಹಿಡಿದುಕೊಂಡಳು. ನಂತರ ಹಕ್ಕಿಯಿಂಚರದಂತೆ ತುಂಬಾ ಮಧುರ ಧ್ವನಿಯಲ್ಲಿ ಅವನನ್ನು ನೇರವಾಗಿ ಪ್ರಶ್ನಿಸಿದಳು – ಹೂಮ್ ಡು ಯು ವಾಂಟ್ ಪ್ಲೀಸ್?

ಶ್ಯಾಮನ ತಲೆಯೊಳಗೆ, ತಕ್ಷಣ ಬಿಸಿನೀರು ನುಗ್ಗಿದಂತಾಯಿತು. ಯಾರು ಬೇಕು? ನನಗೆ ಯಾರು ಬೇಕು ತೀವ್ರ ಆವೇಶದಿಂದ ಶ್ಯಾಮನ ಕೈಕಾಲು ಥರ ಥರ ಕಂಪಿಸಿದವು. ಎಲ್ಲವೂ ಮರೆತು ಹೋದಂತೆ ಕುಳಿತುಕೊಂಡಿದ್ದ. ಅವನಿಗೆ ತನಗೆ ಯಾರು ಬೇಕು ಎನ್ನುವುದು ಗೊತ್ತಾಗಲಿಲ್ಲ. ಕೇವಲ ಅವನ ಮನಸ್ಸಿಗೆ ಇಷ್ಟು ಹೊತ್ತು ಈ ಸುಂದರವಾಗಿ ಸಜ್ಜುಗೊಳಿಸಿದ, ಕೋಣೆಯೊಳಗೆ ಸುಂದರ ಯುವತಿಯ ಎದುರು ಕುಳಿತು ಇವರ ಆಡಂಬರದ ಯಾವುದೋ ಸುಂದರ ಪದ್ಧತಿಗೆ ವಿರುದ್ಧವಾಗಿ ತಾನು ನಡೆದುಕೊಂಡಿದ್ದೇನೆ, ಎಂದೆನಿಸಿತು. ನಿಜವಾಗಿ ಅವನು ಇಲ್ಲಿ ಯಾಕೆ ಕುಳಿತು ಕೊಂಡಿದ್ದಾನೆ? ಯಾಕೆ ಕುಳಿತುಕೊಂಡಿದ್ದಾನೆ?

ಶ್ಯಾಮ ತಕ್ಷಣ ಎದ್ದುನಿಂತುಕೊಂಡ. ಅವನ ಕೊರಳು ಉಬ್ಬಿತ್ತು. ಸುಮ್ಮನೆ ತಲೆ ಅಲ್ಲಾಡಿಸಿ ಅವನು ಹೇಳಿದ. ಇಲ್ಲಿ ಅವನಿಗ್ಯಾರೂ ಬೇಕಿಲ್ಲ. ಅವನು ಯಾರಿಗೋಸ್ಕರವಾಗಿಯೂ ಇಲ್ಲಿ ಕುಳಿತುಕೊಂಡಿಲ್ಲ. ಇಲ್ಲಿ ಅವನಿಗೆ ಯಾವ ಕೆಲಸವೂ ಇಲ್ಲ.

ಶ್ಯಾಮ ಬಾಗಿಲ ಕಡೆ ಒಂದೆರಡು ಹೆಜ್ಜೆ ನಡೆದುಹೋಗುತ್ತಾನೆ. ನಿಂತುಕೊಂಡಾಗಲೂ ಅವನ ಮೈ ಕಂಪಿಸುತ್ತದೆ. ಬಾಗಿಲ ಬಳಿ ಹೋಗುತ್ತಿರುವಂತೇ, ಬಾಗಿಲು ಅವನಿಂದ ಸರಿದು ಹೋಗುತ್ತಿರುವಂತೆ ಅವನಿಗನ್ನಿಸುತ್ತದೆ. ಬಲದಿಂದ ಎಡಕ್ಕೆ ಪುನಃ ಬಲಕ್ಕೆ ತುಂಬಾ ಆಶ್ಚರ್ಯವಾಗುತ್ತೆ, ಶ್ಯಾಮ ತಕ್ಷಣ ತನ್ನ ಕಣ್ಣುಮುಚ್ಚಿಕೊಳ್ಳುತ್ತಾನೆ. ಪುನಃ ಒಂದೆರಡು ಹೆಜ್ಜೆ ಮುಂದೆ ನಡೆಯುತ್ತಾನೆ. ಕಣ್ಣು ತೆರೆದು ನೋಡುತ್ತಾನೆ. ಅವನು ಕೌಂಟರಿನೆದುರು ಬಂದು ನಿಂತುಕೊಂಡಿದ್ದಾನೆ. ಆ ಹುಡುಗಿ ಸ್ವಲ್ಪ ಹುಬ್ಬು ಏರಿಸಿ, ಅವನನ್ನೇ ದಿಟ್ಟಿಸಿ ಅವನನ್ನು ಏನೋ ಪ್ರಶ್ನಿಸುವಂತೆ ನೀನು ಯಾರು ಎನ್ನುವಂತೆ ನೋಡುತ್ತಿದ್ದಾಳೆ.

ನಾನು ಯಾರು? ಸ್ಮೃತಿ ಹೀನ, ನಿರ್ಬೋದ ಶಿಶುವಿನ ತರಹ ಶ್ಯಾಮ ಆಶ್ಚರ್ಯ ಕಣ್ಣುಗಳಿಂದ, ಅಪರಿಚಿತ ಸ್ಥಳವನ್ನು ನೋಡುತ್ತಾನೆ. ತುಂಬಾ ಅಸಹಾಯಕನಂತೆ ಕೈ ಚಾಚಿ, ಒಂದು ಕುರ್ಚಿಯ ಕೈಹಿಡಿಯನ್ನೋ ಅಥವಾ ಮೇಜಿನ ಕೊನೆಯನ್ನೋ ಹಿಡಿದುಕೊಳ್ಳುವುದಕ್ಕೋಸ್ಕರ ತಡಕಾಡುತ್ತಾನೆ ಅವನ ತುಟಿ ಚಲಿಸುತ್ತವೆ. ಅವನು ಗೊಣಗುತ್ತಾನೆ – ನನ್ನನ್ನು ನಾನು ಯಾರು ಅಂತ ಪ್ರಶ್ನಿಸಬೇಡಿ ನನಗೆ ಗೊತ್ತಿಲ್ಲ ಮಳೆಯ ನೀರಿನಂತೆ ಅವನೆದೆ ದುಃಖದಿಂದ ತುಂಬಿ

ಬರುತ್ತದೆ. ನಿನಗೆ ಗೊತ್ತಿಲ್ಲ, ನಾನು ಮರವಾಗಿ ಯಾಕೆ ಹುಟ್ಟಲಿಲ್ಲ? ನಾನು ಮೀನಾಗಿ ಹುಟ್ಟುತ್ತಿದ್ದಿದ್ದರೆ ಏನು ಕೆಡಕಾಗುತ್ತಿತ್ತು?

ತನ್ನ ಕುರ್ಚಿಯಿಂದ, ಆ ಹುಡುಗಿ ಮೆಲ್ಲನೆ ಏಳುತ್ತಾಳೆ. ಲೆಟ್ ಮಿ ಹೆಲ್ಪ್ ಯು.

ಎದೆಯ ಒಳಗೆ ಶ್ಯಾಮ ಆರ್ತ ಸ್ವರದಲ್ಲಿ ಹೇಳುತ್ತಾನೆ. ಇಲ್ಲಿ ನನ್ನನ್ನು ಮುಟ್ಟಬೇಡ. ಅವನ ಬಾಯಿಂದ ಮಾತು ಹೊರಡುವುದಿಲ್ಲ. ಅದಕ್ಕೇ ಅವನು ಬರೀ ತನ್ನ ತಲೆ ಅಲ್ಲಾಡಿಸುತ್ತಾನೆ. ಅನಂತರ ಅವನು ಒಂದೊಂದೇ ಹೆಜ್ಜೆ ಹಿಂದೆ ಸರಿದು ಗಾಜಿನ ಬಾಗಿಲನ್ನು ಹಿಡಿದುಕೊಳ್ಳುತ್ತಾನೆ. ಆ ಹುಡುಗಿಯ ಮುಖ ಬಿಳುಚಿಕೊಂಡು ಹೆದರಿಕೊಂಡು ಅವಳು ಇವನನ್ನೇ ದಿಟ್ಟಿಸಿ ನೋಡುತ್ತಿದ್ದಾಳೆ.

ಶ್ಯಾಮ ಬಾಗಿಲು ಸರಿಸಿ ಬಿಸಿಲು ಹಾಗೂ ಹೊರಗಿನ ಜನರಿದ್ದ ಕಡೆ ಬರುತ್ತಾನೆ. ಫುಟ್‌ಪಾತಿನಲ್ಲಿ ಅವನು ನಿಂತುಕೊಂಡು, ಮನದಲ್ಲೇ ಗೊಣಗುತ್ತಾನೆ – ನಾನು ಯಾರು ಎನ್ನುವುದನ್ನು ಪ್ರಶ್ನಿಸಬೇಡ ನನಗೆ ಗೊತ್ತಿಲ್ಲ.

ಅನಂತರ ಶ್ಯಾಮ ತಟ್ಟನೆ 'ಯೂ' ಎಂದು ಜೋರಾಗಿ ನಗುತ್ತಾನೆ. ತಲೆ ಅಲ್ಲಾಡಿಸಿ ಮನದಲ್ಲೇ ಹೇಳಿಕೊಳ್ಳುತ್ತಾನೆ ಇಲ್ಲ, ಬಚ್ಚಿಟ್ಟುಕೊಳ್ಳುವುದಕ್ಕೆ ಯಾವ ಜಾಗವೂ ಇಲ್ಲ. ಅಥವಾ ತಪ್ಪಿಸಿಕೊಂಡು ಓಡಿ ಹೋಗಲು ಸಹಜವಾದ ದಾರಿಯೂ ಕಂಡು ಬರುತ್ತಿಲ್ಲ. ಎಲ್ಲಾ ಕಡೆಗಳಿಂದಲೂ ನೀನು ಯಾರು? ಎಂಬ ಪ್ರಶ್ನೆ ಅವನಿಗಾಗಿ ಕಾದು ಕುಳಿತಿದೆ.

ಇಲ್ಲಿ ಶ್ಯಾಮನಿಗೆ ತಾನು ಯಾರು ಎಂದು ಗೊತ್ತಿಲ್ಲ. ನಿಜವಾಗಿಯೂ ಶ್ಯಾಮನಿಗೆ ಗೊತ್ತಿಲ್ಲ.

ತುಂಬಾ ಹೊತ್ತಿನ ನಂತರ, ಹಿಂದೆ ತಿರುಗಿ ನಿಂತಿದ್ದ, ಅವನ ಬೆನ್ನಿನ ಮೇಲೆ ಅರುಣ ಕೈಯಿಟ್ಟು ಏನು ಸಮಾಚಾರ ಹೊರಗಡೆ ಯಾಕೆ? ಎಂದು ಕೇಳಿದ.

ಹೀಗೆ, ಶ್ಯಾಮ ಮ್ಲಾನ ನಗೆ ನಗುತ್ತಾನೆ.

– ಒಳಗಡೆ ನಿನ್ನನ್ನು ಹುಡುಕಿ, ನೀನು ಸಿಗದಾಗ ಆಶ್ಚರ್ಯವಾಯಿತು. ಕೊನೆಗೆ ರಿಸೆಪ್ಷನ್ ಹುಡುಗಿ ನೀನು ಇಲ್ಲಿ ಹೊರಗೆ ನಿಂತುಕೊಂಡಿದೀಯಾ ಅಂತ ತೋರಿಸಿದಳು. ತುಟಿಯ ಕೊನೆಯಲ್ಲೇ, ಸ್ವಲ್ಪ ಹಲ್ಲು ಕಚ್ಚಿ ಅರುಣ ನಕ್ಕು ಹೇಳಿದ – ನೋಡಿದೆಯಾ?

ಏನು?

ಅರುಣ ಅರಳುಗಣ್ಣು ಮಾಡಿ ಹೇಳಿದ – ನಾನು ನಿನ್ನನ್ನು ಗುರುತಿಸಿರಲಿಲ್ಲ ಕಣೋ. ನಾನು ಬೇಕೆಂತಲೇ ನಿಧಾನಿಸಿದೆ ನನಗೆ ನಿನ್ನ ಎಕ್ಸರೇ ಅಯ್ಸ್ ಗೊತ್ತು ಕಣೋ, ಆ ಕಡೆ, ಈ ಕಡೆ ಅಂತ ನೋಡಿಕೊಂಡಿರುತ್ತೀಯಾ. ಆದರೂ ಅದು ಈ ರೀತಿ ಅಲ್ಲಾ ಕಣೋ ತಿಳೀತಾ, ಮಿಸ್ ದತ್‌ಗೆ ಇದು ಹೊಸದು ಎಂದು ಹೇಳುತ್ತ ಅರುಣ ಕಿಸಿಯುತ್ತಾನೆ – ಮಾತಾಡುತ್ತೀಯಾ? ನನ್ನ ಜೊತೆ ಅನೇಕ ಸಲ ಬಂದು ಹೋಗಿ ಮಾಡು. ಹಾಗೆ ಮಾಡಿದರೆ ಮಾತನಾಡಲು ಸಾಧ್ಯವಾಗುತ್ತೆ – ಹೆಸರು ಲೀಲಾ ಭಟ್ಟಾಚಾರ್ಯ. ಮಾತನಾಡುತ್ತೀಯಾ?

ಇಲ್ಲ ಎಂದು ಶ್ಯಾಮ ಮೃದುನಗೆ ನಕ್ಕು ತಲೆ ಅಲ್ಲಾಡಿಸುತ್ತಾನೆ.

ಶ್ಯಾಮ ಕುತ್ತಿಗೆ ತಿರುಗಿಸಿ ನೋಡಿದ. ರಸ್ತೆಯಿಂದಲೂ ಆ ಗಾಜಿನ ಬಾಗಿಲಿನಿಂದ ಆ

ಹುಡುಗಿ ಕಾಣಿಸುತ್ತಿದ್ದಳು. ಆ ಹುಡುಗಿಯ ಕುತೂಹಲದ ಕಣ್ಣು ಪುನಃ ಅವನ ಕಣ್ಣಿನೊಂದಿಗೆ ಒಂದುಗೂಡಿದವು. ಶ್ಯಾಮ ತಟ್ಟನೆ ಕುತ್ತಿಗೆ ಪುನಃ ತಿರುಗಿಸಿಕೊಳ್ಳುತ್ತಾನೆ.

ಶ್ಯಾಮ ನಿನಗೇನಾಯಿತು? ಅರುಣ ನಗುತ್ತ ಲೊಚಗುಟ್ಟಿದ.

ಯಾರಿಗೆ ಗೊತ್ತು ನಡೆಯುತ್ತಲೇ ಶ್ಯಾಮ ಹೇಳುತ್ತಾನೆ. ನನ್ನಲ್ಲಿ ಎಲ್ಲೋ ಏರುಪೇರಾಗಿದೆ.

ಹುಬ್ಬು ಕೊಂಕಿಸಿ ಅರುಣ ಕೇಳುತ್ತಾನೆ. – ಯಾವ ತರಹದ್ದು

–ಸ್ಕೂಲಿನಲ್ಲಿ ಓದುತ್ತಿರುವಾಗ, ಹುಡುಗಿಯರು ನನ್ನ ನೋಡಿದರೆ ತುಂಬಾ ನರ್ವಸ್ ಆಗಿ ಬಿಡುತ್ತಿದ್ದೆ. ಅ ಹಡುಗಿ ನನ್ನನ್ನು – ಯಾರು ಬೇಕು ಅಂತ ಕೇಳಿದಳು. ನನಗನ್ನಿಸಿತು ಅಲ್ಲಿ ಕುಳಿತು ತಪ್ಪು ಮಾಡಿದೆ ಅಂತ. ಕಳ್ಳನಂತೆ ಅದಕ್ಕೇ ಎದ್ದು ಬಂದೆ. ನಾನು ಬಹಳಷ್ಟು ಕಡೆ ಅನಾಯಾಸವಾಗಿ ಹೋಗಿ ಬಂದಿದ್ದೇನೆ. ಆ ದಿನ ಕೂಡಾ ಕೌಂಟರಿನ ಮೇಲೆ ಬಗ್ಗಿ, ಈ ತರಹದ ಹುಡುಗಿಗೆ ಹಲ್ಲೋ ಎಂದಿದ್ದೇನೆ...

ಅರುಣ ಪ್ರಶ್ನಿಸುವ ಕಣ್ಣುಗಳಿಂದ ಶ್ಯಾಮನ ಕಡೆ ನೋಡುತ್ತಾನೆ.

–ಏನೋ ಏರುಪೇರಾಗಿದೆ. ಶ್ಯಾಮ ತಲೆ ಅಲ್ಲಾಡಿಸುತ್ತಾನೆ. ತುಂಬಾ ದಿನಗಳ ನಂತರ ನನಗೆ ನಾನು ಪ್ರೇಮಪಾಶದಲ್ಲಿ ಬಂಧಿಯಾಗಬಹುದು ಎಂದು ತಿಳಿಯಿತು.

ಲೀಲಾಳ ಪ್ರೇಮಪಾಶದಲ್ಲಾ?

–ಇಲ್ಲ ಲೀಲಾ ಅಂತ ಅಲ್ಲ. ಬೇರೆ ಇನ್ಯಾವ ಹುಡುಗಿಯೇ ಆಗಲಿ. ಆಶ್ಚರ್ಯ ಇಷ್ಟರ ತನಕ ವೃಂದ, ಮಾಧವಿ, ಅಥವಾ ಇತುವಿನ ಜೊತೆ ಸುತ್ತುತ್ತಿದ್ದೆ. ಒಂದೇ ಹಾಸಿಗೆಯ ಮೇಲೆ ಮಲಗಿದ್ದೇನೆ. ಮೊದಲಿನಿಂದ ಕೊನೆಯವರೆಗೂ ಚೆನ್ನ ಎನ್ನುವುದೇನಾದರೂ ಸಿಗುತ್ತದೆಯೇ ಎಂದು ಹುಡುಕಾಡಿದ್ದೇನೆ. ಆಗಲೂ ನನ್ನ ಎದೆಯೊಳಗೆ ರೈಲುಗಾಡಿಯ ಶಬ್ದ ಆಗಿರಲಿಲ್ಲ. ಇವರಲ್ಲಿ ಏನಾದರೂ ರಹಸ್ಯ ಇರಬಹುದೇನೋ ಎಂದು ಕೂಡಾ ಮನಸ್ಸಿಗೆ ಅನ್ನಿಸಿರಲಿಲ್ಲ. ನನಗನಿಸುತ್ತೆ ಇನ್ನೇನು ಬಾಕಿ ಇಲ್ಲ, ಎಲ್ಲಾ ಸಿಕ್ಕಿದೆ ಎಂಬ ತೃಪ್ತಿ ಎಂದೂ ಆಗಿರಲಿಲ್ಲ. ಎದೆಯ ಬಳಿ ಎಲ್ಲೋ ದುಃಖ ಹೆಪ್ಪುಗಟ್ಟಿನಿಂತಿದೆ.

–ಇದನ್ನೆಲ್ಲಾ ಏನು ಹೇಳುತ್ತಾ ಇದೀಯಾ?

–ಸರಿಯಾಗಿಯೇ ಹೇಳುತ್ತಾ ಇದ್ದೇನೆ.

ಶ್ಯಾಮ ತಲೆ ತಗ್ಗಿಸಿ ಹೇಳುತ್ತಾನೆ – ಯಾರೋ ಹೇಳುತ್ತಿದ್ದರು ಈಶ್ವರ ಜ್ಞಾನವಾಗದ ತನಕ ಹುಡುಗಿಯರನ್ನು ಸರಿಯಾಗಿ ಗುರುತಿಸಲು ಸಾಧ್ಯವಾಗುವುದಿಲ್ಲ ಅಂತ. ಯಾರು ಆ ರೀತಿ ಹೇಳಿದ್ದರು ಹೇಳು ನೋಡೋಣ?

–ಯಾರಿಗೆ ಗೊತ್ತು ತುಟಿ ತಿರುಗಿಸಿ ಅರುಣ ಹೇಳುತ್ತಾನೆ ರಾಮಕೃಷ್ಣ ಪರಮಹಂಸನಂತವರ್‍ಯಾರಾದರೂ ಇರಬೇಕು.

–ಇರಬೇಕು.

ಸ್ವಲ್ಪ ಚಕಿತನಾಗಿ, ನಕ್ಕು ಅರುಣ ಹೇಳುತ್ತಾನೆ. ಓರ್ವ ಲೀಲಾ ಭಟ್ಟಾಚಾರ್ಯ, ನಿನಗೆ ಅರ್ಧ ಗಂಟೆಯ ಮೊದಲು ಈಶ್ವರ ಜ್ಞಾನ ಕೊಟ್ಟಳು.

–ಇಲ್ಲ, ಶ್ಯಾಮ ನಗುತ್ತಾನೆ. ನಾನು ಕೇವಲ ಇಷ್ಟು ಅರ್ಥ ಮಾಡಿಕೊಂಡೆ ಏನೆಂದರೆ, ನನ್ನೊಳಗೆ ಇನ್ನೂ ಒಂದು ಆಶ್ಚರ್ಯದ ಸಂಗತಿ, ರೈಲುಗಾಡಿಯ ಶಬ್ದ ಇದೆ ಅಂತ. ಹಾಗೇ ಆತ್ಮತೃಪ್ತಿಯು ಕೂಡ ಇದೆ. ನನ್ನ ಮನಸ್ಸಿಗೆ, ಹುಡುಗಿಯರೇ ಎಲ್ಲರಿಗಿಂತ ಹೆಚ್ಚು ನನ್ನನ್ನು ಮೋಸಗೊಳಿಸಿದ್ದಾರೆ ಅಂತ ಅನಿಸುತ್ತೆ. ಎಲ್ಲವನ್ನೂ ತೆಗೆದುಕೊಂಡರೂ, ನಿಜವಾದ ರಹಸ್ಯವನ್ನು ಸೆರಗಿನಂಚಿನಲ್ಲೂ ಕಟ್ಟಿಕೊಂಡು ಹೋಗಿಬಿಟ್ಟಿದ್ದಾರೆ. ಅಥವಾ ಯಾರಿಗೆ ಗೊತ್ತು ಆ ರಹಸ್ಯ ಕೂಡ ನನ್ನೆದುರು ತೆರೆದ ಪತ್ರದ ತರಹ ಎದುರು ಹಿಡಿದಿದ್ದರೋ ಏನೋ. ನನ್ನಿಂದ ಹಿಡಿಯಲು ಸಾಧ್ಯವಾಗಲಿಲ್ಲ. ಅದಕ್ಕೇ ಆ ಹುಡುಗಿ, ನನಗ್ಯಾರು ಬೇಕು ಎಂದು ಪ್ರಶ್ನಿಸಿದಾಗ ನನಗೆ ಭಿಕ್ಷುಕ ಎಂದೆನಿಸಿತು. ನನಗೆ ಹೆಸರು, ಪರಿಚಯ ಯಾವುದೂ ಇಲ್ಲ ಎಂದೆನಿಸಿತು. ನಾನು ಎಷ್ಟೊಂದು ತುಚ್ಛ ಹಾಗೂ ಇನ್‌ಸಫೀಷಿಯಂಟ್ ಎಂದರೆ ನಾನು ಒಂದು ವೇಳೆ ಹುಟ್ಟದೇ ಇದ್ದಿದ್ದರೂ ಕೂಡಾ ಏನೂ ಕೆಡಕಾಗುತ್ತಿರಲಿಲ್ಲ. ನನಗೆ ಅರ್ಥವಾಗುತ್ತಿರಲಿಲ್ಲ ನಾನು ಮರವಾಗಿ ಯಾಕೆ ಹುಟ್ಟಲಿಲ್ಲ, ನಾನು ಯಾಕೆ ನೀರಿನ ಮೀನಾಗಿ ಹುಟ್ಟಲಿಲ್ಲ?

ಮೆಲ್ಲ ಮೆಲ್ಲನೆ ಅರುಣ ನಿಂತುಕೊಂಡ – ಶ್ಯಾಮ

–ಅರುಣ ಮಾತನಾಡಬೇಡ. ಶ್ಯಾಮ ಮೆಲ್ಲನೆ ಹೇಳಿದ. ನಾನು ಇಷ್ಟು ದಿನದ ವರೆಗೂ ನನ್ನನ್ನು ತುಂಬಾ ಇಂಪಾರ್ಟೆಂಟ್ ಎಂದು ಭಾವಿಸಿಕೊಂಡಿದ್ದೆ. ನನಗೆ ಎಲ್ಲವೂ ಸುಲಭವಾಗಿ ದಕ್ಕಿಬಿಡುತ್ತದೆ ಅಂತ ನಾನಂದುಕೊಂಡಿದ್ದೆ. ಶ್ಯಾಮ ಮೆಲ್ಲನೆ ನಕ್ಕು ತಲೆ ಅಲ್ಲಾಡಿಸುತ್ತಾನೆ, ಯಾವುದು ಸಿಕ್ಕಿದೆ ಅಂತ ನಾನು ಅಂದುಕೊಂಡಿದ್ದೆನೋ ಅದು ಸುಳ್ಳು. ನನ್ನನ್ನು ಎಲ್ಲರೂ ಇಷ್ಟು ದಿನದವರೆಗೂ ಮೋಸಗೊಳಿಸುತ್ತಾ ಬಂದಿದ್ದಾರೆ. ಹಾಗಿಲ್ಲದಿದ್ದರೆ, ನನ್ನಿಂದ ಯಾಕೆ ಒಮ್ಮೊಮ್ಮೆ ಬಾಗಿಲು ಹುಡುಕಲು ಸಾಧ್ಯವಾಗುವುದಿಲ್ಲ. ಮರದ ನೆರಳನ್ನು ನನ್ನಿಂದ ಹುಡಕಲಾಗುವುದಿಲ್ಲ. ಎಲ್ಲಿ? ಎಲ್ಲಿ? ನನ್ನಿಂದ ತಪ್ಪಾಗುತ್ತಿದೆ. ಇಷ್ಟು ದಿನ ನನಗೆ ಎಲ್ಲಾ ಬಾಗಿಲುಗಳ ಪರಿಚಯವಿತ್ತು ಸುಲಭವಾಗಿ ತೆರೆಯುತ್ತಿದ್ದೆ... ತಟ್ಟನೆ ಪ್ರೇಮಿಸುವುದಕ್ಕೋಸ್ಕರ ಪುನಃ ನನ್ನ ಮೊಣಕೈ ಮುಚ್ಚಿ ಕುಳಿತುಕೊಳ್ಳಬೇಕು ಎಂದೆನಿಸುತ್ತೆ.

ಅರುಣ ಕಣ್ಣು ಮೇಲೇರಿಸುತ್ತಾನೆ – ಏನು ಸಮಾಚಾರ ಹೇಳು ನೋಡೋಣ.

ಕ್ಲಾಂತ ಭಾವದಿಂದ ಶ್ಯಾಮ ನಗುತ್ತಾನೆ – ಏನೂ ಇಲ್ಲ.

ತತ್ ಬಡ್ಡೀ ಮಗನೆ! ಅರುಣ ಹೋ ಹೋ ಎಂದು ನಗುತ್ತಾನೆ. ನಗುತ್ತಾ, ನಗುತ್ತಾ ತನ್ನ ಹೊಟ್ಟೆಯ ಕಡೆ ಬೊಟ್ಟು ಮಾಡಿ ತೋರಿಸಿ ಹೇಳುತ್ತಾನೆ – ಎಲ್ಲಕ್ಕೂ ಮೂಲ ಈ ಹೊಟ್ಟೆ. ವಾಯುವಿನಿಂದ ನಿನಗೆ ಈ ರೀತಿ ಆಗುತ್ತಾ ಇದೆ. ದಿನ ರಾತ್ರಿ ಇಸಬ್‌ಗುಲ್ ಬೇರನ್ನು ಸುಟ್ಟು ತಿನ್ನು. ತುಂಬಾ ಹಾಲು ಕುಡಿ, ಬೆಳಗಾಗೆದ್ದು ಬಿಸಿನೀರಿಗೆ ಲಿಂಬೆ ಹಣ್ಣನ್ನು ಹಿಂಡಿಕೊಂಡು ಕುಡಿ. ನಾನು ಬ್ಯಾಚುಲರ್ ಆಗಿ ಇದ್ದಾಗ, ನನಗೆ ಹನ್ನೊಂದು ತರಹದ ಹೊಟ್ಟೆಯ ಕಂಪ್ಲೇಂಟ್ಸ್‌ಗಳಿದ್ದವು. ಲೀಲಾ ಭಟ್ಟಾಚಾರ್ಯಾಗೆ ನಾನು ಹೇಳಿಬಿಟ್ಟಿರುತ್ತೇನೆ. ನೀನು ಸೇಂಟ್ ಎಂಡ್ ಮಿಲರ್ ಕಂಪೆನಿಯ ಎಕ್ಸಿಕ್ಯೂಟಿವ್ ಅಂತ. ಎರಡೂ ಅರ್ಥದಲ್ಲಿ ಹೇಳುತ್ತೇನೆ ನೀನು ಒಳ್ಳೇ ಆಟಗಾರ, ನೀನು ಗಡ್ಡ ಬೋಳಿಸಿಕೊಳ್ಳದೆ, ಮೈಮೇಲೆ ರೇಶಿಮೆಯ ಶಾಲನ್ನು ಹೊದ್ದು

ಛದ್ಮವೇಶದಿಂದ ತಿರುಗಾಡುತ್ತಿದ್ದೀಯಾ ಅಂತ – ತಪ್ಪು ಮಾಡಿ ಅವನನ್ನು ಕಳೆದುಕೊಳ್ಳಬೇಡ ಎಂದು ಹೇಳುತ್ತೇನೆ.

ಎಸ್ ಪ್ಲ್ಯಾಸೇಡ್ ಫುಟ್‌ಪಾತಿನಲ್ಲಿ ನಿಂತು, ಕೈ ಎತ್ತಿ ಹೇ ಟ್ಯಾಕ್ಸೀ ಎಂದು ಕೂಗಿ ಕರೆದು, ಅರುಣ ಶ್ಯಾಮನಿಗೆ ಹೇಳುತ್ತಾನೆ – ನಡಿ ನಿನ್ನನ್ನು ತಲುಪಿಸಿ ಬರುತ್ತೇನೆ.

ಆಕಳಿಸುತ್ತಾ ಶ್ಯಾಮ ಹೇಳುತ್ತಾನೆ. ಬೇಡ ಮನೆಗೆ ಹೋಗಲು ನನಗೇನು ಅವಸರವಿಲ್ಲ. ನೀನು ಹೋಗು. ನಾನು ಸ್ವಲ್ಪ ಸುತ್ತಾಡಿ ಆಮೇಲೆ ಹೋಗುತ್ತೇನೆ.

ಟ್ಯಾಕ್ಸಿಯ ಬಾಗಿಲನ್ನು ಮುಚ್ಚಿಕೊಳ್ಳುವ ಮೊದಲು ಅರುಣ ತಗ್ಗಿದ ಧ್ವನಿಯಲ್ಲಿ ಹೇಳುತ್ತಾನೆ – ಒಂದು ವೇಳೆ ಮನಸ್ಸಿಗೆ ಹಿಡಿಸಿದ್ದರೆ ಹಾಗೇ ಒಪ್ಪಿಕೊಂಡು ಬಿಡು. ನಾನು ನೋಡಿಕೊಳ್ಳುತ್ತೇನೆ... ಕೆಲಸಕ್ಕಾಗಿ ಯೋಚಿಸಬೇಡ. ನಾನು ಹೋಗೋ ಮೊದಲು ನನ್ನ ಮಾವನ ಫರ್ಮನಲ್ಲಿ ನಿನಗೆ ಒಂದು ವ್ಯವಸ್ಥೆ ಮಾಡಿ ಕೊಟ್ಟು ಹೋಗುತ್ತೇನೆ ಎಂದು ಹೇಳುತ್ತಾ ಅರುಣ ದುಷ್ಟನಂತೆ ಜೋರಾಗಿ ನಕ್ಕು ಕೇಳುತ್ತಾನೆ ನನ್ನ ಶರೀರ ನಿನಗೆ ಹೇಗೆನಿಸುತ್ತೆ? ಚೆನ್ನಾಗಿದೆ ಅಲ್ಲಾ.

ಆಃ ಫೈನ್ ಶ್ಯಾಮ ನಕ್ಕು ಹೇಳುತ್ತಾನೆ. ಫಾರ್ ಅಮೇರಿಕಾ ದಿ ಲ್ಯಾಂಡ್ ಆಫ್ ಫ್ರೀ ಸೆಕ್ಸ್. ನೋಡುತ್ತಾ ಇರು ಅರವತ್ತನೇಯ ವಯಸ್ಸಿನಲ್ಲಿಯೂ ನಾನು ನನ್ನ ದೇಹವನ್ನು ಯಾವ ರೀತಿ ಕಾಪಾಡಿಕೊಂಡಿರುತ್ತೇನೆ. ಚೀರಿಯೋ

ಅರುಣ ಚಲಿಸುತ್ತಿರುವ ಟ್ಯಾಕ್ಸಿಯಿಂದ ಕೈ ಬೀಸುತ್ತಾನೆ. ಶ್ಯಾಮನಿಂದ ವಿದೇಶೀ ಅರುಣನನ್ನು ಸರಿಯಾಗಿ ಗುರುತಿಸಲಾಗುವುದಿಲ್ಲ. ಆದರೆ ಈಗ ಅವನನ್ನು ಗುರುತಿಸಿದೆ ಎಂದು ಮನಸ್ಸಿಗನ್ನಿಸುತ್ತದೆ.

ಶೂನ್ಯ ಮನಸ್ಕನಾಗಿ ಶ್ಯಾಮ ಒಬ್ಬನೇ ನಡೆಯುತ್ತಾನೆ. ಅವನ ತಲೆಯೊಳಗೆ ದುಂಬಿಯ ಶಬ್ದದ ತರಹ ದೂರದಿಂದ ಬರುವ, ಒಂದು ಮೋಟರ್ ಸೈಕಲ್‌ನ ಶಬ್ದ ತಲೆ ತುಂಬಾ ತುಂಬುತ್ತದೆ. ಶ್ಯಾಮನಿಗೆ ತುಂಬಾ ಮುಜುಗರವೆನಿಸುತ್ತದೆ, ಕಸಿವಿಸಿಯಾಗುತ್ತದೆ. ಕ್ರಿಸ್‌ಮಸ್ ಗೋಸ್ಕರ ಸಜ್ಜುಗೊಳಿಸಿದ ಅಂಗಡಿಯ ಸಾಲು ಬಣ್ಣ ಬಣ್ಣದ ಕಾಗದಗಳಿಂದ ಅಲಂಕರಿಸಿದ್ದಾರೆ. ವೃದ್ಧ ಸಾಂಟಾಕ್ಲಾಸ್ ಹಾಗೂ ನಕಲಿ ಪೈನ್ ಮರ, ಕಣ್ಣಮುಂದೆ ಹಾದು ಹೋಗುತ್ತಾ ಇದೆ. ಒಬ್ಬಾತ ಹ್ಯಾಂಡ್‌ಬಿಲ್ಲಿನ ವಿಜ್ಞಾಪನೆಗಳನ್ನು ಹಂಚುತ್ತಿದ್ದಾನೆ. ಶ್ಯಾಮನ ಕೈಗೂ ಅವನು ಒಂದು ಕಾಗದವನ್ನು ತುರುಕುತ್ತಾನೆ. ಆ ವಿಜ್ಞಾಪನೆಯ ಪತ್ರದಲ್ಲಿ, ದೊಡ್ಡ ದೊಡ್ಡ, ಇಂಗ್ಲೀಷ್ ಅಕ್ಷರಗಳಲ್ಲಿ ಬರೆದಿದೆ – ನಿಮ್ಮ ವಿಪತ್ತು ಮುಗಿದಿದೆ... ಅನಂತರ ಒಂದು ಔಷಧಿಯ ವರ್ಣನೆ. ಶ್ಯಾಮ ನಕ್ಕು ಆ ಕಾಗದವನ್ನು ಮುದುರಿ ಬಿಸಾಕುತ್ತಾನೆ. ಶ್ಯಾಮ ಮನದಲ್ಲೇ ಗೊಣಗುತ್ತಾನೆ... ನನ್ನ ಕಷ್ಟಗಳು ಮುಗಿದಿವೆ. ಇನ್ನು ನನಗೆ ಕಷ್ಟವಿಲ್ಲ.

# 8

ಹಿಂತಿರುಗುವಾಗ, ಸೆಕೆಂಡ್ ಕ್ಲಾಸಿನ ಟ್ರಾಮಿನ ಕಿಟಿಕಿಯ ಬಳಿ ಶ್ಯಾಮನನ್ನು ಒತ್ತಿ ಕುಳಿತಿದ್ದ ಒಬ್ಬ ವ್ಯಕ್ತಿ, ತಲೆ ತಗ್ಗಿಸಿ ಶ್ಯಾಮನಿಗೆ ಆದಾಬ್ ಎಂದು ಹೇಳಿದ. ಉಡುಪು ಪಂಜಾಬಿ ಪೈಜಾಮ, ಲಕ್ನೌ ಕಸೂತಿ ಮಾಡಿದ ಜುಬ್ಬ. ಹಾಗೇ ತಲೆಯ ಮೇಲೆ ಉಣ್ಣೆಯಿಂದ ಹೆಣೆದ ಬಲೆಯ ಒಂದು ಗೋಲ ಟೋಪಿ. ಅದು ತಲೆಗೆ ಒತ್ತಿ ಕುಳಿತಿದೆ. ಕಣ್ಣಿಗೆ ಕಾಡಿಗೆ. ಈರ್‌ಫಾನ್.

ಈರ್‌ಫಾನ್ ಹೇಗಿದ್ದೀಯಾ?

ಶ್ಯಾಮ ಟ್ರಾಮನ್ನು ಹತ್ತುತ್ತಲೇ ಆ ವ್ಯಕ್ತಿ ತುಂಬಾ ವಿನೀತ ಭಾವದಿಂದ ಎದ್ದು, ನಕ್ಕು ಶ್ಯಾಮನಿಗೆ ಜಾಗ ಬಿಟ್ಟು ಕೊಟ್ಟ.

– ಚಕ್ರವರ್ತಿ ಬಾಬೂಗಳೇ ಕುಳಿತುಕೊಳ್ಳಿ.

ಶ್ಯಾಮ ಈರ್‌ಫಾನ್‌ನ ಹೆಗಲನ್ನು ನೇವರಿಸಿ, ಹೆಗಲು ಮುಟ್ಟಿ ಹೇಳಿದ – ಇಲ್ಲ ನೀನೇ ಕುಳಿತುಕೋ.

ಈರ್‌ಫಾನ್ ನಕ್ಕು ಹೇಳುತ್ತಾನೆ – ನೀವು ಕುಳಿತುಕೊಳ್ಳಿ. ನಾನು ಪಾರ್ಕ್ ಸ್ಟ್ರೀಟಿನಲ್ಲಿ ಇಳಿದು ಬಿಡುತ್ತೇನೆ.

ಶ್ಯಾಮ ಕ್ಲಾಂತ ಭಾವದಿಂದ ಕುಳಿತು, ಏನು ಸಮಾಚಾರ ಎಂದು ಕೇಳಿದ.

ಈರ್‌ಫಾನ್ ಮುಖದ ಮೇಲೆ ಅದೇ ವಿನೀತ, ವಿನಯದ ನಗು – ಈ ನಡುವೆ ಪುನಃ ನೀವು ಬಂದೇ ಇಲ್ಲ.

ಇಲ್ಲ. ತುಂಬಾ ದಿನಗಳಿಂದ ಶ್ಯಾಮ ರಾಜಾಬಜಾರಿನ ಈರ್‌ಫಾನನ ಅಂಗಡಿಗೆ ಹೋಗೇ ಇಲ್ಲ. ಹೋಗುವ ಪ್ರಮೇಯವೂ ಬಂದಿರಲಿಲ್ಲ. ಮೊದಲು ಶ್ಯಾಮ ಪ್ರತಿ ತಿಂಗಳೂ ಹೋಗುತ್ತಿದ್ದ. ಇನ್ನೂರೈವತ್ತು ರೂಪಾಯಿ ಕೊಡಿಸಿ ಈರ್‌ಫಾನಿಗೆ ಕೊಟ್ಟರೆ ಅವನು ತನ್ನ ಆತ್ಮೀಯ ಕೆಲಸದಾಳಿಗೆ ಚೀಟಿ ಬರೆದು ಕೊಡುತ್ತಾನೆ– ನಮ್ಮ ದಕ್ಷಿಣದ ತೋಟದಲ್ಲಿ ಈ ಸಲ ತುಂಬಾ ಮಾವಿನ ಹಣ್ಣು ಬಿಟ್ಟಿದೆ. ಬಾನೀ ಕಾಡಾದ ಕಮಲಾಕ್ಷ ಚಕ್ರವರ್ತಿಗೆ ಇನ್ನೂರು ಮಾವಿನ ಹಣ್ಣನ್ನು ಕಳಿಸಿಕೊಡಿ. ಅಲ್ಲಿ ಅಪ್ಪ ಸರಿಯಾಗಿ ಇನ್ನೂರು ರೂಪಾಯಿ ಪಡೆಯುತ್ತಿದ್ದರು.

–ಕೆಲಸ ಕಾರ್ಯ ಹೇಗೆ ನಡೀತಾ ಇದೆ? ಶ್ಯಾಮ ಪ್ರಶ್ನಿಸಿದ.

ಏನೋ ಮಂದವಾಗಿ ನಡೀತಾ ಇದೆ. ಹಾಗೇ ಈರ್‌ಫಾನ್ ತಗ್ಗಿದ ಧ್ವನಿಯಲ್ಲಿ ಹೇಳಿದ – ಈಗ ಕಾರಭಾರ ಇರೋದು ಸಹಾ ಬಾಬುವಿನ ಕೈಯಲ್ಲಿ.

ಶ್ಯಾಮ ಅವನ ಯಾವ ಮಾತನ್ನೂ ಸರಿಯಾಗಿ ಕೇಳಿಸಿಕೊಂಡಿರಲಿಲ್ಲ. ಟ್ರಾಮ್ ಒಂದು ಅಂಧಕಾರದ ಬಯಲನ್ನು ದಾಟಿಕೊಂಡು ಹೋಗುತ್ತಿದೆ, ಗಾಳಿ ಬೀಸುತ್ತಿದೆ. ಸುರ್ಮಾ ಹಚ್ಚಿದ ಜಿಂಕೆಯಂಥ ಈರ್‌ಫಾನಿನ ಕಣ್ಣುಗಳಲ್ಲಿ ಕಣ್ಣಿಟ್ಟು ಶ್ಯಾಮ ದಿಟ್ಟಿಸಿ ನೋಡುತ್ತಾನೆ. ಹಾಗೇ ಮರ್ಯಾದೆಯ ಗಂಭೀರ ನಗೆ ನಗುತ್ತಾನೆ.

ಈರ್‌ಫಾನ್ ಪಾರ್ಕ್ ಸ್ಟ್ರೀಟಿನಲ್ಲಿ ಇಳಿದು ಹೋದ. ಇಳಿಯುವ ಮೊದಲು ಶ್ಯಾಮನ ಕಿವಿಯ ಬಳಿ ಮುಖ ತಂದು ಕಿವಿಯಲ್ಲಿ ಹೇಳಿದ - ಒಂದು ವೇಳೆ ಪಾಕಿಸ್ತಾನಕ್ಕೆ ಹೋಗುವ ಪರಿಸ್ಥಿತಿ ಬಂದರೆ ತಿಳಿಸಿ. ಕೈಯಲ್ಲೀಗ ಒಬ್ಬ ಒಳ್ಳೆ ಏಜೆಂಟ್ ಇದ್ದಾನೆ. ಗಡಿ ದಾಟಿಸಿ ಬಿಡುತ್ತಾನೆ, ಆ ಮೇಲೆ ಹತ್ತು ದಿನಗಳ ಅಂತರದಲ್ಲಿ ಪುನಃ ವಾಪಸ್ಸು ಕರೆದುಕೊಂಡು ಬಂದು ಬಿಡುತ್ತಾನೆ. ಇದರಲ್ಲಿ ಏನೂ ಹೆದರಿಕೆ ಬೇಡ. ಹೇಳಿ.

ಈರ್‌ಫಾನ್ ಪಾರ್ಕ್ ಸ್ಟ್ರೀಟಿನಲ್ಲಿ ಇಳಿದು ಹೋದ. ಇಳಿಯುವಾಗ ಪುನಃ ಅದಾಬ್ ಮಾಡಿದ.

ಈರ್‌ಫಾನ್ ಇಳಿದು ಹೋದ ತಕ್ಷಣ ಶ್ಯಾಮನಿಗೆ ಅವನು ಮುಸಲ್ಮಾನ ಎನ್ನುವುದು ಮನಸ್ಸಿಗೆ ಹೊಳೆಯಿತು. ಇಲ್ಲ ಅವನು ಹಿಂದೂ ಎಂದೆನಿಸಿತು. ಆಶ್ಚರ್ಯ. ಅವನು ಹಿಂದೂ ಎಂಬ ವಿಷಯ ಅನೇಕ ದಿನದಿಂದ ಅವನ ಮನಸ್ಸಿಗೆ ಅನ್ನಿಸಿರಲಿಲ್ಲ. ಅವನಿಗೆ ತಾನು ಹಿಂದೂ ಎನ್ನುವುದೂ ಮನಸ್ಸಿಗನಿಸಿರಲಿಲ್ಲ. ಆ ರೀತಿ ಮನಸ್ಸಿಗನಿಸುತ್ತಲೂ ಶ್ಯಾಮ ನಕ್ಕ. ಆಶ್ಚರ್ಯ, ನಾನು ಹಿಂದೂ ನಾನು ಯಾವ ಹಿಂದೂ, ಹಿಂದೂವಾಗಿ ನಾನು ಯಾವ ರೀತಿ ಇದ್ದೇನೆ.

ತುಂಬಾ ಯೋಚಿಸಿದರೂ ಕೂಡ, ಅವನಿಂದ ಶ್ಯಾಮ ಶಬ್ದದ ಯಾವ ಅರ್ಥವವನ್ನೂ ಹುಡುಕಿ ತೆಗೆಯಲಾಗಲಿಲ್ಲ. ಅವನಿಗೆ ತಾನು ಹಿಂದೂ ಎನ್ನುವುದೇ ಸಂಶಯವಾಗಿತ್ತು. ಅವನು ಭಾರತೀಯ ಅಥವಾ ಬಂಗಾಲಿಯೋ ಅನುಮಾನವಾಗುತ್ತೆ. ಅವನು ಕಮಲಾಕ್ಷ ಚಕ್ರವರ್ತಿಯ ಮಗ, ಬಾನಿಖಾಡಾ ಢಾಕಾ ಜಿಲ್ಲೆ. ಅವನಿಗೆ ತಾನು ಶ್ಯಾಮ ಚಕ್ರವರ್ತಿ ಎಂಬ ಹೆಸರಿನ ಯಾವನೋ ಒಬ್ಬ ಸೇಂಟ್ ಎಂಡ್ ಮಿಲರ್‌ನ ಚಿಕ್ಕ ಸಾಹೇಬ ಅಥವಾ ಕ್ಲಬ್ಬಿನ ಒಂದು ಕಾಲದ ಲೆಫ್ಟ್ ಔಟ್ ಎನ್ನುವುದೂ ಅನುಮಾನ. ಈ ಎಲ್ಲಾ ನಾಮ ಪರಿಚಯಾದ ಹೊರಗೆ ಅವನ ಯಾವ ಅಸ್ತಿತ್ವವೂ ಇಲ್ಲವೇನೋ ಎಂದು ಅವನಿಗೆ ಸಂಶಯವಾಗುತ್ತದೆ.

ಟ್ರಾಮ್ ಮಂಜನ್ನು ಭೇದಿಸಿಕೊಂಡು ಹೋಗುತ್ತಿದೆ. ಅಸ್ಪಷ್ಟ ಚಂದ್ರನ ಬೆಳಕಿನಲ್ಲಿ ಟ್ರಾಮ್ ಸಾಗಿದೆ. ಶ್ಯಾಮ ಕಿಟಕಿಯ ಕಟಕಟೆಗೆ ತಲೆ ವಾಲಿಸುತ್ತಾನೆ. ಅನಂತರ ಕ್ರಮೇಣ ಅವನ ಟ್ರಾಮ್ ಗುರಿ ಮರೆತು, ಪರಚಯಾವಿಲ್ಲದ, ಗುರುತಿಲ್ಲದ ಕಡೆ ಸಾಗುತ್ತದೆ. ನಾಲ್ಕೂ ಕಡೆ ಚಂದ್ರ ಹಾಗೂ ಮಂಜಿನ ಮೋಹ. ವಿಶಾಲವಾದ ಬಯಲು ಗೋಳೋ ಎಂದು ಅಳುತ್ತಿದೆ. ಭೂತದ ತರಹದ ನೆರಳು ಕಲ್ಲಿನಂತೆ ಅಚಲವಾಗಿದೆ.

– ಟಿಕೇಟ್

ಶ್ಯಾಮ ಬೇಜಾರಿನಿಂದ ಕಂಡಕ್ಟರನನ್ನು, ಕೈಸನ್ನೆ ಮಾಡಿ ಸರಿದು ಹೋಗು ಎಂದೆನ್ನುತ್ತಾನೆ. ಕಂಡಕ್ಟರ್ ಸರಿದು ಹೊಗುತ್ತಾನೆ.

ಮಾಯಾವಿ ಟ್ರಾಮ್ ಗಾಡಿ ಪರಿಚಯದ ರಸ್ತೆ ಬಿಟ್ಟು ಗುರುತಿಲ್ಲದೆ ರಸ್ತೆಯಲ್ಲಿ ಸಾಗುತ್ತದೆ. ಮರ ಗಿಡಗಳು – ಬಾ ಶ್ಯಾಮ ಎಂದು ಕೂಗುತ್ತವೆ. ಗಾಳಿ ಪಿಸ್ ಪಿಸ್ ಎಂದು ಬಾ ಶ್ಯಾಮ ಎಂದು ನುಡಿಯುತ್ತದೆ. ಅನಂತರ ಗಾಳಿ ಅವನನ್ನು ಮುಟ್ಟಿ ಗಂಭೀರ ರಾಜ್ಯದೊಳಗೆ ಹೊರಟು ಹೋಗುತ್ತದೆ. ಬೆಟ್ಟ, ಗುಹೆ, ನದಿ ಅಥವಾ ಸಮುದ್ರ ಮೇಲಿಂದ ಹಾದು ಸುಗಂಧದ ತರಹ ಮಾತುಕತೆಯಾಡುತ್ತವೆ – ಶ್ಯಾಮ ನಮ್ಮ ಶ್ಯಾಮ ಹಕ್ಕಿಯ ಕಣ್ಣಿನಿಂದ ಬಿದ್ದ ನೀರಿನ ತರಹ ಹುಲ್ಲಿನ ಮೇಲೆ ಮಂಜು ತುಂಬಿದೆ, ಕಾಲಿಕಾ ಸಂದಿಯ ತೋಪಿನಲ್ಲಿ, ನದೀ ತೀರದ ಮರದಡಿಯಲ್ಲಿ, ಭಾವಿಯ ಹತ್ತಿರ, ಅಶ್ವೀಜ, ಭಾದ್ರಪದ ತರಹ ಅಂಧಕಾರ ಜೋಲಾಡುತ್ತಿದೆ. ದೀಪದ ಹುಳ ಚಕ್ ಚಕ್ ಎಂದು ಹಾರಾಡುತ್ತಿದೆ. ಶ್ಯಾಮನಿಗೆ ಹೊಂಡದ ಕಡೆಯಿಂದ ಏನೋ ವಾಸನೆ ಬಂದಂತೆನಿಸುತ್ತದೆ. ಗಾಢ ರಾತ್ರಿಯಲ್ಲಿ ತಟ್ಟನೆ ಮೇಲೆ ಹಾರಿ ಕೆಳಗೆ ಮುಳುಗಿ ಮೂಡುತ್ತವೆ ದೊಡ್ಡ ಮೀನುಗಳು. ಅನಂತರ ಶಾಂತ ನೀರಿನ ತಳದಲ್ಲಿನ ಗಂಭೀರ ಅಪ್ಸರ ಲೋಕದಲ್ಲಿ ಮೀನುಗಳು ನಿಶ್ಶಬ್ದವಾಗಿ ಹೊರಟು ಹೋಗುತ್ತವೆ.

ದೂರದ ಗಂಗೆಯಲ್ಲಿ ಹಡಗಿನ ಶಬ್ದ ಭೂಂ ಎಂದು ಕೇಳಿ ಬರುತ್ತದೆ. ತಲೆಯ ಮೇಲೆ ಹಾರುವ ವಿಮಾನದ ಭೀಷಣ ಶಬ್ದ. ಶ್ಯಾಮ ಅನ್ಯಮನಸ್ಕನಾಗಿ ಅದನ್ನೆಲ್ಲ ಗಮನಿಸುವುದಿಲ್ಲ. ಬಯಲಿನ ಹತ್ತಿರ ಹೋಗುತ್ತಿರುವಾಗ ಒಂದೆರಡು ಕ್ಷಣ ಸ್ವಪ್ನದ ಅದೇ ದೇಶ ಶ್ಯಾಮನ ಚೇತನವನ್ನು ಸ್ಪರ್ಶಿಸಿ ಹೊರಟು ಹೋಯಿತು.

ಶ್ಯಾಮ ಬೇಜಾರಿನಿಂದ ಟ್ರಾಮಿನಿಂದ ಇಳಿದು, ಮೆಲ್ಲನೆ ಗಡಿಯಾ ಹಾಟಿನ ತಿರುವಿನಲ್ಲಿ ನಡೆದು ಹೋದ. ಅವನನ್ನು ತಳ್ಳಿಕೊಂಡೇ ವೃದ್ಧ ಗೇಂಜಿ ಮಾರುವವ ವಿರುದ್ಧ ದಿಕ್ಕಿನಲ್ಲಿ ಹೊರಟು ಹೋಗುತ್ತಾನೆ. ಧೀರ ಗಂಭೀರ ಧ್ವನಿಯಲ್ಲಿ ಕೂಗುತ್ತಾನೆ... ಗೇಂಜಿ.

ಶ್ಯಾಮ ಒಂದೆರಡು ಹೆಜ್ಜೆ ನಡೆದು ಹೋಗುತ್ತಾನೆ. ಒಬ್ಬ ಹತಾಶ ಗೇಂಜಿವಾಲ ಸ್ವರ ಎತ್ತಿ ಗೇಂಜಿ ಎಂದು ಕೂಗುತ್ತಿದ್ದಾನೆ. ದೂರ ಆ ಸ್ವರ ಸರಿದು ಹೋಗುತ್ತದೆ. ತಲೆಯ ಮೇಲೆ ಪುನಃ ಶ್ಯಾಮನಿಗೆ ಬಿಸಿನೀರು ಸುರಿದಂತೆನಿಸುತ್ತದೆ. ಆದರೆ ಏನೊಂದೂ ನೆನಪಾಗುವುದಿಲ್ಲ. ಶ್ಯಾಮ ಪುನಃ ಒಂದೆರಡು ಹೆಜ್ಜೆ ಮುಂದೆ ನಡೆದು ಮೆಲ್ಲ ಮೆಲ್ಲನೆ ಓಡುತ್ತಾ, ಅಸ್ಪಷ್ಟ ಸ್ವರದಲ್ಲಿ ಕೂಗುತ್ತಾನೆ ಸೋನಾಕಾಕಾ.

ಶ್ಯಾಮ ಹಾಗೇ ಸುತ್ತುತ್ತಾ, ಗುಂಪನ್ನು ಭೇದಿಸಿಕೊಂಡು ಬರುವ ಪ್ರಯತ್ನವನ್ನು ಮಾಡುತ್ತಾನೆ. ಆದರೆ ಅಷ್ಟರಲ್ಲೇ ಆ ಗೇಂಜಿವಾಲನ ಧ್ವನಿ ತುಂಬಾ ದೂರ ಹೊರಟು ಹೋಗಿರುತ್ತದೆ. ಶ್ಯಾಮ ತಲೆ ಅಲ್ಲಾಡಿಸಿ ತನ್ನಲ್ಲೇ ಹೇಳಿಕೊಳ್ಳುತ್ತಾನೆ – ಸೋನಾಕಾಕಾ. ಅವನ ಮುಖದಲ್ಲಿ ಎಂದೂ ಮರೆಯಲಾಗದ ಆ ವೃದ್ಧ ಮುಖ, ತಲೆ ಎತ್ತಿ ಗುಳಿ ಬಿದ್ದ ಕಣ್ಣಿನ ಸೋನಾಕಾಕಾ, ಅವನನ್ನೇ ದಿಟ್ಟಿಸಿ ನೋಡುತ್ತಾನೆ – ಮನು ಎಂದು ತಲೆ ಅಲ್ಲಾಡಿಸಿ ಪುನಃ ಏ ಮನೂ ಎಂದೆನ್ನುತ್ತಾನೆ. ಅವನ ಹೆಗಲಿನ ಮೇಲೆ ಶ್ಯಾಮ ಕೈ ಇಡುತ್ತಾನೆ –

ಸೋನಾಕಾಕಾ ಇನ್ನೂ ಒಂದಿಷ್ಟು ದಿನ ಬದುಕು, ಬದುಕಿ ಉಳಿ.

ಶ್ಯಾಮ ಗೊಣಗುತ್ತಾನೆ – ನಾನು ಒಳ್ಳೆಯ ಕಾಲವನ್ನು ತರುತ್ತೇನೆ. ಅಲ್ಲಿಯವರೆಗೂ ಪ್ರತೀಕ್ಷೆ ಮಾಡಿ.

ಶ್ಯಾಮನಿಗೆ ಹೋಟೆಲಿನಲ್ಲಿ ಮಿತ್ರನ ಜೊತೆ ಭೇಟಿಯಾಯಿತು. ಮಿತ್ರ ಕಣ್ಣು ಎತ್ತರಿಸಿ ಹೇಳಿದ – ಇಂದು ಒಂದು ಘಟನೆ ನಡೆದು ಹೋಯಿತು ಸ್ವಾಮಿ, ಪ್ರೇಮದ ವಿಷಯ, ತುಂಬಾ ಇಂಟರೆಸ್ಟಿಂಗ್.

ಶ್ಯಾಮ ಹುಬ್ಬೆತ್ತಿ ನಕ್ಕು – ಆದರೆ

ಮಿತ್ರ ಸ್ವಲ್ಪ ಬಗ್ಗಿ ಹೇಳಿದ – ಆ ಹುಡುಗಿ ಕುಮಾರಿಯಿಂದ ಒಂದೇ ಸಲಕ್ಕೆ ವಿಧವೆಯಾಗಿ ಹೋಗಿದ್ದಾಳೆ. ಡಬಲ್ ಪ್ರಮೋಷನ್ – ನಡುವೆ ಹಲವಾರು ತಿಂಗಳು ಬಂದಿರಲಿಲ್ಲ. ಇವತ್ತು ಬಂದಿದ್ದಳು. ಬಿಳೀ ಸೀರೆ, ಕೈಯಲ್ಲಿ ಬಳೆ ಇಲ್ಲ, ಕಿವಿಯಲ್ಲಿ ಓಲೆ ಇಲ್ಲ, ಕೊರಳಲ್ಲಿ ಸರ ಇಲ್ಲ, ಮುಖ, ಕಣ್ಣು, ಕಿವಿ, ಕುತ್ತಿಗೆ ಭಣ ಭಣ ಎಂದೆನಿಸುತ್ತೆ. ನನ್ನಿಂದ ಮೊದಲು ಏನನ್ನೂ ಕೇಳಲಾಗಲಿಲ್ಲ. ಅವಳ ಮುಖವನ್ನೇ ನೋಡುತ್ತಲಿದ್ದೆ. ಇದೇ ಅಂದಿನ ಕುಮಾರಿ ಹುಡುಗಿ – ಮದುವೆ ಆಗಲಿಲ್ಲ – ಹಠಾತ್ ಇದೇನಿದು ಎಂದು ಪ್ರಶ್ನಿಸುತ್ತಲೇ, ಮೊದಲು ಜೋರಾಗಿ ಅತ್ತಳು. ಆಮೇಲೆ ಹೇಳಿದಳು – ನಾನು ವಿಧವೆ, ನನ್ನ ಗಂಡ ಸತ್ತು ಹೋಗಿದ್ದಾನೆ... ಆದರೆ ಮದುವೆ ಯಾವಾಗ ಆಯಿತು? ಎಂದು ಪ್ರಶ್ನಿಸಿದೆ. ಕೇವಲ ತಲೆ ಅಲ್ಲಾಡಿಸಿ ಹೇಳಿದಳು... ಆಗಿತ್ತು ... ಆದರೆ ಯಾವಾಗ? ಆ ಮೇಲೆ ತುಂಬಾ ಕಷ್ಟದಿಂದ ಹುಡುಗಿ ಬಾಯಿ ತೆರೆದಳು – ಮದುವೆಯಾಗಲಿಲ್ಲ, ಆದರೆ ಆಗುತ್ತಿತ್ತು. ನಾನು ಮನಸ್ಸಿನಲ್ಲೇ ಅವರನ್ನು ಗಂಡ ಎಂದು ಭಾವಿಸಿದ್ದೆ. ಆಮೇಲೆ ಯಾರೂ, ಎಂದೂ, ಯಾವತ್ತೂ ನನ್ನ ಗಂಡನಾಗಲು ಸಾಧ್ಯವಿಲ್ಲ. – ಆ ಹುಡುಗ ಆಕ್ಸಿಡೆಂಟ್‌ನಲ್ಲಿ ಸತ್ತ ಅಂತ ಸುದ್ದಿ ಕೇಳಿದೆ ಸ್ವಾಮಿ... ಎಂದು ಹೇಳುತ್ತ ಮಿತ್ರ ತಕ್ಷಣ ಗಂಭೀರನಾದ. ಆ ಮೇಲೆ ಈ ಪ್ರೀತಿಸೋದು ತುಂಬಾ ಅದ್ಭುತ ಸ್ವಾಮಿ ಏನಂತೀರಾ?

ಶ್ಯಾಮ ನಗುತ್ತಾನೆ. ತಟ್ಟನೆ ಅವನ ತಲೆಯೊಳಗೆ ದುಂಬಿಯ ಶಬ್ದದ ತರಹ ಮೋಟರ್ ಸೈಕಲಿನ ಧ್ವನಿ ಜಾಗೃತವಾಗುತ್ತದೆ. ಆಕ್ಸಿಡೆಂಟ್ ಯಾವ ತರಹದ ಆಕ್ಸಿಡೆಂಟ್?

ಮಿತ್ರ ತುಂಬಾ ಹೊತ್ತು ಸುಮ್ಮನಿದ್ದು ಹೇಳುತ್ತಾನೆ – ಯಾರಿಗೆ ಗೊತ್ತು. ಈ ನಡುವೆ ಜನ ಹೇಳುತ್ತಾರೆ, ಪ್ರೇಮಗೀಮಾ ಏನೂ ಇಲ್ಲ. ಎಲ್ಲಾ ಅಡ್ಜಸ್ಟ್‌ಮೆಂಟ್. ನನಗೂ ಅದೇ ತರಹದ ನಂಬಿಕೆ ಬಂದು ಬಿಡುತ್ತಿತ್ತು. ತಟ್ಟನೆ ಇಂದು ಹಳೆಯ ಮೈಗೆ ಆವೇಶ ಬಂತು ಸ್ವಾಮಿ. ತುಂಬಾ ಮಜಾ ಮಾಡಿದೆ. ಆದರೆ ಮನಸ್ಸು ಭಾರವಾಗಿದೆ. ಒಳಗಿಂದೊಳಗೆ ಒಂದು ತರಹ ಹ್ಯಾಮರೇಜ್ ಆದಂತೆ ಅನಿಸುತ್ತೆ.

ಪುನಃ ಸ್ವಲ್ಪ ಹೊತ್ತು ಮಾತಿಲ್ಲದೆ ಕಳೆಯುತ್ತೆ. ಊಟ ಮುಗಿಸಿ, ಇಬ್ಬರೂ ಕೈತೊಳೆದು ಒಟ್ಟಿಗೆ ಹೊರಬೀಳುತ್ತಾರೆ. ಹೊರಡುವಾಗ ಮಿತ್ರ ತಟ್ಟನೆ ಹೇಳುತ್ತಾನೆ – ನೋಡಿ ಯಾವ ತರಹ ನನ್ನನ್ನೂ ಕೂಡ ವಿಧವೆಯನ್ನಾಗಿ ಮಾಡಿ ಹೋಗಿದ್ದಾರೆ. ಗಂಡಸು ಅಂತ ಬಿಳೀ ಬಟ್ಟೆ ತೊಟ್ಟುಕೊಳ್ಳೋಲ್ಲ. ಆದರೆ ಒಳಗೊಳಗೆ.. ಇಲ್ಲ ಸ್ವಾಮಿ, ನಗಬೇಡಿ. ಆದರೆ ಒಂದೊಂದು ದಿನ ಒಂಟಿಯಾಗಿ ಒಬ್ಬನೇ ಮನೆಯಲ್ಲಿ ಕುಳಿತು ಜೋರಾಗಿ ಅಳಬೇಕು ಎಂದೆನಸುತ್ತೆ.

ತುಂಬಾ ರಾತ್ರಿ ಕಳೆದ ಮೇಲೆ ಶ್ಯಾಮನ ನಿದ್ರೆ ಭಂಗವಾಯಿತು. ಒಬ್ಬ ಹಾಕರ್ ಗೇಂಜಿ ಎಂದು ಕೂಗುತ್ತ ಹೋಗುತ್ತಿರುವಂತೆ ಶ್ಯಾಮನಿಗನಿಸಿತು.

ಇಷ್ಟೊಂದು ರಾತ್ರಿ? ಎಂದು ಮನಸ್ಸಿಗೆ ಅನಿಸುತ್ತಲೇ ಹೊದಿಕೆ ಸರಿಸಿ, ಶ್ಯಾಮ ಕಿಟಕಿಯ ಬಳಿ ಬಂದು ನಿಂತುಕೊಂಡ. ಬಲಗಡೆ ದಿಟ್ಟಿಸಿ ನೋಡಿದ, ಶೂನ್ಯ ರಸ್ತೆ. ಎಡಗಡೆ ದಿಟ್ಟಿಸಿದ, ರಸ್ತೆ ಶೂನ್ಯ ಆದರೂ ತುಂಬಾ ದೂರದಿಂದ, ರಾತ್ರಿಯ ಗಂಭೀರ ನೀರವತೆಯಲ್ಲಿ ಆ ಧ್ವನಿ ಕೇಳಿ ಬರುತ್ತದೆ – ಗೇಂಜಿ ಗೇಂಜಿ...

ಸೋನಾಕಾಕಾ. ಶ್ಯಾಮ ಅಭಿಭೂತನಾಗಿ, ತನ್ನ ಕಿವಿಗಳನ್ನು ಮುಚ್ಚಿಕೊಂಡು, ಸ್ತಬ್ಧನಾಗಿ ನಿಂತುಕೊಂಡೇ ಇದ್ದ.

ಅನಂತರ ಶ್ಯಾಮ ಮೆಲ್ಲನೆ ತಲೆ ಎತ್ತಿ ಆಕಾಶದ ಕಡೆ ನೋಡಿದ. ಕಾಲ ಪುರುಷ, ನೆರಳಿನ ರಸ್ತೆ, ನಕ್ಷತ್ರ, ತಾರೆಯಿಂದ ತಾರೆಯನ್ನು ದಾಟುತ್ತಾ, ಪ್ರಾಯಶಃ ಆ ವೃದ್ಧ ಅಂಧ ಸೋನಾಕಾಕಾ ತನ್ನ ಮಾಲನ್ನು ಮಾರಾಟ ಮಾಡಲು ನಡೆದು ಹೋಗುತ್ತ ಇದ್ದಾನೆ.. ಗೇಂಜಿ... ಗೇಂಜಿ...

# 9

ಶ್ಯಾಮ ಮೇಲಿಂದ ಮೇಲೆ, ಒಂದೆರಡು ದಿನ, ವೃತ್ತಪತ್ರಿಕೆಯಲ್ಲಿ ಡಿಸೆಂಬರ್ ಇಪ್ಪತ್ತೊಂದರಂದು ಮೋಟರ್ ಸೈಕಲ್ ದುರ್ಘಟನೆಯಲ್ಲಿ ಗಾಯಗೊಂಡ ಒಬ್ಬ ವ್ಯಕ್ತಿ ಇಂದು ಆಸ್ಪತ್ರೆಯಲ್ಲಿ ಮೃತನಾದನು ಎಂಬ ಸುದ್ದಿಗಾಗಿ ತುಂಬಾ ಹುಡುಕಾಡಿದ. ಇಲ್ಲ, ಯಾವ ಸುದ್ದಿಯೂ ಇಲ್ಲ. ಪ್ರತಿದಿನ ವೃತ್ತಪತ್ರಿಕೆಯ ಮೊದಲ ಪುಟದಲ್ಲಿ ದುರ್ಘಟನೆಯ ಸುದ್ದಿ ಇರುತ್ತೆ. ಎಷ್ಟೊ ಜನ ಇಲಿಗಳು, ಜಿರಲೆಗಳಂತೆ ಅಥವಾ ನೀರು ಸಿಗದೆ ಒಣಗಿ ಬತ್ತಿ ಹೋಗುವ ಗಿಡ ಬಳ್ಳಿಗಳಂತೆ ಸಾಯುತ್ತಾರೆ. ಅದರಲ್ಲಿ ಆಶ್ಚರ್ಯವೇನೂ ಎನಿಸುವುದಿಲ್ಲ. ಈ ರೀತಿ ಸತ್ತು, ಸತ್ತು ಕ್ರಮೇಣ ಪೃಥ್ವಿಯ ಗುಂಪು ಕಡಿಮೆಯಾಗುತ್ತದೆ. ಒಂದು ವೇಳೆ ಕ್ರಮೇಣ ಪೃಥ್ವಿ ನಿರ್ಜನವಾದರೆ? ಈ ರೀತಿ ಯೋಚಿಸುತ್ತಲೇ, ಶ್ಯಾಮನ ಕಣ್ಣು, ಮುಖದಲ್ಲಿ ಆನಂದದಿಂದ, ಉತ್ಸಾಹದ ನಿಟ್ಟುಸಿರು ಹೊರ ಹೊಮ್ಮುತ್ತದೆ. ಆಗ ಆ ಪಟ್ಟಣ ತುಂಬಾ ಸುಂದರವಾಗುತ್ತದೆ. ಇನ್ನೂ ಪೃಥ್ವಿ ರಹಸ್ಯಮಯವಾಗುತ್ತದೆ. ಆಗ ಎಲ್ಲಾ ಮನುಷ್ಯರು ಬೇರೆ ಎಲ್ಲಾ ಇತರ ಮನುಷ್ಯರ ಚಿರಪರಿಚಿತ ಆತ್ಮೀಯ ಜನರಾಗಿ ಬಿಡುತ್ತಾರೆ. ಪೃಥ್ವಿ ಪ್ರೇಮದಿಂದ ತುಂಬಿ ಬಿಡುತ್ತದೆ. ಆಗ ಜನರಲ್ಲಿ ಸ್ಪರ್ಧೆ ಇರುವುದಿಲ್ಲ. ಆಕ್ರಮಣದ ಸುದ್ದಿ ಇರುವುದಿಲ್ಲ. ಆಗ ಮನುಷ್ಯರ ಭಾಷೆಯಿಂದ ಅಶ್ಲೀಲ ಬೈಗಳು ಅಥವಾ ಕಠಿಣ ಶಬ್ದಗಳು ಲೋಪವಾಗಿ ಬಿಡುತ್ತವೆ. ಆಗ ದೂರದ ಮಹಾದೇಶಗಳ ಬಗ್ಗೆ ರೂಪ ಹಾಗೂ ದಂತಕಥೆಗಳು ಹುಟ್ಟಿಕೊಳ್ಳುತ್ತವೆ. ಇನ್ನೂ ಪೃಥ್ವಿಯಲ್ಲಿ ಹಕ್ಕಿ ಚಿಟ್ಟೆ ಹಾಗೂ ಪ್ರಾಣಿಗಳು ಹುಟ್ಟಿಕೊಳ್ಳುತ್ತವೆ. ಸ್ವಚ್ಛ ಸುಗಂಧಿತ

ಗಾಳಿ ಎಲ್ಲೆಡೆಯೂ ಬೀಸುತ್ತದೆ. ಆಗ ಜನ ತಮ್ಮನ್ನು ತಾವೇ ನಿಯಂತ್ರಿಸಿಕೊಳ್ಳುತ್ತಾರೆ. ಜನರು ತಮ್ಮ ಬಂಧುಗಳು ಯಾರು ಎಂದು ಸಹಜವಾಗಿಯೇ ಗುರುತಿಸುತ್ತಾರೆ. ಅಥವಾ ತಮ್ಮ ತಮ್ಮ ಹೆಂಡಂದಿರು ಭಂಡ ಅಥವಾ ಶೈತಾನ ಗಂಡಂದಿರನ್ನು ಗುರುತಿಸಬಹುದು. ಈಗಿನ ತರಹ ಎಲ್ಲಾ ಅವ್ಯವಸ್ಥೆ ಮನಸ್ಸಿಗೆ ಅನ್ನಿಸುವುದಿಲ್ಲ. ಕ್ರಮೇಣ ಒಂದೊಂದಾಗಿ ಪಟ್ಟಣ ಪ್ರಾಂತ್ಯ, ಮಹಾದೇಶ ಎಲ್ಲಾ ಜನಶೂನ್ಯವಾಗಿ ಬಿಡುತ್ತದೆ. ಸಮಸ್ತ ಪೃಥ್ವಿಯಲ್ಲಿ ಶ್ಯಾಮನೊಬ್ಬನನ್ನು ಬಿಟ್ಟು ಬೇರೆ ಇನ್ನ್ಯಾರೂ ಉಳಿಯುವುದಿಲ್ಲ.

ಯೋಚಿಸುತ್ತಾ, ಯೋಚಿಸುತ್ತಾ, ಶ್ಯಾಮ ನೆಲದ ಮೇಲೆ ಬಿಸಾಡಿದ ಸಿಗರೇಟಿನ ತುಂಡಿನ ಮೇಲೆ ಒಮ್ಮೆ ಕಾಲಿಟ್ಟು, ಕೋಣೆಯ ತುಂಬಾ ಠಳಾಯಿಸುತ್ತಾ ಕಾಲಿನಿಂದ ಒದ್ದು ಒಂದು ಪುಸ್ತಕವನ್ನು ಸರಿಸುತ್ತಾನೆ. ಶ್ಯಾಮ ತನ್ನ ಜಟೆಯಂತೆ ಬೆಳೆದಿರುವ ಕೂದಲನ್ನು ಒತ್ತಿ ಹಿಡಿದು, ಊ ಎಂದು ನಕ್ಕು, ತನ್ನ ಗುರುತು ಸಿಗದ ಒಣಗಿದ ಮುಖದೆದುರು ಕನ್ನಡಿಯನ್ನು ಹಿಡಿಯುತ್ತಾನೆ. ಹಾ ಆಗ? ಮನುಷ್ಯರಿಂದ ನಿರ್ಮಿತ ಕಾರ್ಖಾನೆ ಒಳ್ಳೆ ಹಸಿರು ಹುಲ್ಲಿನಿಂದ ಮುಚ್ಚಿ ಹೋಗುತ್ತದೆ. ರೈಲು ಎಂಜಿನ್ನುಗಳು ತುಕ್ಕು ಹಿಡದು ನಿಧಾನವಾಗಿ ಮಣ್ಣಿನಲ್ಲಿ ಬೆರೆತು ಒಂದಾಗಿ ಬಿಡುತ್ತವೆ. ಹಡಗು ನೀರಿನಲ್ಲಿ ಕರಗಿ ನೀರಾಗಿ ಬಿಡುತ್ತದೆ. ಏರೋಪ್ಲೇನಿನ ಮೈ ಮೇಲೆ ಎಲೆ ಬಳ್ಳಿಗಳು ಹಬ್ಬಿಕೊಳ್ಳುತ್ತವೆ. ಉದ್ದುದ್ದ ಮಹಡಿ ಮನೆಗಳ ಮೇಲೆ ಜಾತೀಯ ಪತಾಕೆಗಳ ತರಹ ಅಶ್ವತ್ಥ ಎಲೆಗಳು ಹಾರಾಡುತ್ತವೆ. ನಮ್ಮ ಮರದ ಮನೆಗಳು ಪುನಃ ಉದ್ಧಿತಗೊಳ್ಳುತ್ತವೆ. ಒಬ್ಬ ಮನುಷ್ಯನಿಗೋಸ್ಕರ ಆಗ ಒಬ್ಬ ಸೂರ್ಯನಿರುತ್ತಾನೆ. ಒಬ್ಬ ಚಂದ್ರ, ಆಕಾಶ, ನಕ್ಷತ್ರ ಎಲ್ಲಾ ಬೇರೆಯಾಗಿ ಇರುತ್ತವೆ. ಆಗ ಪೃಥ್ವಿ ಜಲ ಸ್ಥೂಲ ಶೂನ್ಯಮಯ ಜಾಗವಾಗಿ ಬಿಡುತ್ತದೆ.

ಶ್ಯಾಮ ತನ್ನನ್ನೇ ತಾನು ಪ್ರಶ್ನಿಸಿಕೊಳ್ಳುತ್ತಾನೆ. ತನ್ನ ಪ್ರಶ್ನೆಗಳಿಗೆ ತಾನೇ ಉತ್ತರಿಸಿಕೊಳ್ಳುತ್ತಾನೆ.

ಆಗ ನಿನಗೆ ಒಬ್ಬಂಟಿಗ ಎಂದೆನಿಸುವುದಿಲ್ಲವೇ ಶ್ಯಾಮ?

ಇಲ್ಲ. ಶ್ಯಾಮ ತಲೆ ಅಲ್ಲಾಡಿಸುತ್ತಾನೆ.

ಆಗ ಶ್ಯಾಮ ನಿನಗೆ ಯಾರೂ ಬೇಕಾಗುವುದಿಲ್ಲವೇ? ಯಾರಾದರು ಎಂದರೆ ತಾಯಿಯ ತರಹ, ಅಥವಾ ವೃಂದಾ, ಮಾಧವಿ, ಇತುವಿನ ತರಹ, ಯಾರಾದರು ಒಬ್ಬರು ಶಿಶು ಸಂತಾನದ ತರಹ, ಅಥವಾ ಅಣ್ಣ ತಮ್ಮಂದಿರಂತೆ? ಇಲ್ಲ. ಶ್ಯಾಮ ತಲೆ ಅಲ್ಲಾಡಿಸುತ್ತಾನೆ.

ಆಗ ಒಂದು ವೇಳೆ ಮಾತನಾಡುವುದನ್ನು,. ಹಾಡು ಹೇಳುವುದನ್ನು ಅಥವಾ ಭಾಷೆಯ ವ್ಯವಹಾರವನ್ನು ನೀನು ಮರೆತರೆ ರತಿಕ್ರಿಯೆಯನ್ನು ಮರೆತು ಬಿಡುತ್ತೀಯಾ? ಪತ್ರ ಬರೆಯುವುದನ್ನು? ನಿನ್ನನ್ನು ಪ್ರಶಂಸೆ ಮಾಡುವ ಜನ ಆಗ ಇರುವುದಿಲ್ಲ. ನಿನಗೆ ಸುಂದರವಾಗಿ ಕಾಣುವ ಯಾರೊಬ್ಬರೂ ಇರುವುದಿಲ್ಲ. ನಿನ್ನಿಂದ ದೂರ ಸರಿದು ಹೋಗುವಂಥವರೂ ಇರುವುದಿಲ್ಲ. ಹಾಗೇ ಹತ್ತಿರ ಸರಿದು ಬರುವವರೂ ಇರುವುದಿಲ್ಲ.

ಇಲ್ಲ. ಶ್ಯಾಮ ತಲೆ ಅಲ್ಲಾಡಿಸುತ್ತಾನೆ.

ಆ ನಂತರ ಶ್ಯಾಮ ಮೆಲ್ಲನೆ ನಗುತ್ತಾನೆ. ಕನ್ನಡಿಯಲ್ಲಿ ತನ್ನ ಮುಖದ ಕಡೆ ದಿಟ್ಟಿಸಿ ನೋಡಿ, ತನಗೆ ತಾನೇ ಪ್ರಶ್ನಿಸಿಕೊಳ್ಳುತ್ತಾನೆ – ಹೇಳು ನೋಡೋಣ ಈ ರೀತಿ ಯಾರು ಒಂಟಿ ಅಂತ? ಜಲ ಸ್ಥಲ ಶೂನ್ಯಮಯ ಅಖಂಡ ಪರಿಸರದಲ್ಲಿ ಯಾರು ಬಂಧು ಜನ ವಿಹೀನನು? ಯಾರು ಅಂಥವನು. ಯಾರ ಬಳಿ ಅಥವಾ ದೂರ ಹೋಗಲು ಯಾರೊಬ್ಬರೂ ಇಲ್ಲವೋ ಶ್ಯಾಮ ಹೇಳು ನೋಡೋಣ ಯಾರು ಈ ರೀತಿ ಸ್ವಯಂ ಸಂಪೂರ್ಣ ಎಂದು?

ಶ್ಯಾಮ ಗೊಣಗುತ್ತಾನೆ – ನಾನು.

ಪುನಃ ಶ್ಯಾಮ ವೃತ್ತ ಪತ್ರಿಕೆಯನ್ನು ಕೈಗೆತ್ತಿಕೊಳ್ಳುತ್ತಾನೆ. ಹತಾಶ ಭಾವದಿಂದ ತಲೆ ಅಲ್ಲಾಡಿಸುತ್ತಾನೆ – ಇಲ್ಲ. ಆ ವ್ಯಕ್ತಿ ಸತ್ತಿಲ್ಲ. ಅದೂ ಅಲ್ಲದೆ ಆ ವ್ಯಕ್ತಿಗೆ ಏನು ಆಗಿಲ್ಲ. ಅಥವಾ ಅವನು ಕದ್ದು ಮುಚ್ಚಿ ಶ್ಯಾಮನನ್ನು ಗಮನಿಸುತ್ತಾ ಇದ್ದಾನೋ ಏನೋ. ಅವನು ಆ ಒಂದು ಘಳಿಗೆಗೋಸ್ಕರ ನಿರೀಕ್ಷೆ ಮಾಡುತ್ತಾ ಇದ್ದಾನೋ ಏನೋ – ಅದೇ ಯಾವಾಗ ಶ್ಯಾಮ ಯಾವುದಾದರೊಂದು ರಸ್ತೆಯ ತಿರುವಿನಲ್ಲಿ ತಿರುಗುತ್ತಾನೋ ಆಗ ಆ ವ್ಯಕ್ತಿಯ ಕೈಯೊಳಗಿನ ಕನ್ನಡಿಯ ಬೆಳಕಿನಿಂದ ಶ್ಯಾಮನ ಮುಖ ಹೊಳೆಯಬಹುದು.

ಇಲ್ಲ ಆ ವ್ಯಕ್ತಿ ಸತ್ತಿಲ್ಲ. ಶ್ಯಾಮನಿಗೆ ಖಂಡಿತವಾಗಿಯೂ ಗೊತ್ತು. ಅವನು ಕಿಟಕಿಯ ಬಳಿ ಬಂದು ನಿಂತುಕೊಳ್ಳುತ್ತಾನೆ. ಸರಿಯಾಗಿ ರಸ್ತೆಯನ್ನು ದಿಟ್ಟಿಸಿ ನೋಡುತ್ತಾನೆ. ತೀರ ಪರಿಚಿತ, ಡೊಳ್ಳು ಹೊಟ್ಟೆಯ, ಕಡು ಕೆಂಪಿನ ಅಂಚೆ ಪೆಟ್ಟಿಗೆ ರಸ್ತೆಯ ತಿರುವಿನಲ್ಲಿ ನಿಂತಿದೆ. ಲ್ಯಾಂಪ್ ಪೋಸ್ಟಿಗೆ ಸಿಕ್ಕಿಸಿರುವ ಬಾಕ್ಸಿನ ಮೇಲೆ ಸಿನೇಮಾದ ವಿಜ್ಞಾಪನೆಯ ಚಿತ್ರ, ಕೆಲವೊಂದು ಪರಿಚಿತ ಕೆಂಪು, ಹಳದಿ, ಬಿಳಿ ಮನೆಗಳು, ದತ್ತರ ಹೂದೋಟದಲ್ಲಿ ಕಾಗೆ ಹಾರಾಡುತ್ತಿದೆ, ಮೆಟ್ಟಲ ಮೇಲೆ ಐದು ಬೆಕ್ಕಿನ ಮರಿಗಳು ಮಲಗಿವೆ. ಮೇಲಿಂದ ಮೇಲೆ ರಸ್ತೆಯಲ್ಲಿ ಎರಡು ಟ್ಯಾಕ್ಸಿ ಹೊರಟು ಹೋದವು. ಅದರ ಹಿಂದೆ ಮಂದಗತಿಯಲ್ಲಿ ಒಬ್ಬ ಕೈಗಾಡಿಯವ, ರಸ್ತೆಯಲ್ಲಿ ಒಂದಿಬ್ಬರು ಹುಡುಗಿಯರು. ಹಾಗೂ ಶಾಂತಮುಖದ ಕೆಲವು ಜನ, ಒಳ್ಳೇ ಫಸಲಿನಂತೆ ಬೆಳಗಿನ ಬಿಸಿಲು ನಾಲ್ಕೂ ಕಡೆ ಹರಡಿದೆ. ಎಲ್ಲೆಲ್ಲೂ ಸಂದೇಹದ ಲೇಶ ಮಾತ್ರ ಸುಳಿವಿಲ್ಲ. ಆದರೂ ಶ್ಯಾಮನಿಗನಿಸುತ್ತೆ, ಯಾವುದೋ ಮೇಲ್ಬಾವಣೆಯಿಂದ ಎರಡು ಕಣ್ಣುಗಳು ತನ್ನನ್ನು ಕಣ್ಣಲ್ಲಿ ಕಣ್ಣಿಟ್ಟು ಗಮನಿಸುತ್ತಾ ಇದೆ ಎಂದು.

ಯಾರೋ ಒಬ್ಬ ವ್ಯಕ್ತಿ, ಯಾವನ ಮುಖದ ಮೇಲೆ ಶ್ಯಾಮ ಕನ್ನಡಿಯ ಬೆಳಕನ್ನು ಬೀರಿದ್ದನೋ, ಅಂಥವನು ಯಾರೋ ಒಬ್ಬರು ಮಿನುವಿನಂತೆ ನಿಷ್ಠೂರರಾಗಿರುವವರು, ಶ್ಯಾಮ ಅವನ ಮುಖ ನೋಡಿಲ್ಲ. ಮೈ ಬಣ್ಣವನ್ನು ಗಮನಿಸಿಲ್ಲ. ಅವನು ಎಷ್ಟು ಉದ್ದ ಅಥವಾ ಅವನ ಮನೆಯಲ್ಲಿ ಬೇರೆ ಇತರರು ಯಾರ್‍ಯಾರಿದ್ದಾರೆ ಎಂಬುದೂ ಶ್ಯಾಮನಿಗೆ ತಿಳಿದಿಲ್ಲ. ಯಾರಿಗೆ ಗೊತ್ತು ಅವನು ಸುಬೋದ್ ಮಿತ್ರನ ಆಫೀಸಿನ, ಆ ಕುಮಾರಿ ವಿಧವೆಯ ಪ್ರೇಮಿಯೋ ಏನೋ ಅಥವಾ ಅವನು ಮಿನುವಲ್ಲ ಎಂದು ಯಾರು ಹೇಳಬಲ್ಲರು? ಅಥವಾ ಮಿನುವಿನ ಸಂಗಡಿಗರಲ್ಲಿ, ಯಾವನಾದರು ಒಬ್ಬನೋ?

ಶ್ಯಾಮ ಮನದಲ್ಲೇ ಹೇಳುತ್ತಾನೆ – ಆದರೂ ಪೃಥ್ವಿಯಿಂದ ಜನ ಕಡಿಮೆಯಾದರೆ ತುಂಬಾ

ಒಳ್ಳೆಯದು. ಇನ್ನೂ ಹಾಡುಗಳು, ಇನ್ನೂ ಪ್ರೀತಿ, ರಹಸ್ಯ ಹಾಗೂ ಸ್ವಪ್ನಗಳು ಆಗೋದಕ್ಕೆ ಉಪಯೋಗವಾಗಬಹುದು.

ಒಂದು ದಿನ ಎಸ್‌ಪ್ಲ್ಯಾಂಡರ್‌ನ ದೊಡ್ಡ ರಸ್ತೆಯಲ್ಲಿ ಅಕಾಲದ ಮಳೆ ಬಂತು. ಶ್ಯಾಮನಿಗೆ ಗೊತ್ತಿಲ್ಲದೆ ಗುಟ್ಟಾಗಿ ಆಕಾಶದಲ್ಲಿ ಮೋಡ ಗುಂಪು ಗೂಡಿದೆ. ತಟ್ಟನೆ ಶ್ಯಾಮನಿಗನಿಸುತ್ತೆ ತನ್ನ ಸುತ್ತಮುತ್ತ ನಾಲಕ್ಕೂ ಕಡೆ, ಗುಂಪಾಗಿ, ಅಸಂಖ್ಯ ಜಿಂಕೆಗಳು ಓಡಿ ಬರುತ್ತಿರುವ ಆ ಗೊರಸಿನ ಶಬ್ದ ಕೇಳಿ ಬರುತ್ತಿದೆ. ಗಾಳಿ ಬೀಸಿದಂತೆ ಅವನ ಸುತ್ತ ಅವು ಓಡಿ ಹೋಗುತ್ತಿವೆ. ಶ್ಯಾಮ ಓಡಿ ಹೋಗಿ ಒಂದು ಮನೆಯ ಜಗುಲಿಯ ಒಂದು ಹಿಂಡು ಜನ ಜಂಗುಳಿಯ ಮಧ್ಯೆ ನುಗ್ಗಿ ನಿಂತುಕೊಂಡ. ಬಹಳ ದಿನಗಳ ನಂತರ ಉಪಯೋಗಕ್ಕೆ ಬಂದ, ಕೊಳಕು ದುರ್ಗಂಧ ಬೀರುವ, ರುಮಾಲನ್ನು ಶ್ಯಾಮ ಹೊರ ತೆಗೆದು ತನ್ನ ಗಡ್ಡ, ತಲೆಯ ಕೂದಲನ್ನು ಒರೆಸಿಕೊಂಡ. ಅವನಿಗೆ ತಣ್ಣನೆಯ ಗಾಳಿಯಲ್ಲಿ ತುಂಬಾ ಚಳಿ ಎಂದೆನಿಸಿತು. ಅವನು ಗುಂಪಿನ ಮಧ್ಯೆ ದಪ್ಪನೆಯ ವ್ಯಕ್ತಿಯ ಹಿಂದೆ ಹೋಗಿ ನಿಂತುಕೊಳ್ಳುವುದಕ್ಕೋಸ್ಕರ ಆ ತರಹದ ವ್ಯಕ್ತಿಯನ್ನು ಹುಡುಕಾಡಿದ. ಆ ತರಹದ ವ್ಯಕ್ತಿ ಯಾರೂ ಇರಲಿಲ್ಲ. ಸಿಗರೇಟಿಗೋಸ್ಕರ ಜೇಬಿಗೆ ಕೈಹಾಕಿದ; ಒಂದೂ ಸಿಗಲಿಲ್ಲ. ರಸ್ತೆಯ ಕೊನೆಯಲ್ಲಿ ಎಲ್ಲಾದರೂ ಸಿಗರೇಟಿನ ಅಂಗಡಿ ಇದೆಯಾ ಅಂತ ಹುಡುಕಾಡಿದ. ಅಲ್ಲೇ ಹತ್ತಿರ ಅಂಗಡಿ ಇರುವುದು ಕಾಣಿಸಿತು. ವೇಗವಾಗಿ ಗುಂಪಿನ ಮಧ್ಯೆಯಿಂದ ಹೊರ ಬಂದು, ಅಂಗಡಿಯ ಮುಂದೆ ಬಂದು ನಿಂತುಕೊಳ್ಳುತ್ತಲೂ ಶ್ಯಾಮ ಆಶ್ಚರ್ಯಗೊಂಡ. ಸುಮಾರು ನಾಲ್ಕು ಅಡಿ ಅಗಲದ ಒಂದು ಕನ್ನಡಿ ಅಂಗಡಿಯಲ್ಲಿ ತೂಗು ಹಾಕಿದ್ದಾರೆ. ಸಹಸ್ರ ತಲೆ ಹಾಗೂ ಮುಖದ ಅಂಶ ಕಂಡು ಬರುತ್ತಿದೆ. ಶ್ಯಾಮನಿಗೆ ತನ್ನ ಮುಖ ಪರಿಚಯ ಸಿಗದ ಭಿಕ್ಷುಕನಂತೆ ಕಂಡು ಬಂತು. ಹಾಗೇ ಕುತ್ತಿಗೆ ತಿರುಗಿಸಿ ಹಿಂದಿನ ಗುಂಪಿನಲ್ಲಿ ಅರ್ಥಂಬರ್ಥ ಗುರುತು ಸಿಗುವ ಮುಖವೇನಾದರೂ ಕಂಡು ಬರುತ್ತದೆಯೇ ಎಂದು ನೋಡಿದ. ಒಬ್ಬ ಹುಡುಗಿ ಸ್ವಲ್ಪ ಕುತೂಹಲದ ಕಣ್ಣುಗಳಿಂದ ಅವನನ್ನು ನೋಡುತ್ತಿದ್ದಾಳೆ. ಸಿಗರೇಟಿಗೋಸ್ಕರ ಚಿಲ್ಲರೆ ಹಿಡಿದು, ಮುಂದೆ ಚಾಚಿದ ಶ್ಯಾಮನ ಕೈ ಅಲ್ಲೇ ನಿಂತಿತು. ಶ್ಯಾಮನ ಎದೆಯೊಳಗೆ ತಟ್ಟನೆ ಶೂನ್ಯತೆಯ ಮಧ್ಯೆ ಅವನ ಹೃದಯ ಆಶ್ಚರ್ಯಗೊಳ್ಳುತ್ತದೆ. ತಟ್ಟನೆ ಎದೆಯೊಳಗೆ ರೈಲುಗಾಡಿಯ ಶಬ್ದ ಆರಂಭವಾಗುತ್ತದೆ.

ಮುಖ ತಿರುಗಿಸಿ ಶ್ಯಾಮ ಹುಡುಗಿಯ ಕಡೆ ನೋಡುತ್ತಲೂ, ಆ ಹುಡುಗಿ ಅನ್ಯಮನಸ್ಕಳ ತರಹ ಭಂಗಿ ಮಾಡಿ, ತನ್ನ ಕಣ್ಣುಗಳನ್ನು ಬೇರೆ ಕಡೆ ಹೊರಳಿಸಿಕೊಂಡಳು. ಆಮೇಲೆ ನಿಧಾನವಾಗಿ ಏನೂ ಗೊತ್ತಿಲ್ಲದವಳಂತೆ, ಯಾರಿಗೂ ತಿಳಿಯದಂತೆ ತನ್ನ ಮುಖವನ್ನು ಮೆಲ್ಲನೆ ಬೇರೆಡೆ ತಿರುಗಿಸಿಕೊಂಡಳು.

ಸಂಧಿವಾತದ ತರಹ ಶ್ಯಾಮನ ಕೈಕಾಲು ತಣ್ಣಗಾಗಿ ಹೋಯಿತು. ಸಮಸ್ತ ಶರೀರದಲ್ಲಿ ಮುಳ್ಳೆದ್ದವು.

ಶ್ಯಾಮ ಆ ಹುಡುಗಿಯನ್ನು ಗುರುತಿಸುತ್ತಾನೆ. ಆದರೆ ಆ ಅಸಂಭವ, ಸುಂದರ ಮುಖವನ್ನು ಅವನು ಎಲ್ಲಿ ಕಂಡಿದ್ದ? ಅದೇ ಹಣೆಯ ಮೇಲೆ ಇಳಿ ಬಿದ್ದ ಕೂದಲು, ದುಂಡನೆಯ ಮುಖ, ಮುಖದಲ್ಲಿ ನಿಶ್ಶಬ್ದತೆ – ನನಗೆ ಗೊತ್ತು ನಾನು ಇನ್ನೂ ಬದುಕಿದ್ದೇನೆ.

ನನಗೆ ಇನ್ನೂ ವಯಸ್ಸಾಗಿಲ್ಲ. ನಾನು ಕಂಡ ಪೃಥ್ವಿಗಿಂತ, ಕಂಡಿಲ್ಲದ ಪೃಥ್ವಿ ಬಹು ದೊಡ್ಡದಾಗಿ ಹೋಗಿದೆ.

ಆ ಮುಖವನ್ನು ಶ್ಯಾಮ ಎಲ್ಲಿ, ಯಾವಾಗ ಕಂಡಿದ್ದ?

ತಲೆಯೊಳಗೆ ಬಿಸಿ ನೀರು ಸುರಿವಿದಂತೆ ಭಾಸವಾಯಿತು. ಎಲ್ಲಿ?

ಹಿಂದಿನಿಂದ ಹುಡುಗಿಯ ಕೊಂಕಿಸಿದ, ದೀರ್ಘ ಕುತ್ತಿಗೆ ಮಾತ್ರ ಕಂಡು ಬರುತ್ತಿತ್ತು. ಅವಳು ತಿಳಿ ನೀಲಿ ಬಣ್ಣದ ಸೀರೆ ಉಟ್ಟುಕೊಂಡಿದ್ದಾಳೆ. ಕೈ ಎರಡೂ ಎದೆಯ ಮೇಲೆ ಮಡಿಚಿಟ್ಟುಕೊಂಡಿದ್ದಾಳೆ, ಹಿಂದಿನಿಂದ ಸರಿಯಾಗಿ ಕಾಣಿಸುವುದಿಲ್ಲ. ಬಹುಶಃ ಅವಳು ತನ್ನೆದೆಗೆ ಏನಾದರೂ ವಸ್ತುವನ್ನು ಒತ್ತಿ ಹಿಡಿದುಕೊಂಡಿರಬಹುದು. ಒಂದು ವೇಳೆ ಅವಳು ತನ್ನ ವ್ಯಾನಿಟಿ ಬ್ಯಾಗನ್ನೇ ಆ ರೀತಿ ಹಿಡಿದುಕೊಂಡಿದ್ದಾಳೋ ಏನೋ. ಅವಳು ಒಬ್ಬಂಟಿಗಳಾಗಿದ್ದಾಳೋ ಇಲ್ಲವೋ ತಿಳಿಯುವುದಿಲ್ಲ.

ಆಕೆಯದು ಸ್ವಲ್ಪ ಕೆಂಚು ಕೂದಲು. ಆ ಕೂದಲಿನ ಮೇಲೆ ಒಂದೆರಡೂ ಮಳೆಯ ಹನಿ. ಅದರಲ್ಲೂ ಅಹಂಕಾರ ಎದ್ದು ಕಾಣಿಸುತ್ತಿದೆ.

ಶ್ಯಾಮನಿಗೆ ಪುನಃ ಒಂದು ಬಾರಿ ಅವಳ ಮುಖವನ್ನು ನೋಡಬೇಕೆಂದೆನಿಸುತ್ತದೆ. ಆದರೆ ಆ ಹುಡುಗಿ ಮುಖ ತಿರುಗಿಸುವುದಿಲ್ಲ. ಯಾವುದೋ ಒಂದು ಅದೃಶ್ಯ ಕಂಭಕ್ಕೆ ಒರಗಿ ನಿಂತುಕೊಂಡಂತೆ, ಆಕೆಯ ಭಂಗಿ ಆಲಸ್ಯ ಹಾಗೂ ತಿರಸ್ಕಾರಪೂರಿತವಾಗಿದೆ.

ಶ್ಯಾಮ ಮೆಲ್ಲನೆ ಚಿಲ್ಲರೆ ಹಣವನ್ನು ಜೇಬಿಗೆ ಹಾಕಿಕೊಳ್ಳುತ್ತಾನೆ. ಮೆಲ್ಲನೆ ನಕ್ಕು ಗೊಣಗುತ್ತಾನೆ; ನಿನಗೆ ಎಲ್ಲಿ ಸರಿಬೀಳುವುದಿಲ್ಲವೋ, ಅಲ್ಲೇ ಎಲ್ಲೋ ನಾನು ನಿನ್ನನ್ನು ನೋಡಿದ್ದೇನೆ. ಅದಕ್ಕೆ ನನಗೆ ನಿನ್ನನ್ನು ಜ್ಞಾಪಿಸಿಕೊಳ್ಳಲು ತುಂಬಾ ಕಷ್ಟವಾಗುತ್ತಿದೆ, ಆದರೆ ನಿಲ್ಲು – ಮೊದಲು ನಿನ್ನನ್ನು ನಾನು ಸರಿಯಾಗಿ ನೋಡಲು ಬಿಡು –

ಆದರೆ ಶ್ಯಾಮನಿಗೆ ಆಕೆಯ ಬಳಿ ಹೋಗುವ ಸಾಹಸವಾಗುವುದಿಲ್ಲ. ಅವನು ಗುಂಪಿನ ಮಧ್ಯೆ ನುಸುಳಿಕೊಳ್ಳುತ್ತಾನೆ. ಸ್ವಲ್ಪ ಬಗ್ಗಿ, ಗುಂಪನ್ನು ಸರಿಸಿ ಅವನು ಮುಂದೆ ಮುಂದೆ ಹೋಗುತ್ತಾನೆ. ಅರ್ಧ ಚಕ್ರಾಕಾರದ ಸುತ್ತು ಹೊಡೆದು, ಅವನು ಆ ಹುಡುಗಿಯ ಮುಂದೆ ಸರಿದು ಹೋಗುತ್ತಾನೆ. ತನ್ನನ್ನು ಆ ಹುಡುಗಿಯಿಂದ ಆದಷ್ಟು ದೂರವಿರಿಸುವ ಪ್ರಯತ್ನ ಮಾಡುತ್ತಾನೆ. ಗುಂಪಿನ ಜನ ಸಿಟ್ಟಿನಿಂದ ಅವನ ಕಡೆ ದಿಟ್ಟಿಸಿ ನೋಡುತ್ತಾರೆ. ಶ್ಯಾಮ ಅದನ್ನು ಮನಸ್ಸಿಗೆ ಹಚ್ಚಿಕೊಳ್ಳುವುದಿಲ್ಲ.

ವೃದ್ಧ ಪಂಜಾಬಿಯ ಕಾಲನ್ನು ಶ್ಯಾಮ ತುಳಿದು ಬಿಡುತ್ತಾನೆ. ಒಬ್ಬ ಚಿಕ್ಕ ಹುಡುಗನ ಹೊಟ್ಟೆಯ ಮೇಲೆ ಕೈ ಇಟ್ಟು ಶ್ಯಾಮ ಅವನನ್ನು ಸರಿಸುತ್ತಾನೆ ಅಕ್ಕ ಪಕ್ಕದಲ್ಲಿ ನಿಂತುಕೊಂಡು ಮಾತನಾಡುತ್ತಿರುವ ಇಬ್ಬರು ಹುಡುಗರ ಮಧ್ಯೆ ನುಗ್ಗಿ ಶ್ಯಾಮ ಮುಂದೆ ಸರಿದು ಹೋಗುತ್ತಾನೆ. ಅವನ ಕಣ್ಣು ಎಡಗಡೆಗೆ ತಿರುಗಿಸುತ್ತಾನೆ, ಗುರಿಯ ವಸ್ತುವಿನ ಮೇಲೆ ದೃಷ್ಟಿ ಸ್ಥಿರವಾಗುತ್ತದೆ. ಕ್ರಮೇಣ ಶ್ಯಾಮನ ಸುತ್ತ ಮುತ್ತಲಿನ ಜನ ನೆರಳಿನಂತೆ ಏನೋ ಒಂದು ತರಹ, ಯಾವ ತರಹದ ಅಸ್ತಿತ್ವವೂ ಇಲ್ಲವೇನೋ ಎಂಬಂತೆ ಮಿಥ್ಯವಾಗುತ್ತಿದ್ದಾರೆ. ಕೇವಲ

ಹುಡುಗಿಯ ಚಿಕ್ಕ ಕಿವಿಯ ಇಯರಿಂಗ್‌ನಿಂದ ಕೊರಳ ಆಕಾರ ಸ್ವಲ್ಪ ಮೊಂಡು ಮೂಗು, ತುಟಿ ಕ್ರಮೇಣ ದುಂಡು ಮೊಗದ ಆ ಹುಡುಗಿ ಇವನ ಹತ್ತಿರ ಸರಿದು ಬರುತ್ತಿದ್ದಾಳೆ; ಅವನು ಸ್ತಬ್ದನಾಗಿ ನಿಂತು ಬಿಡುತ್ತಾನೆ.

ಶ್ಯಾಮ ಈಗ ಫುಟ್‌ಪಾತಿನ ಮೇಲೆ ನಡೆದು ಬಂದಿದ್ದ. ಅವನ ಮೈ ಮೇಲೆ ಮಳೆಯ ನೀರು ಸುರಿಯುತ್ತಿದೆ. ಗಾಳಿ ಅವನ ರೇಶಿಮೆಯ ಶಾಲನ್ನು ಪತಾಕೆಯಂತೆ ಹಾರಿಸುತ್ತಿದೆ. ಕಿವಿ ಥರ ಥರ ಎಂದೆನ್ನುತ್ತೆ. ಶ್ಯಾಮ ಯಾವುದನ್ನೂ ಲೆಕ್ಕಿಸುವುದಿಲ್ಲ. ತನ್ನ ಸಮಸ್ತ ಶಕ್ತಿಯನ್ನು ಒಟ್ಟುಗೂಡಿಸಿ, ಅವನು ಒಂದು ಕಳ್ಳ ಬೆಕ್ಕಿನಂತೆ, ಆ ಹುಡುಗಿಯ ಕಡೆ ದಿಟ್ಟಿಸಿ ನೋಡುತ್ತಾನೆ. ಹೇಗಾದರೂ ದೂರ ಹೊರಟ ಜಿಂಕೆಯ ಕಾಲಿನ ಸಪ್ಪಳದಂತೆ, ಮಳೆಯ ಶಬ್ದದಂತೆ, ಆಗಿ ಬಿಡಬೇಕು.

ಆ ಹುಡುಗಿಯ ಮೈಯನ್ನು ತಳ್ಳಿಕೊಂಡು ಒಂದಿಬ್ಬರು ಗಂಡಸರು ಹೊರಟು ಹೋಗುತ್ತಾರೆ. ಶ್ಯಾಮನ ಕೈಕಾಲು ಉರಿಯುತ್ತವೆ. ಆ ಗಂಡಸರದೇನು ಸಾಹಸ? ಪುನಃ ಅನೇಕ ದಿನಗಳ ನಂತರ ಶ್ಯಾಮನ ಮನಸ್ಸಿಗೆ ತಾನು ಚೆನ್ನಾಗಿ ಅಲಂಕರಿಸಿಕೊಂಡಿಲ್ಲ ಎಂದು ಅನಿಸುತ್ತದೆ.

ಕೆನ್ನೆಯಲ್ಲಿ ಒಣಗಿದ ಗಡ್ಡ, ತಲೆಯಲ್ಲಿ ಉದ್ದ ಜಟೆಯ ತರಹ ಹುಚ್ಚಾಪಟ್ಟೆ ಬೆಳೆದಿರುವ ಕೂದಲು, ಮೈಮೇಲೆ ಕೊಳೆಯಾದ ಶಾಲು, ಅವನು ತುಂಬಾ ದುರ್ಬಲ, ರೋಗಿಷ್ಟ, ಲಾವಣ್ಯ ಹೀನನಾಗಿ ಬಿಟ್ಟಿದ್ದಾನೆ. ಅವನಿಗೆ ಸಹಜವಾಗಿ ಹುಡುಗಿಯನ್ನು ಹಾದು ಹೋಗುವ ಧೈರ್ಯವಿಲ್ಲ. ಗಾಳಿಯಲ್ಲಿ ತೇಲುವ ಹಾಗೂ ಹಗುರವಾದ ಮನಸ್ಸು ಈಗ ಎಲ್ಲಿ ಹೋಯಿತು? ಅದೇ ಆಟ ಆಡುವ ಛಲ? ಈಗ ಅವನ ಎದೆಯಲ್ಲಿ; ಅದೇ ರೈಲುಗಾಡಿ ಸ್ಟೇಷನ್ ಬಿಟ್ಟು ಹೊರಟು, ಸೇತುವೆ ದಾಟುವ ಶಬ್ದ. ಅವನು ತನ್ನ ಎದೆಯ ಮೇಲೆ ಕೈ ಇಟ್ಟುಕೊಳ್ಳುತ್ತಾನೆ. ಇಲ್ಲ ಈ ರಹಸ್ಯಮಯ, ಪರಿಚಯವಿಲ್ಲದ ಶ್ಯಾಮನನ್ನು, ಶ್ಯಾಮ ಗುರುತಿಸುವುದಿಲ್ಲ. ಅವನ ಶರೀರದೊಳಗೆ, ಮನದೊಳಗೆ ಮೇಘ ಗರ್ಜಿಸುತ್ತಿದೆ. ಮಿಂಚು ಮಿಂಚುತ್ತಿದೆ. ಹಾಗೇ ಸಮಸ್ತ ಶಕ್ತಿ ಒಟ್ಟುಗೂಡಿ ಒಂದು ರೀತಿಯ ಅದ್ಭುತ ಮಳೆ ನಿಶ್ಯಬ್ದವಾಗಿ ಸುರಿಯುತ್ತಿದೆ. ಪ್ರೀತಿಯಿಂದ ಅವನ ಎದೆ ತುಂಬಿ ಬರುತ್ತದೆ. ಈಗ ಅವನ ಶರೀರವನ್ನು ಸ್ಪರ್ಶಿಸಲಾಗುವುದಿಲ್ಲ. ಮೈತುಂಬ ಮುಳ್ಳೆದ್ದಿದೆ.

ಆ ಹುಡುಗಿಯ ಕಣ್ಣಿನೊಂದಿಗೆ ತಟ್ಟನೆ ಶ್ಯಾಮನ ಕಣ್ಣು ಒಂದುಗೂಡುತ್ತದೆ. ಹುಬ್ಬು ಕೊಂಕಿಸಿ ಆ ಹುಡುಗಿ ಶ್ಯಾಮನನ್ನು ಒಂದು ಕ್ಷಣ ನೋಡುತ್ತಾಳೆ. ಆ ನಂತರ ಕಳವಳದಿಂದ ತನ್ನ ಕಣ್ಣುಗಳನ್ನು ಬೇರೆಡೆಗೆ ಸರಿಸಿಕೊಳ್ಳುತ್ತಾಳೆ. ಶ್ಯಾಮ ಪುನಃ ಗುಂಪನ್ನು ಭೇದಿಸಿಕೊಂಡು ಹೋಗಿ ಫುಟ್‌ಪಾತಿನ ಮೇಲೆ ನಿಂತುಕೊಳ್ಳುತ್ತಾನೆ. ಪುನಃ ಆ ಹುಡುಗಿಯ ಮುಖ ಎದುರಾಗುತ್ತದೆ. ಹುಡುಗಿ ಸ್ವಲ್ಪ ಅಲ್ಲಾಡುತ್ತಾಳೆ. ಶೀತದಿಂದಲೋ ಅಥವಾ ಭಯದಿಂದಲೋ ಸ್ವಲ್ಪ ಕಂಪಿಸುತ್ತಾಳೆ. ಅಸಹಾಯಕಳಂತೆ ನಾಲಕ್ಕೂ ಕಡೆ ತಿರುಗಿ ನೋಡಿ ಸಿಟ್ಟಿನಿಂದ ತುಟಿ ಕಚ್ಚುತ್ತಾಳೆ. ಹಾಗೇ ಕಾಲಿನಿಂದ ನೆಲದ ಮಣ್ಣನ್ನು ಕೆದಕುತ್ತಾಳೆ.

ತಟ್ಟನೆ ತನ್ನ ಸುತ್ತಮುತ್ತ ಮಾತುಕತೆ ನಿಂತು ಹೋಗಿದೆ ಎನ್ನುವುದು ಶ್ಯಾಮನಿಗೆ ಗೊತ್ತಾಗುತ್ತದೆ. ಅನೇಕರು ಇವನನ್ನೇ ಗಮನಿಸುತ್ತಿದ್ದಾರೆ. ಕೆಲವರು ತಮ್ಮ ಮಾತುಕತೆ ನಿಲ್ಲಿಸಿ, ಕುತ್ತಿಗೆ ತಿರುಗಿಸಿ ಅವನ ಕಡೆಯೇ ಎವೆ ಇಕ್ಕದೆ ನೋಡುತ್ತಿದ್ದಾರೆ. ಅವನ ಕಣ್ಣು, ಮುಖದಲ್ಲಿ ಕುತೂಹಲ ಎದ್ದುಕಂಡು ಬರುತ್ತಿದೆ. ಶ್ಯಾಮ ತುಂಬಾ ಆಶ್ಚರ್ಯಗೊಳ್ಳುತ್ತಾನೆ. ಅವನ ಕೈಕಾಲು ಕಂಪಿಸುತ್ತವೆ. ಅವನು ತನ್ನನ್ನೇ ತಾನು ನೋಡಿಕೊಳ್ಳುತ್ತಾನೆ. ಅವನು ಏನು ಮಾಡುತ್ತಾ ಇದ್ದಾನೆ? ಎಷ್ಟು ಹೊತ್ತು ಅವನು ಏನು ಮಾಡುತ್ತ ಇದ್ದ?

ಚಕಿತನಾಗಿ ಶ್ಯಾಮ ಮುಖ ತಿರುಗಿಸಿಕೊಳ್ಳುತ್ತಾನೆ. ಅವನ ಮೂಗು, ಮುಖದಲ್ಲಿ ರಕ್ತ ನುಗ್ಗಿ ಬಂದಂತಾಗುತ್ತದೆ. ಅವಮಾನದಿಂದ ಅವನ ಶರೀರ ಕಂಪಿಸುತ್ತದೆ. ಬೇಗನೆ ಅವನು ಫುಟ್‌ಪಾತ್ ಬಿಟ್ಟು, ಮಳೆಯಲ್ಲೇ ರಸ್ತೆಗಿಳಿಯುತ್ತಾನೆ. ಮುಂದೆ ಮುಂದೆ ನಡೆಯುತ್ತಾನೆ.

ಅನಂತರ ಕೇವಲ ಜಿಂಕೆಗಳು ಹಾಗೂ ಜಿಂಕೆಗಳು, ನಾಲ್ಕು ಕಡೆ ಅಸಂಖ್ಯ ಅದೃಶ್ಯ ಓಡುತ್ತಿರುವ ಜಿಂಕೆಗಳ ಕಾಲಿನ ಗೊರಸಿನ ಶಬ್ದ. ಎಲ್ಲಿಯವರೆಗೂ ಕಣ್ಣು ಕಾಣಿಸುತ್ತೋ ಅಲ್ಲಿ ಹೊಗೆಯಂತಿರುವ ನೀರಿನ ಕಣದಲ್ಲಿ ಮುಳುಗಿರುವ ಅಂಧಕಾರದ ರಸ್ತೆ. ಬಯಲು ದಿಗಂತ, ರಹಸ್ಯಮಯವಾಗಿ ಬಿಟ್ಟಿದೆ. ಶ್ಯಾಮ ನಿಶ್ಚಿತ ಮನಸ್ಸಿನಿಂದ ಮೆಲ್ಲನೆ ನಡೆಯುತ್ತಲೇ ಇರುತ್ತಾನೆ. ಅವನ ತಲೆ, ಗಲ್ಲ, ಗಡ್ಡದಿಂದ, ಮಣ್ಣಿನ ಹುಳದಂತೆ, ಹಿಮದ ನೀರಿನ, ಕೆಲವೊಂದು ರೇಖೆ ಹರಿದು ಬಂದಿದೆ. ಚಳಿಯಿಂದ ಅವನ ಮೈ ಕಂಪಿಸುತ್ತದೆ. ಆದರೂ ಅವನಿಗೆ ತನ್ನ ಮೈಯೊಳಗೆ ಉಷ್ಣ ರಕ್ತಧಾರೆ ಹರಿಯುತ್ತಿರುವಂತೆ ಅನಿಸುತ್ತದೆ. ಎದೆಯಲ್ಲಿ ಇಳಿತ – ಭರತ, ತಲೆಯಲ್ಲಿ ಸಿಡಿಲಿನ ತರಹ ಒಂದೇ ಪ್ರಶ್ನೆ – ನೀನು ಯಾರು? ನೀನು ಯಾರು?

ತಟ್ಟನೆ ಶ್ಯಾಮನಿಗೆ ನೆನಪಾಗುತ್ತಿದೆ – ಎರಡು ಬಿಳಿಯ ಕೈಗಳು, ಟೆಲಿಫೋನಿನಿಂದ ನೋಟ್ ಪುಸ್ತಕಕ್ಕೆ ತ್ವರಿತಗತಿಯಿಂದ ಗೋರಂಟಿ ಬಣ್ಣದ ಮೇಜಿನ ಮೇಲೆ ಹರಿದಾಡುತ್ತಿದೆ, ಲೀಲಾ!

ಈಯಾಃ ಎಂದು ಶ್ಯಾಮ ನಗುತ್ತಾನೆ. ಲೀಲಳೇ! ಅಯ್ಯೋ ಈಶ್ವರ, ನಿನಗೋಸ್ಕರವೇ ನಾನು ಮಳೆಯಲ್ಲೂ ರಸ್ತೆಯ ಮೇಲಿಳಿದು ಬಂದೆ. ಚಳಿಯನ್ನೂ ಕೂಡಾ ಸಹಿಸಿದೆ.

ತಟ್ಟನೆ ಶ್ಯಾಮ ಎರಡೂ ಕೈಗಳನ್ನು ಮೇಲೆತ್ತಿ ಅನ್ಯಮನಸ್ಕನಾಗಿ, ಹುಚ್ಚನಂತೆ ಪುನಃ ನಗುತ್ತಾನೆ – ಎಲ್ಲಾ ಸರಿ ನೀನೇ ಗೆದ್ದಂತೆ.

ಅನೇಕ ದಿನಗಳ ನಂತರ ತಾನು ಜೀವಂತನಾಗಿದ್ದೇನೆ ಎಂದು ಶ್ಯಾಮನಿಗನಿಸುತ್ತದೆ. ಅವನಿಗೆ ತನ್ನ ಎದೆಯೊಳಗಿನಿಂದ, ಕಾರ್ಖಾನೆಯ ಯಂತ್ರಗಳು ಚಲಿಸುತ್ತಿರುವ ಶಬ್ದ ಕೇಳಿ ಬರುತ್ತದೆ. ಅವನು ಚೆನ್ನಾಗಿಯೇ ಜೀವಂತನಾಗಿದ್ದಾನೆ.

ರಾತ್ರಿ ಹಾಸಿಗೆಯ ಮೇಲೆ ಮಲಗಿ ಅರೆ ನಿದ್ರೆಯಲ್ಲಿ ಅವನು ತನ್ನ ತಲೆಗಿಂಬಿಗೆ ಮೂಗು ತಿಕ್ಕಿ ನಕ್ಕು ಒಂದು ಹೆಸರನ್ನು ಹೇಳುತ್ತಾನೆ.

ಲೀಲಾ ಆಃ – ಹಾಃ

# 10

ಶ್ಯಾಮ ತನ್ನನ್ನು ತಾನು ಬಚ್ಚಿಟ್ಟುಕೊಳ್ಳುವ ಯಾವ ಪ್ರಯತ್ನವನ್ನೂ ಮಾಡಲಿಲ್ಲ. ಬಿಸಿಲಿನಲ್ಲಿ, ರಸ್ತೆಯ ಮಧ್ಯೆ ಅವನು ಕಂಬಕ್ಕೆ ಒರಗಿಕೊಂಡು ಹಾಗೇ ನಿಂತುಕೊಂಡ. ಸ್ವಲ್ಪ ದೂರದಲ್ಲಿ ಗಾಜಿನ ಬಾಗಿಲು, ಶ್ಯಾಮ ಕಣ್ಣಿನಿಂದ ತನ್ನ ತಂಪು ಕನ್ನಡಕವನ್ನು ತೆಗೆದ. ಮಧ್ಯಾಹ್ನದ ಮೂರರ ತೀವ್ರ ಬಿಸಿಲು ಕಣ್ಣನ್ನು ಕುಕ್ಕಿದವು. ಅವನಿಗೆ ಏನೂ ಸರಿಯಾಗಿ ಕಾಣಿಸಲಿಲ್ಲ. ಅವನು ತನ್ನ ಕೈಗಳಿಂದ ತನ್ನ ಕಣ್ಣುಗಳನ್ನು ಮರೆಮಾಡಿಕೊಂಡ. ಅನಂತರ ಅವನಿಗೆ ನೆರಳಿನ ಪ್ರತಿಮೆಯಂತೆ ಲೀಲಾ ಕಾಣಿಸಿದಳು.

ಮದರಂಗಿನ ಕೌಂಟರಿನ ಆ ಭಾಗದಲ್ಲಿ ಕುಳಿತ ಲೀಲಳನ್ನು ಮೊದಲು ಗುರುತಿಸಲಾಗಲಿಲ್ಲ. ಅವಳ ಮುಖ ಕಣ್ಣು ಅಸ್ಪಷ್ಟವಾಗಿ ಕಾಣಿಸುತ್ತಿತ್ತು. ಲೀಲಳ ಹಿಂದಿನ ಗೋಡೆಯ ಮೇಲೆ ಫ್ಲೋರೆಸೆಂಟ್ ದೀಪ ಉರಿಯುತ್ತಿದೆ. ಅದೇ ಎರಡು ಕೈಗಳು, ಎರಡು ಸ್ವರದಲ್ಲಿ ಬಂಧಿಸಿದಂತೆ, ಸ್ವಯಂಕ್ರಿಯೆಯಲ್ಲಿ ಕೆಲಸ ಮಾಡುತ್ತಿರುವುದು ಕಾಣಿಸಿತು. ಹಣೆಯ ಮೇಲೆ ಹಾರಾಡುತ್ತಿರುವ ಕೂದಲನ್ನು ಸರಿಸುತ್ತಾಳೆ, ಬಲಗೈಯಲ್ಲಿ ಪೆನ್ಸಿಲ್ ಎತ್ತಿಕೊಳ್ಳುತ್ತಾಳೆ, ಎಡಗೈಯಲ್ಲಿ ಟೆಲಿಫೋನ್, ರಿಸೀವರನ್ನು ಕಿವಿಗೆ ಒತ್ತಿ ಹಿಡಿದು, ಕಾತರದಿಂದ ಕೇಳುತ್ತಿದ್ದಾಳೋ ಅಥವಾ ಸ್ವಲ್ಪ ಕಾತುರದಿಂದ, ಮಧುರ ಧ್ವನಿಯಲ್ಲಿ ಹ...ಲೋ ಎಂದೆನ್ನುತ್ತಿದ್ದಾಳೋ ಏನೋ ಎರಡೂ ಕಣ್ಣುಗಳಲ್ಲಿ ಸ್ವಲ್ಪ ನಿದ್ರೆಯ ಛಾಯೆ. ಹುಬ್ಬೆತ್ತಿ ಅವಳೆದುರಿನ ನಾನಾ ರೀತಿಯ ವ್ಯಕ್ತಿಗಳೊಂದಿಗೆ ಮಾತನಾಡುತ್ತಿದ್ದಾಳೆ ನಕ್ಕು ಅತಿಥಿಗಳಿಗೆ ಉತ್ತರಿಸುತ್ತಿದ್ದಾಳೆ. ಆದರೂ ಇದ್ಯಾವುದರಿಂದಲೂ ಅವಳನ್ನು ಈ ಭೂಮಿಯಲ್ಲಿ ವ್ಯವಹರಿಸುವ ಹುಡುಗಿ ಎಂದು ಹೇಳಲಾಗುವುದಿಲ್ಲ. ಶ್ಯಾಮನಿಗೆ ಅವಳು ಊಟ, ಬಟ್ಟೆ, ಉನ್ನತಿಗೋಸ್ಕರ, ಅಥವಾ ಕೂಡಿಡುವುದಕ್ಕೋಸ್ಕರ ಕೆಲಸ ಮಾಡುತ್ತಿದ್ದಾಳೆ ಎಂದು ಅನ್ನಿಸುವುದಿಲ್ಲ. ಅವಳು ಒಂದು ಹೆಸರು, ಅಥವಾ ಪರಿಚಯದೊಂದಿಗೆ ಬಂಧಿಯಾಗಿದ್ದಾಳೆ ಎಂದು ಕೂಡ ಅನಿಸುವುದಿಲ್ಲ.

ಶ್ಯಾಮ ಒಂದು ನೇರ ಮರದ ತರಹ ಹಿಂದೆ ಸರಿದು ನಿಂತುಕೊಂಡಿದ್ದನು. ಅವನ ಮುಖದ ಮೇಲೆ ಮೃದು ನಗೆ, ಅವನ ಕಣ್ಣ ಮುಂದೆ ನೆರಳಿನಂತೆ ಮಿಥ್ಯ ಜನರು, ಯಾವ ಅಸ್ತಿತ್ವವೂ ಇಲ್ಲದೆ, ಬ್ರ್ಯಾಕೇಟ್‌ನಲ್ಲಿ ಜೋತಾಡುವ ಬಟ್ಟೆಗಳ ತರಹ ಓಡಾಡುತ್ತಿದ್ದಾರೆ. ಶ್ಯಾಮನಿಗೆ ತನ್ನ ಅಕ್ಕ ಪಕ್ಕದಲ್ಲಿನ ಯಾವ ಶಬ್ದವೂ ಕೇಳಿಸುವುದಿಲ್ಲ. ಏನೋ ಒಂದು ರೀತಿ ಅವನು ಮರಗಟ್ಟಿದ ತಣ್ಣನೆಯ ಮನೆಯಲ್ಲಿ ನಿಂತುಕೊಂಡಿದ್ದಾನೇನೋ ಎನ್ನುವಂತೆ ನಿಂತುಕೊಂಡಿದ್ದಾನೆ. ಎದುರಿನ ಗಾಜಿನ ಬಾಗಿಲನ್ನು ದೂಡಿಕೊಂಡು ಜನ ಒಳಗೆ, ಹೊರಗೆ, ಹೋಗಿ ಬಂದೂ

ಮಾಡುತ್ತಿದ್ದಾರೆ. ಆದರೆ ಶ್ಯಾಮ ಅವರ್ಯಾರ ಮುಖವನ್ನೂ ಸರಿಯಾಗಿ ನೋಡುವುದಿಲ್ಲ. ಇಬ್ಬರು ಭಿಕ್ಷುಕರು ಬಂದು ಶ್ಯಾಮನ ಎದುರು ಗೋಗರೆಯುತ್ತಾರೆ. ಶ್ಯಾಮ ಅವರು ಗಂಡಸರೋ, ಹೆಂಗಸರೋ ಎಂದು ಗಮನಿಸದೆ ಜೇಬಿನಿಂದ ಹಣ ತೆಗೆದು ಅವರಿಗೆ ಕೊಡುತ್ತಾನೆ. ಎಷ್ಟು ಹಣ, ಏನು ಕೊಟ್ಟನೋ ಎನ್ನುವುದೂ ಅವನಿಗೆ ತಿಳಿಯುವುದಿಲ್ಲ. ಶ್ಯಾಮ ಒಮ್ಮೆಯಾದರೂ ಗಂಟೆ ಎಷ್ಟು ಎಂದು ಗಡಿಯಾರದ ಕಡೆ ನೋಡುವುದಿಲ್ಲ. ಈ ಪ್ರಶ್ನೆ ಅವನಿಗೆ ಅರ್ಥವಿಲ್ಲದ್ದು ಎಂದೆನಿಸುತ್ತದೆ. ಕೇವಲ ತನ್ನ ಎರಡು ಕಾಲಿನ ಬಲದಿಂದ ಅವನು ಇಲ್ಲಿ ನಿಂತುಕೊಂಡಿದ್ದಾನೆ. ಮಗು ಹುಟ್ಟುವ ಮೊದಲು ಒಂದು ರೀತಿಯ ನೋವಾಗುವಂತೆ, ಅವನ ಮೈಯಲ್ಲಿ ಕಂಪನವಾಗುತ್ತಿದೆ. ಆ ರೇಶಿಮಿಯ ಶಾಲಿನ ಒಳಗೆ ಅವನ ಇಡೀ ದೇಹ ಶಕ್ತಿಯುತವಾಗಿದೆ. ಎಲ್ಲಾ ನರಗಳು ಕಬ್ಬಿಣದಂತೆ ಕಠಿಣವಾಗಿವೆ. ನಡು ನಡುವೆ ಅವನ ದವಡೆ ಚುರುಗುಟ್ಟುತ್ತದೆ. ಕ್ರಮೇಣ ಎದೆಯೊಳಗೆ ನಿಶ್ಶಬ್ದವಾಗಿ, ಅದೃಶ್ಯ ದೃಷ್ಟಿಪಾತವಾಗುತ್ತಿದೆ. ಹಾಗೇ ಜಿಂಕೆಗಳು ಓಡುವ ಶಬ್ದ. ಅವನಿಗೆ ತಾನು ಇನ್ನು ಬದುಕಿ ಉಳಿದಿದ್ದೇನೆ ಎಂದೆನಿಸುತ್ತದೆ.

ಲೀಲಾ ಸುಮ್ಮನೆ ಕೆಲಸ ಮಾಡುತ್ತಲೇ ಇದ್ದಾಳೆ, ಅವಳ ಕೆಲಸ ಮಾಡುವ ಎರಡೂ ಕೈಗಳು ಸರಿದಾಡುತ್ತಿವೆ. ಅವಳ ತುಟಿ ಸುಮ್ಮನೆ ಮಾತನಾಡುತ್ತಲೇ ಇದೆ. ಶ್ಯಾಮನಿಗೆ ಯಾವುದೂ ಅರ್ಥವಾಗುವುದಿಲ್ಲ. ಆದರೂ ಏನೋ ಒಂದು ತರಹ ಅರ್ಥವಾದಂತೆ ಅನಿಸುತ್ತದೆ – ಹೌದು ನನಗೆ ಗೊತ್ತು ನೀನು ಏನು ಹೇಳುತ್ತೀ ಅಂತ ನೀನು ದೂರದಲ್ಲಿ ನಿಂತಿರುವ ವ್ಯಕ್ತಿಗೆ ಏನೋ ಹೇಳಬಯಸುತ್ತಿದ್ದಿ. ನೋಡು ನಾನು ಹೇಗೆ ಬದುಕಿದ್ದೇನೆ. ನೋಡು ನನಗಿನ್ನೂ ವಯಸ್ಸಾಗಿಲ್ಲ, ನನಗೆ ಈ ಜೀವನ ಇನ್ನೂ ರಹಸ್ಯಮಯ, ನಾನು ಪ್ರೇಮಿಸಿಲು ಕಲಿತಿದ್ದೇನೆ...

ಹಲವೊಮ್ಮೆ ಅವನ ಅನ್ಯಮನಸ್ಕ ಕಣ್ಣುಗಳು ರಸ್ತೆಯ ಮೇಲೆ ಹರಿದಾಡುತ್ತಿವೆ. ಹಾಗೇ ನಿಂತು ಅವನು ಒಬ್ಬನ ಕಪ್ಪು ಕೋಟನ್ನು ಒಂದು ಮರದ ಎಲೆಯನ್ನು, ಒಂದೆರಡು ಕಾಗೆಯನ್ನು ನೋಡುತ್ತಾನೆ. ಶ್ಯಾಮ ಕಾಯುತ್ತಾ ಇದ್ದಾನೆ. ಈ ಜನಜಂಗುಳಿಯ ರಸ್ತೆಯಲ್ಲಿ ಇಷ್ಟು ಜನರ ಮಧ್ಯೆ ನೀನು ಒಂದು ಸಲವಾದರೂ ನನ್ನನ್ನು ಗಮನಿಸುತ್ತಿಯಾ?

ಶ್ಯಾಮನಿಗೆ ನಿಧಾನವಾಗಿ ಬೆಳಕು ಕಡಿಮೆಯಾಗುತ್ತಿದೆ ಎಂದೆನಿಸುತ್ತದೆ. ಕತ್ತಲಾಗಿ ಬಿಟ್ಟರೆ ಲೀಲಾಳಿಗೆ ಅವನು ಕಾಣಿಸುವುದಿಲ್ಲ. ಆದರೆ ಆ ಉಜ್ವಲ ಕೋಣೆಯ ಮಧ್ಯೆ ಶ್ಯಾಮನಿಗೆ ಲೀಲಾ ಇನ್ನೂ ಸ್ಪಷ್ಟವಾಗಿ ಕಾಣಿಸುತ್ತಾಳೆ. ಶ್ಯಾಮ ಮುಖದಲ್ಲಿ ನಗೆ ತಂದುಕೊಂಡು, ಋಜು ಶಕ್ತಿಯುತ ಶರೀರದಿಂದ ಕಾಯುತ್ತ ನಿಂತುಕೊಂಡಿದ್ದ. ನಿಂತುಕೊಂಡೇ ಇದ್ದರೇನೇ ಏನಾದರೂ ಘಟನೆ ಘಟಿಸುವುದು ಇಲ್ಲದಿದ್ದರೆ ಏನೂ ಘಟಿಸುವುದಿಲ್ಲ. ಇಲ್ಲದಿದ್ದರೆ ವಿಸ್ಫೋಟದ ತರಹ ಏನಾದರೂ ಘಟಿಸುತ್ತದೆ.

ಶ್ಯಾಮನಿಗೆ ಗೊತ್ತಿಲ್ಲ – ಇಲ್ಲದಿದ್ದರೆ

ಲೀಲಳ ಮುಖವನ್ನು ಮರೆ ಮಾಡಿ, ಒಬ್ಬ ವ್ಯಕ್ತಿ, ಒಂದು ಕ್ಷಣ ಕೌಂಟರಿನ ಮೇಲೆ ಬಗ್ಗಿ ನಿಂತು ಕೊಂಡಿದ್ದವನು ಅನಂತರ ಸರಿದು ಹೋದನು. ಎತ್ತರದ ಒಬ್ಬ ವ್ಯಕ್ತಿ ಶ್ಯಾಮನ ಎದುರಿನ ರಸ್ತೆಯಲ್ಲಿ ನಿಂತುಕೊಂಡು ಸಿಗರೇಟ್ ಸೇದುತ್ತಿದ್ದನು. ಪುನಃ ಒಂದೆರಡು ಕ್ಷಣ ಲೀಲಳ ಮುಖ

ಮರೆಯಾಯಿತು. ಸಿಟ್ಟಿನಿಂದ ಶ್ಯಾಮನಿಗೆ ತಾನು ತಟ್ಟನೆ ಎಂಟು ಫೂಟ್ ಎತ್ತರವಾಗಬಾರದೇ ಎಂದೆನಿಸಿತು. ಈ ರೀತಿ ಇಚ್ಛೆಯಾಗುತ್ತಿರುವಂತೆಯೇ ಆ ವ್ಯಕ್ತಿ ಬೇಗನೆ ಸರಿದು ಹೋದ. ಮೆಲ್ಲನೆ ಶ್ಯಾಮ ಚಕಿತನಾದ. ಆ ವ್ಯಕ್ತಿ ಮಿನು ಅಲ್ವಾ... ಪರ ಕ್ಷಣದಲ್ಲೇ ಆ ವ್ಯಕ್ತಿಯನ್ನು ಮರೆತು ಶ್ಯಾಮ ಲೀಲಳ ಮೇಲೆ ಕಣ್ಣಿಟ್ಟ. ಲೀಲಳ ಅಕ್ಕಪಕ್ಕ ಕ್ರಮೇಣ ಬೆಳಕು ಉಜ್ವಲವಾಗುತ್ತಿದೆ, ಶ್ಯಾಮನ ಸುತ್ತಲೂ ಕತ್ತಲು ಆವರಿಸುತ್ತಿದೆ. ಇನ್ನೂ ಸ್ವಲ್ಪ ಹೊತ್ತಾದರೆ ಅಂಧಕಾರ ಶ್ಯಾಮನನ್ನು ಸಂಪೂರ್ಣವಾಗಿ ಸುತ್ತುವರಿಯುತ್ತದೆ. ಅದೇ ಹೊತ್ತಿಗೆ ಲೀಲಾ ನೋಟ್ ಪುಸ್ತಕವನ್ನು ಒಳಗೆ ಸರಿಸಿಡುವಾಗ ತಡವರಿಸುತ್ತಾಳೆ. ಎಡಗೈಯಲ್ಲಿ ಟೆಲಿಫೋನ್ ಹಿಡಿದು ಮುಖ ಎತ್ತುತ್ತಲೂ ಅವಳ ಕಣ್ಣು ಶ್ಯಾಮನ ಮೇಲೆ ನೆಡುತ್ತವೆ. ಅವಳು ಮುಖವನ್ನು ಸ್ವಲ್ಪ ವಾರೆ ಮಾಡಿ ಶ್ಯಾಮನನ್ನೇ ನೋಡುತ್ತಿದ್ದಳು. ಜೋರಾಗಿ ಕಿರುಚಿಕೊಳ್ಳುವ ಮೊದಲು ಮಾಡುವಂತೆ, ಅವಳು ತನ್ನ ಬಲಗೈಯನ್ನು ಮುಖದ ಎದುರು ಹಿಡಿದಳು. ಈಗಲೇ ಅವಳು ಕಿರುಚಿ ಜನರನ್ನು ಗುಂಪು ಕೂಡಿಸುವಂತೆ, ಏನೋ ಒಂದು ರೀತಿಯ ಭಯಂಕರ ವಸ್ತುವನ್ನು ಕಾಣುವಂತೆ, ಅವಳು ಶ್ಯಾಮನ ನೆರಳಿನಂತೆ ಇರುವ ಆಕೃತಿಯನ್ನು ದಿಟ್ಟಿಸಿ ನೋಡುತ್ತಿದ್ದಳು. ಅನಂತರ ಜಡವಾಗಿ ಅವಳ ಕೈಗಳು ಕೆಳಗಿಳಿದವು. ಟೇಬಲಿನ ಮೇಲಿನ ಅದೇ ಹಳದಿ ಪೆನ್ಸಿಲನ್ನು ಅವಳ ಕೈ ಹೆದರಿಕೆಯಿಂದ ಒತ್ತಿ ಹಿಡಿದವು. ಅವಳು ಕಣ್ಣು ಮುಚ್ಚಿ, ತುಟಿ ಕಚ್ಚಿ ಟೆಲಫೋನಿನಲ್ಲಿ ಮಾತನಾಡುತ್ತಿದ್ದಳು.

ಶ್ಯಾಮ ಒಂದಿಷ್ಟೂ ಅಲ್ಲಾಡಲಿಲ್ಲ. ಅವನು ಮೆಲ್ಲನೆ ನಕ್ಕ. ಶರೀರದೊಳಗೆ ಪುನಃ ಕಾರ್ಖಾನೆಯ ನಿರತ ಶಬ್ದ. ಅವನು ಚೆನ್ನಾಗಿಯೇ ಬದುಕಿದ್ದಾನೆ. ಶ್ಯಾಮ ಎದೆಯ ಮೇಲೆ ಕೈ ಇಟ್ಟುಕೊಳ್ಳುತ್ತಾನೆ. ಒಂದು ರಹಸ್ಯಮಯ ರೈಲುಗಾಡಿ, ದೂರದ ಒಂದು ಅಪರಿಚಿತ ಸೇತುವೆಯನ್ನು ದಾಟಿ ಹೋಗುತ್ತಿದೆ.

ಲೀಲಾ ಅದೇ ಭಂಗಿಯಲ್ಲಿ ಟೆಲಿಫೋನ್ ಕೆಳಗಿಟ್ಟು ಬಿಟ್ಟಳು. ಕೌಂಟರಿನ ಮೇಲೆ ಮೆಲ್ಲನೆ ಒರಗಿದಳು. ತುಂಬಾ ಬಗ್ಗಿಸಿದ ಮುಖ ಹಾಗೂ ಕೊಂಕಿಸಿದ ಕೊರಳಿನಲ್ಲಿ, ಅಹಂಕಾರ ಹಾಗೂ ತಿರಸ್ಕಾರದ ಛಾಯೆ ಎದ್ದು ಕಾಣಿಸುತ್ತಿದೆ ಎನ್ನುವುದನ್ನು ಶ್ಯಾಮ ಗಮನಿಸಿದ. ಇಂದು ಕೂಡ ತಾನು ಚೆನ್ನಾಗಿ ಅಲಂಕರಿಸಿಕೊಂಡಿಲ್ಲವಲ್ಲ ಎಂದು ಶ್ಯಾಮನಿಗೆ ದುಃಖವಾಗುತ್ತದೆ. ಆದರೆ ಇಂದು ಶ್ಯಾಮ ಚೆನ್ನಾಗಿ ಅಲಂಕರಿಸಿಕೊಂಡಿದ್ದರೆ ಲೀಲ ಅವನನ್ನು ಗುರುತಿಸುತ್ತಲೇ ಇರುತ್ತಿರಲಿಲ್ಲ. ಕೆನ್ನೆಯ ಮೇಲೆ ಒಣಗಿದ ಗಡ್ಡ, ಮೈ ಮೇಲೆ ರೇಶಿಮೆಯ ಶಾಲು. ಪಂಚೆ ಹಾಗೂ ಸ್ಯಾಂಡಲ್ ಹಾಕಿಕೊಂಡ ಅವನ ಈ ವೇಶ, ನಿಯಮದಂತೆ ಲೀಲಳ ಬಳಿ ಈ ರೀತಿಯೇ ಇರಬೇಕು. ಇಲ್ಲದಿದ್ದರೆ ಲೀಲ ಅವನನ್ನು ಇನ್ನೂ ನಾಲ್ಕೈದು ಜನರೊಡನೆ ಸೇರಿಸಿಬಿಡುತ್ತಾಳೆ. ಆಗ ಅವಳು ಭಯದಿಂದ ಪೆನ್ಸಿಲ್ ಹಿಡಿದುಕೊಳ್ಳುವುದಿಲ್ಲ. ಕಣ್ಣು ಮುಚ್ಚಿಕೊಳ್ಳವುದಿಲ್ಲ. ಮುಖ ತಗ್ಗಿಸಿ ಮರೆ ಮಾಡಿ ಕೊಳ್ಳುವುದಿಲ್ಲ ಎಂದು ಶ್ಯಾಮನಿಗೆ ಚೆನ್ನಾಗಿ ಗೊತ್ತು.

ಶ್ಯಾಮ ಮೆಲ್ಲನೆ ನಗುತ್ತಾನೆ. ಅವನು ಅದೇ ರೀತಿ ನಿಂತುಕೊಂಡೇ ಇರುತ್ತಾನೆ. ರಸ್ತೆಯ ದೀಪ ಪಕ್ಕನೆ ಹತ್ತಿಕೊಂಡಿತು. ಶ್ಯಾಮನೆದುರು ಒಬ್ಬ ವ್ಯಕ್ತಿ ಬಂದು. ಕಳ್ಳತನದ, ತುಂಬಾ

ಬೆಲೆಯ ಪೆನ್ನನ್ನು ಕೊಂಡುಕೊಳ್ಳುತ್ತೀಯಾ ಎಂದು ವಿಚಾರಿಸಿದ. ಶ್ಯಾಮ ಬೇಡ ಎಂದು ತಲೆ ಅಲ್ಲಾಡಿಸಿದ. ನಿಜವಾಗಿಯೂ ಅವನಿಂದ ಪೆನ್ನು ಎಂಬ ಶಬ್ದದ ಅರ್ಥವೇ ತಿಳಿಯಲಾಗಲಿಲ್ಲ.

ಕ್ರಮೇಣ ತನ್ನ ಸುತ್ತಮುತ್ತ, ಜನರ ಗುಂಪು ಜಾಸ್ತಿಯಾಗುತ್ತಿದೆ ಎಂದು ಅವನಿಗೆ ಅರ್ಥವಾಯಿತು. ಇದೇ ಈಗ ಆಫೀಸು ಒಟ್ಟಿಗರ ಗುಂಪು. ಈ ಸಲವೂ ಅನೇಕರು ಇವನು ಈ ರೀತಿ ನಿಂತುಕೊಂಡಿರುವುದನ್ನು ನೋಡಿ ಆಶ್ಚರ್ಯಗೊಳ್ಳಬಹುದು. ಯಾರಿಗೆ ಗೊತ್ತು ಇವರ ಮಧ್ಯೆ ಅಂದು ಮಧ್ಯಾಹ್ನ ಮಳೆ ಬಿದ್ದಾಗ ಆ ಜನರ ನಡುವೆ ಇದ್ದ ಒಂದಿಬ್ಬರು ಇಲ್ಲು ಇದ್ದಾರೋ ಏನೋ. ಒಂದು ವೇಳೆ ಅವರು ಶ್ಯಾಮ ಅಥವಾ ಲೀಲಾಳನ್ನು ಗುರುತಿಸಲೂಬಹುದು. ಶ್ಯಾಮ ಮೆಲ್ಲನೆ ನಕ್ಕ. ಆದರೂ ಶ್ಯಾಮ ನಿಂತುಕೊಂಡೇ ಇದ್ದ.

ಶ್ಯಾಮನಿಗೆ ಎಲ್ಲಾ ಸ್ಪಷ್ಟವಾಗಿ ಕಾಣಿಸುತ್ತಾ ಇತ್ತು. ಲೀಲಾ ಮೆಲ್ಲನೆ ತನ್ನ ಕೈಯೊಳಗಿನ ಕೆಲಸವನ್ನು ಮುಗಿಸುತ್ತಾ ಇದ್ದಾಳೆ. ಅವಳು ತನ್ನ ಎಲ್ಲಾ ಕೆಲಸ ಮುಗಿಸಿ,ಎಲ್ಲವನ್ನೂ ಬದಿಗೊತ್ತರಿಸಿ ಇಟ್ಟಳು. ಅನಂತರ ಸ್ವಲ್ಪ ಹೊತ್ತು ಅವಳು ಹಾಗೇ ಸುಮ್ಮನೇ ಕುಳಿತುಕೊಂಡಿದ್ದಳು, ಏನೋ ಒಂದು ರೀತಿ ಇಕ್ಕಟ್ಟಿನಲ್ಲಿ ಸಿಲುಕಿಕೊಂಡಂತೆ ಕಾಣಿಸುತ್ತಿದ್ದಳು. ಈ ಸಲ ಅವಳು ಹೊರಗೆ ಬರುತ್ತಾಳೆ. ಅವಳು ಎದ್ದು ನಿಂತುಕೊಂಡಳು. ತಟ್ಟನೆ ಅವಳ ಹಳದಿ ಸೀರೆ ಕಾಣಿಸಿತು. ಆ ಹಳದಿ ಸೀರೆಗೆ ಹಸಿರು ಅಂಚು, ಅವಳು ಹಸಿರು ಕುಬುಸ ತೊಟ್ಟಿದ್ದಾಳೆ. ಉದ್ದನೆಯ ಕುರ್ಚಿಯಿಂದ ಅವಳು ಕೆಳಗಿಳಿಯುತ್ತಿರುವಂತೆಯೇ ಅವಳು ಸ್ವಲ್ಪ ಕುಳ್ಳು ಎಂದು ಶ್ಯಾಮನಿಗೆ ಅನಿಸಿತು. ಅವಳು ಬೇಸರದಿಂದ ಹಣೆಯ ಮೇಲಿನ ಕೂದಲನ್ನು ಸರಿಸಿಕೊಂಡು, ಕೌಂಟರಿನಿಂದ ಹೊರಬಂದಳು. ಅನಂತರ ಶ್ಯಾಮನಿಗೆ ಅವಳು ಕಾಣಿಸಲಿಲ್ಲ.

ಸ್ವಲ್ಪ ಹೊತ್ತಿನ ನಂತರ, ಗಾಜಿನ ಬಾಗಿಲನ್ನು ಸರಿಸಿ, ನೆರಳಿನಾಕೃತಿಯಂತೆ ರಸ್ತೆಯ ಮೇಲೆ ನಡೆದು ಬಂದಳು. ಖಾಕೀ ಬಟ್ಟೆ ತೊಟ್ಟ ಪ್ಯೂನ್ ಆಕೆಯ ಜೊತೆ ಇರುವುದನ್ನು ಶ್ಯಾಮ ಗಮನಿಸಿದ. ಮೊದಲೇ ನಿರ್ಧರಿಸಿದಂತೆ ಆ ವ್ಯಕ್ತಿ ಲೀಲಳ ಬದಿಯಲ್ಲಿ ನಡೆದು ಹೋಗುತ್ತಿದ್ದಾನೆ. ಶ್ಯಾಮ ಹಿಂದುಳಿದ. ಅವರು ತುಂಬಾ ವೇಗವಾಗಿ ನಡೆದು ಹೋಗುತ್ತಿರುವುದನ್ನು ಸ್ವಲ್ಪ ದೂರದಿಂದ ನೋಡಿದ. ಆ ವ್ಯಕ್ತಿ ಒಂದು ಟ್ಯಾಕ್ಸಿಯನ್ನು ಕೈ ಬೀಸಿ ನಿಲ್ಲಿಸಿದ ಲೀಲ ಒಂದು ಸಲವಾದರೂ ಹಿಂದೆ ತಿರುಗಿ ನೋಡಲಿಲ್ಲ. ಟ್ಯಾಕ್ಸಿಯ ಅಂಧಕಾರದಲ್ಲಿ ಅವಳು ಮೆಲ್ಲನೆ ಹೊಕ್ಕಳು. ಈ ಎಲ್ಲಾ ಘಟನೆ ಎಷ್ಟು ಬೇಗನೆ ನಡೆಯಿತೆಂದರೆ, ಶ್ಯಾಮನಿಗೆ ಏನೂ ಮಾಡಲು ತೋಚದೆ ಹಾಗೇ ಪೆದ್ದನಂತೆ ನಿಂತುಕೊಂಡೇ ಇದ್ದ. ಆದರೂ ಅವನ ಮುಖದಲ್ಲಿ ಅದೇ ನಗು.

ರಾತ್ರಿ ಊಟ ಮಾಡುವಾಗ ಶ್ಯಾಮನಿಗೆ ಪುನಃ ಮಿತ್ರನ ಭೇಟಿಯಾಯಿತು. ಮಿತ್ರ ಊಟಕ್ಕೆ ಕುಳಿತಾಗ ಹೇಳಿದ –ಎಲ್ಲಾ ಆಟೋಮೇಷನ್ ಬಂದು ಬಿಡುತ್ತೆ ಸ್ವಾಮಿ. ಆಗ ನಮಗೆ ಒಂದೇ ಆಪ್‌ಷನ್ ಕೊಡುತ್ತಾರೆ. ಆಗ ಸಮಯದ ಮೊದಲೇ ಅನುಕೂಲ ಮಾಡಿಕೊಳ್ಳಿ ಎಂದು, ಕಂಪೆನಿ ಹೆಚ್ಚಿನ ಮೊತ್ತದ ಕಾಂಪನ್‌ಸೇಷನ್ ಕೊಡುತ್ತೆ. ಅದನ್ನೆಲ್ಲ ಯೋಚನೆ ಮಾಡಿ. ಈ ಸಲ ನಾನು ನಿಶ್ಚಯಿಸಿ ಬಿಟ್ಟಿದ್ದೇನೆ. ಸ್ವಾಮಿ, ಇಷ್ಟೊಂದು ಕಿರಿ ಕಿರಿ ಯಾರಿಗೋಸ್ಕರ ಸ್ವಾಮಿ, ಏನೂ ಅರ್ಥವಾಗೊಲ್ಲ.

ಶ್ಯಾಮ ಅನ್ಯಮನಸ್ಕನಾಗಿ ನಗುತ್ತಾನೆ.

– ಹದಿನೈದು ವರ್ಷಕ್ಕೂ ಹೆಚ್ಚು ಸರ್ವೀಸ್ ಆಗಿ ಹೋಗಿದೆ. ಮಿತ್ರನಿಗೆ ವಯಸ್ಸಿನ ಬಗ್ಗೆ ಆಗ ಗಮನವಿದ್ದಂತೆ ಕಂಡು ಬರಲಿಲ್ಲ. ಅದಕ್ಕೇ ಅವನು ಆ ರೀತಿ ಹೇಳಿ ಸ್ವಲ್ಪ ನಕ್ಕು ಹೇಳಿದ – ಸರ್ಟಿಫಿಕೇಟ್‌ನಲ್ಲಿ ಏನೇ ಇರಲಿ ಸ್ವಾಮಿ, ನನಗೀಗ ನಲ್ವತ್ತು ವರ್ಷ. ಆದರ ಏನೋ ಒಂದು ತರಹ ಮುದಿತನ ಎಂದೆನಿಸುತ್ತದೆ. ಆಫೀಸಿನಲ್ಲಿ ಎಷ್ಟು ಹೊತ್ತಿನವರೆಗೆ ಕೆಲಸ ಮಾಡುತ್ತಾ ಇರುತ್ತೇನೋ ಅಷ್ಟರವರೆಗೆ ಹೊರಗೆ ತುಂಬಾ ಬೆಳಕಿದೆ, ಆನಂದದ ಕೇಕೇ ಕೇಳಿ ಬರುತ್ತಿದೆ, ಎಂದು ಮನಸ್ಸಿಗೆ ಅನ್ನಿಸುತ್ತದೆ. ಆದರೆ ಪುನಃ ಹೊರ ಬಂದರೆ ಸಮಯ ಕಳೆಯಲು ಮನಸ್ಸಾಗುವುದಿಲ್ಲ. ಮೊದಲು ನನಗೆ ಫುಟ್‌ಬಾಲ್ ಆಟ ವೀಕ್ಷಿಸುವ ಹವ್ಯಾಸವಿತ್ತು. ಸ್ವಲ್ಪ ಇಸ್ಪೀಟ್ ಆಟವನ್ನೂ ಆಡುತ್ತಿದ್ದೆ. ಈಗ ಅದೂ ತುಂಬಾ ಪ್ರಯಾಸದ ಕೆಲಸ ಎಂದು ಮನಸ್ಸಿಗನಿಸುತ್ತದೆ. ಈಗ ಎಷ್ಟೋ ದಿನಗಳವರೆಗೆ ನಾನು ಪುಸ್ತಕ,'ಪತ್ರಿಕೆಗಳನ್ನು ಮುಟ್ಟೇ ಇರುವುದಿಲ್ಲ ಒಮ್ಮೊಮ್ಮೆ ಕೇವಲ ಜೋತಿಷ್ಯದ ಪುಸ್ತಕ' ಕೊಂಡು ಕೊಂಡು, ನನ್ನ ಕೈನೋಡಿಕೊಂಡು ನಗುತ್ತೇನೆ. ಈ ರೀತಿ ಹೇಳುತ್ತಾ ಹೇಳುತ್ತಾ, ಮಿತ್ರ ಸ್ವಲ್ಪ ಬಗ್ಗಿ, ತಗ್ಗಿದ ಧ್ವನಿಯಲ್ಲಿ ಶ್ಯಾಮನಿಗೆ ಹೇಳಿದ – ನಂಬಿ ಸ್ವಾಮಿ ನನ್ನ ಕೈಯಲ್ಲಿ ತುಂಬಾ ಒಳ್ಳೆಯ ಚಿಹ್ನೆಗಳಿದ್ದವು ಒಳ್ಳೇ ಸೂರ್ಯರೇಖೆ ಹಾಗೂ ಬೃಹಸ್ಪತಿ ಮೌಂಟ್ ಎಂದು ಹೇಳಿ, ಮಿತ್ರ ತನ್ನ ಅಂಗೈಯನ್ನು ತಟ್ಟೆಯ ಅಂಚಿಗೆ ತಿಕ್ಕಿ ಕೈ ಬಿಡಿಸಿ ನೋಡಿ ಬೇಕಾದರೆ ಎಂದು ತೋರಿಸಿದ. ಶ್ಯಾಮ ಮಿತ್ರನ ಓರೆಕೋರೆ ರೇಖೆ ಇರುವ ಅಂಗೈಯನ್ನು ನೋಡಿದ. ಕೈಯೊಳಗಿನ ಉಗುರು, ಮಂಕಾಗಿದೆ ಮೀನಿನ ಪಲ್ಯ ಅಂಟಿ ಕಪ್ಪಾದ ಕೈಯನ್ನು ನೋಡು ಶ್ಯಾಮ, ವಾಃ ಎಂದ.

ಮಿತ್ರ ನಗುತ್ತಾನೆ. ಈ ಕೈಯಿಂದಾಗಿಯೇ ನನಗೆ ಕಾನ್‌ಫಿಡೆನ್ಸ್ ಇತ್ತು. ಇದರ ಬಲದಿಂದಲೇ ಪಾರಾಗಿ ಬಿಡ್ತೇನೆ ಎಂದು ಯೋಚಿಸಿದ್ದೆ. ಅದೂ ಅಲ್ಲದೆ ಕರ್ಮಫಲ ನನ್ನ ರೇಖೆಯ ಶುಕ್ರ ಸ್ಥಾನ ತುಂಬಾ ಚೆನ್ನಾಗಿದೆ. ಕೈಯಲ್ಲಿ ಪ್ರೇಮದ ಚಿಹ್ನೆ ಬೇರೆ ಇದೆ – ಲವ್ ಮ್ಯಾರೇಜ್. ಆದರೆ ಮಿತ್ರ ತುಟಿ ಕೊಂಕಿಸಿ ನಕ್ಕ. ಎಲ್ಲಿಂದಲೂ ಏನೂ ಆಗುವುದಿಲ್ಲ ಸ್ವಾಮಿ ನಲ್ವತ್ತಕ್ಕೆ ನಾನು ನಿವೃತ್ತಿಯ ವಿಷಯ ಆಲೋಚನೆ ಮಾಡುತ್ತಾ ಇದ್ದೇನೆ. ರಜೆ ಪಡೆದು ಹಳ್ಳಿಗೆ ಹೊರಟು ಹೋಗುತ್ತೇನೆ. ಒಂದು ಪೌಲ್ಟರೀ ಪ್ರಾರಂಭಮಾಡಿ ಕೋಳಿ ಮೊಟ್ಟೆಯನ್ನು ಮಾರುತ್ತೇನೆ. ಏನಂತೀರಾ?

ಶ್ಯಾಮ ನಗುತ್ತಾನೆ.

ಮಿತ್ರ ತಲೆ ಅಲ್ಲಾಡಿಸಿ ಹೇಳುತ್ತಾನೆ – ಅಥವಾ ಅದಿಲ್ಲದಿದ್ದರೆ ಸುತ್ತಾಡುವ ಜೋಗಿಯಾದರೂ ಅದೇನು ಕೇದಾರ, ಕಾಶಿ ಎಲ್ಲಾ ಸುತ್ತಾಡುತ್ತೇನೆ. ನನಗೆ ಊರೂರು ಸುತ್ತಾಡಲು ತುಂಬಾ ಇಷ್ಟ ಇತ್ತು ಸ್ವಾಮಿ. ಆದರೆ ಯಾಕೋ ಏನೋ ನಾನೆ ಮನಸ್ಸು ಮಾಡಲಿಲ್ಲ. ಹೌರಾ ಬ್ರಿಡ್ಜ್‌ನ್ನು ದಾಟಿ ಹೋಗಬೇಕೆಂದರೆ ತುಂಬಾ ಬೇಜಾರಾಗುತ್ತಿತ್ತು. ನಾನು ರೈಲು ಗಾಡಿಯನ್ನು ಹತ್ತಿ ಎಷ್ಟು ದಿನವಾಯಿತೋ ಏನೋ?

ಊಟ ಮುಗಿಸಿ ಹೋಟೆಲಿನ ಹೊರಗೆ ಬಂದರೂ ಮಿತ್ರ ಶ್ಯಾಮನ ಜೊತೆ ಬಿಡಲಿಲ್ಲ –

ನಡೀರಿ ಸ್ವಾಮಿ, ತುಂಬಾ ದಿನಗಳ ನಂತರ ಇಂದು ಮನಸ್ಸು ಹಗುರವಾಗಿದೆ. ಸ್ವಲ್ಪ ತಿರುಗಾಡಿ ಬರೋಣ. ಊಟವಾದ ಮೇಲೆ ಸ್ವಲ್ಪ ನಡೆಯೋದು ತುಂಬಾ ಒಳ್ಳೆಯದು.

ರಸ್ತೆಯಲ್ಲಿ ನಡೆಯುತ್ತಾ ಮಿತ್ರ ಹೇಳಿದ. ಜೀವನವನ್ನು ನೋಡುತ್ತಾ ಹೋದರೆ ಮನೆಗೆ ಬೆಂಕಿ ಬಿದ್ದಂತೆ ಸ್ವಾಮಿ. ಮನೆಯಲ್ಲಿದ್ದರೆ ಏನೋ ಭಾರ, ಏನೋ ಭಯ ಎಂದೆನಿಸುತ್ತೆ. ಸುಮ್ಮನೆ ಟ್ರಂಕಿನ ಮೇಲೆ ಕೈಯಾಡಿಸಿ, ಕಿಟಕಿಯ ಬಾಗಿಲು ಸರಿಸಿ ನೋಡುತ್ತೇನೆ. ಆ ಕಾರ್ಯದ ಯೋಚನೆಯಲ್ಲಿ, ಎದೆಯೊಳಗೆ, ತಳಮಳ ಎಂದೆನ್ನುತ್ತೆ. ಆದರೂ ನನ್ನ ಪರಿಸ್ಥಿತಿ ಅಷ್ಟೇನೂ ವಿಚಾರಪಡುವಂತಹದೇನಿಲ್ಲ. ನನ್ನ ಕೈಕಾಲುಗಳು ಗಟ್ಟಿಯಾಗಿವೆ. ತಮ್ಮ ಕೆಲಸದಲ್ಲಿದ್ದಾನೆ, ತಂಗಿಯ ಮದುವೆಯಾಗಿದೆ. ವಯಸ್ಸಾದ ತಂದೆ ಇದ್ದಾರೆ, ಅಮ್ಮ ಇಲ್ಲ. ಆದರೆ ಅದೇ ಒಂದೇ ಒಂದು ಮನೆ ನನ್ನ ಸೋಲಿಸಿ ಬಿಟ್ಟಿದೆ ಸ್ವಾಮಿ. ಅದರ ಮೇಲೇ ನನಗೆ ತುಂಬಾ ಮೋಹ. ಮಿತ್ರ ನಿಟ್ಟುಸಿರು ಬಿಡುತ್ತಾನೆ. ತನ್ನ ಶಾಲನ್ನು ಸರಿಯಾಗಿ ಹೊದೆದುಕೊಳ್ಳುತ್ತಾನೆ. ನನಗೆ ಆ ಮನೆಯನ್ನು ಹಾಗೇ ಗಿಡಬಳ್ಳಿಗಳನ್ನು ಬೆಳಸದೇ ಇಡಲು ಇಚ್ಛೆಯಿರಲಿಲ್ಲ. ಹಾಂ, ಹಣ್ಣು ಹೂವು ಬಳ್ಳಿ, ತರಕಾರಿಗಳಿಂದ ತುಂಬಿಸಿ ಬಿಡುತ್ತೇನೆ.

ಗೋಲ್‌ಪಾರ್ಕಿನ ಹತ್ತಿರ ಬಂದು ಪುನಃ ಗಡಿಯಾಹಾಟಿನ ಕಡೆ ಇಬ್ಬರೂ ತಿರುಗಿದರು. ಶ್ಯಾಮ, ಮಿತ್ರ ಇಬ್ಬರೂ ಪಕ್ಕ ಪಕ್ಕದಲ್ಲೇ ನಡೆಯುತ್ತಿದ್ದರು. ರಸ್ತೆಯ ಉದ್ದಕ್ಕೂ ಮಿತ್ರನೊಬ್ಬನೇ ಮಾತನಾಡುತ್ತಿದ್ದಾನೆ. ಆಟೋಮೇಷನ್ ಒಂದು ಬಿಟ್ಟರೆ, ಪುನಃ ಯಂತ್ರಗಳ ಕೈಗೇ ಕೆಲಸ ಕೊಟ್ಟು, ಆಲಸೀ ಮನುಷ್ಯರಿಗೆ ರಜೆ, ಇಷ್ಟು ದಿನ ಕೆಲಸ ಕಾರ್ಯಗಳು ಯಂತ್ರಗಳದ್ದು, ಮನುಷ್ಯರದಲ್ಲ ಅಂತಲೇ ಅಂದುಕೊಂಡಿದ್ದೆ ಸ್ವಾಮಿ.

ಶ್ಯಾಮ ಅನ್ಯಮನಸ್ಕನಾಗಿ ನಕ್ಕು ಮುಂದೆ ನಡೆಯುತ್ತಾನೆ.

ಮಿತ್ರ ಪುನಃ ಪ್ರಾರಂಭಿಸುತ್ತಾನೆ. ವಿಧವೆಯಾಗಿದ್ದರೂ ನನ್ನದೇನೂ ಅಭ್ಯಂತರವಿರಲಿಲ್ಲ ಸ್ವಾಮಿ. ನಾನು ಕೇವಲ ಶಾಂತ, ಶಿಷ್ಟ ಹುಡುಗಿಯನ್ನು ಬಯಸಿದ್ದೆ. ವಯಸ್ಸು, ಜಾತಿ, ರೂಪ ಒಂದೂ ನನಗೆ ಬೇಕಿರಲಿಲ್ಲ. ಆದರೆ ನನಗೇನು ಬೇಕು ಎಂದು ಮುಖವೆತ್ತಿ ಯಾರಿಗೂ ನನ್ನಿಂದ ಹೇಳಲಾಗಲಿಲ್ಲ. ನನಗೆ ತುಂಬಾ ನಾಚಿಕೆಯಾಗುತ್ತಿತ್ತು. ನನಗೆ ಸ್ವಲ್ಪ ವಯಸ್ಸಾದ ಮೇಲೆಯೇ ನಾನು ವಿವಾಹದ ಬಗ್ಗೆ ಯೋಚಿಸಿದ್ದೆ. ನಾನು ಯುವಕನಾಗಿದ್ದಾಗ ಕೇವಲ ಅವಳ ಬಗ್ಗೆಯೇ ಯೋಚಿಸುತ್ತಿದ್ದೆ. ಅವಳು ನನಗೆ ಆಣೆಯಿಟ್ಟು, ನನ್ನಿಂದ ದೂರ ಸರಿದು ಹೋದಳು... ಆಯಸ್ಸು ತುಂಬಾ ಉದ್ದ. ಏನಂತೀರಾ? ... ಅದಕ್ಕೆ ಸ್ವಾಮಿ ಸರಿಯಾದ ವಯಸ್ಸಿನಲ್ಲಿ ಯಾವಾಗ ನನ್ನ ಮದುವೆಯಾಗಲಿಲ್ಲವೋ ಈಗ ಮದುವೆಯ ಬಗ್ಗೆ ಏನು ಹೇಳೋದು. ಹೇಳೋಣ ಹೇಳೋಣ ಎಂದೇ ದಿನಗಳನ್ನು ಮುಂದೂಡುತ್ತೇನೆ. ಕೊನೆಗೂ ನಾಚಿಕೆಯಿಂದಾಗಿ ನನ್ನಿಂದ ಹೇಳಲಾಗುವುದಿಲ್ಲ.

ಶ್ಯಾಮ ಮಿತ್ರನನ್ನು ಗಡಿಯಾಹಾಟಿನ ಹತ್ತಿರ ಬಿಟ್ಟ. ಮಿತ್ರ ಒಂದೇ ಸಲಕ್ಕೆ ತುಂಬಾ ಖುಷಿ ಹಾಗೂ ವಿಷಣ್ಣನಾಗಿರುವಂತೆ ಕಾಣಿಸಿದ. ನಡೆದು ಮುಂದೆ ಹೋಗಬೇಕೆಂದು ಹೊರಟ ಮಿತ್ರ ಸ್ವಲ್ಪ ಮುಂದೆ ಹೋಗಿ ಪುನಃ ಹಿಂತಿರುಗಿ ಬಂದು ಶ್ಯಾಮನಿಗೆ ಹೇಳಿದ – ನಾನು ತುಂಬಾ

ಅಸಹಾಯಕನಾಗಿದ್ದೇನೆ ಎಂದು ತಿಳಿದುಕೊಳ್ಳಬೇಡಿ ಸ್ವಾಮಿ. ನಾನು ನನ್ನನ್ನು ತುಂಬಾ ದಿನದಿಂದ ನಿಶಸ್ತ್ರನನ್ನಾಗಿ ಇಟ್ಟಿದ್ದೇನೆ ... ನಾನು ಸಮಯಕ್ಕೆ ಒದಗಲಿ ಎಂದು ನಿದ್ದೆಯ ಗುಳಿಗೆಗಳನ್ನು ಸರಿಯಾದ ಪ್ರಮಾಣದಲ್ಲಿ ಜೋಡಿಸಿಟ್ಟಿದ್ದೇನೆ. ನನ್ನ ಹತ್ತಿರ ಹದಿನೇಳು ಗುಳಿಗೆಗಳು ಇವೆ. ಹೌದು ಸ್ವಾಮಿ ಹದಿನೇಳು. ಅಮ್ಮನಿಗೆ ನಿದ್ದೆ ಬಾರದಿರುವ ಖಾಯಿಲೆ ಇತ್ತು. ಆಗಿನಿಂದ ಎಂದಾದರೊಂದು ದಿನ ಉಪಯೋಗಕ್ಕೆ ಬರುತ್ತೆ ಅಂತ ಯಾರಿಗೂ ಕಾಣದಂತೆ ಕೂಡಿಸಿಟ್ಟಿದ್ದೇನೆ. ಒಮ್ಮೊಮ್ಮೆ ಗುಳಿಗೆಯ ಶೀಷೆಯನ್ನು ಹೊರತೆಗೆದು ಮೇಲೆ ಕೆಳಗೆ ಮಾಡಿ ನೋಡುತ್ತೇನೆ... ಕೈಗೆ ತೊಗೊಂಡರೆ ಏನೋ ಒಂದು ತರಹ ಬಲ ಬರುತ್ತೆ ಸ್ವಾಮಿ, ಮನದಲ್ಲಿ ಒಂದು ತರಹ ಭರವಸೆ ಮೂಡುತ್ತೆ. ಆಗ ಯಾವ ರೀತಿಯ ಭಯವೂ ಎನಿಸುವುದಿಲ್ಲ ... ಹಾಃ ಹಾಃ

ಅನಂತರ ಮಿತ್ರ ಸ್ವಲ್ಪ ಕುಗ್ಗಿದ ಧ್ವನಿಯಲ್ಲಿ ಹೇಳಿದ – ಬೇಕಾದರೆ ಹೇಳಿ, ನನ್ನ ಹತ್ತಿರ ಎಷ್ಟು ಇದೆಯೋ ಅದು ನಮ್ಮಿಬ್ಬರಿಗೆ ಸಾಕು. ಇನ್ನೂ ಬೇಕಾದರೆ ಇನ್ನೂ ನಾಲ್ಕು ಜನಕ್ಕೇ ಹೇಳಿ ನೋಡಿ. ತುಂಬಾ ಜನ ಒಪ್ಪುತ್ತಾರೆ. ನಾನು ಫ್ರೀಯಾಗಿ ಕೊಡುತ್ತೇನೆ..... ಹಾಃ... ಹಾಃ

ಶ್ಯಾಮ ಮೆಲ್ಲನೆ ನಕ್ಕು ಹೇಳಿದ – ತೆಗೆದುಕೊಳ್ಳುತ್ತೇನೆ. ನನಗೆ ಬೇಕಾಗುತ್ತೆ.

ಸರಿ ಎಂದು ಹೇಳಿ ಮಿತ್ರ ಹೊರಟು ಹೋದ.

ದೂರದಿಂದ ಶ್ಯಾಮ ನೋಡಿದ. ಕಂಬಳಿಯ ತರಹ ಶಾಲು ಹೊದೆದ ಮಿತ್ರ. ಕರಡಿಯಂತೆ ಬೆಳಕು ನೆರಳಿನಲ್ಲಿ ನಡೆದು ಹೋಗುತ್ತಾ ಇದ್ದಾನೆ. ತಾನು ಕೂಡಿಸಿಟ್ಟ ಹದಿನೇಳು ನಿದ್ದೆಯ ಗುಳಿಗೆ ಇಟ್ಟಿರುವ ಮನೆಯ ಕಡೆ ಅವನು ನಡೆದು ಹೋಗುತ್ತಾ ಇದ್ದಾನೆ. ಶ್ಯಾಮನಿಗೆ ಅವನನ್ನು ಹಿಂತಿರುಗಿ ಕರೆಯುವ ಇಚ್ಛೆಯಾಗುವುದಿಲ್ಲ. ಅವನನ್ನು ಮನೆಗೆ ಹೋಗಲು ಬಿಟ್ಟ.

# 11

ಮಧ್ಯಾಹ್ನ ಸರಿಯಾಗಿ ಶ್ಯಾಮ ಕೋಣೆಗೆ ಬೀಗ ಬಡಿದು, ಹೊರ ಹೊರಟ. ಮೆಟ್ಟಲಿನ ಮೇಲೆ ನಿಂತು ಸಿಗರೇಟಿನ ಪ್ಯಾಕೇಟ್ ತೆಗೆದುನೋಡಿದ – ಕೊನೇ ಸಿಗರೇಟ್. ಆ ಸಿಗರೇಟನ್ನು ತೆಗೆದು ಬಾಯಿಗಿರಿಸಿ ಪ್ಯಾಕೆಟ್ಟನ್ನು ಬಿಸಾಕಿ, ಬಲಗಾಲಿನಿಂದ ಜೋರಾಗಿ ಒದ್ದ. ಪ್ಯಾಕೇಟ್ ರೇಲಿಂಗ್‌ಗೆ ಹೋಗಿ ತಾಗಿ, ಗೋಡೆಗೆ ತಾಕಿ, ಮೆಟ್ಟಲಿನ ತಿರುವಿನಲ್ಲಿ ಹೋಗಿ ಬಿತ್ತು. ಶ್ಯಾಮ ತನ್ನಲ್ಲೇ ತಾನು ನಕ್ಕ ... ರೇಲಿಂಗ್ಸಿನ ಮೇಲೆ ಒರಗಿ, ತನ್ನ ಭಾರವನ್ನು ನಿಯಂತ್ರಿಸಿಕೊಂಡ. ರೇಲಿಂಗ್ಸ್‌ನ್ನು ಹಿಡಿದುಕೊಂಡು ದಡದಡನೆ ಮೆಟ್ಟಲಿಳಿದು ಹಾರಿ ಬಂದ. ಪುನಃ ಕಾಲಿನಿಂದ ಸಿಗರೇಟಿನ ಪ್ಯಾಕೇಟನ್ನು ಜಾಡಿಸಿದ.

ಅನಂತರ ಕಾಲಿನಿಂದ ಅದನ್ನು ಮುಂದೆ ಸರಿಸಿ, ಒದೆಯುತ್ತಾ ಮೆಟ್ಟಲಿಳಿದು ಬಂದ.. ಇನ್.. ಔಟ್... ಇನ್... ಔಟ್ ಶ್ಯಾಮ ತನ್ನಲ್ಲೇ ಹೇಳಿಕೊಂಡ. ಅನೇಕ ನೆನಪು, ಅನೇಕ ಮಾತು, ಅನೇಕ ದೃಶ್ಯ. ಎದೆಯೊಳಗೆ ಒಡೆಯುವ ಶಬ್ದ, ತಲೆಯೊಳಗೆ ಏನೋ ಒಂದು ತರಹ. ಆಮೆಯ ಬೆನ್ನಿನ ತರಹ ಹಸಿರು ಬಯಲು, ಒಂದು ಬಿಳಿಯ ಚೆಂಡು. ಅವನು ಜೋರಾಗಿ ಓಡುತ್ತಿದ್ದಾನೆ... ಮೆಲ್ಲನೆ ನಕ್ಕು, ನಿಶ್ವಾಸಬಿಟ್ಟು ಅನಂತರ ಪುನಃ ಮೆಟ್ಟಲಿನಿಂದ ಕೆಳಗಿಳಿಯುತ್ತಾನೆ.

ದೊಡ್ಡ ರಸ್ತೆಗೆ ಬಂದು ಎಸ್‌ಪ್ಲ್ಯಾಂಡ್‌ಗೆ ಹೋಗುವ ಬಸ್ಸನ್ನು ಶ್ಯಾಮ ಹಿಡಿದ.

ನಿರ್ದಿಷ್ಟ ಸ್ಥಳದಲ್ಲಿ, ಲ್ಯಾಂಪ್ ಪೋಸ್ಟಿನ ಕೆಳಗೆ ಶ್ಯಾಮ ನಿಂತುಕೊಂಡ. ಕಣ್ಣಿನಿಂದ ತಂಪು ಕನ್ನಡಕ ತೆಗೆದು ನಗುತ್ತಾನೆ.

ಅಸ್ಪಷ್ಟವಾಗಿ ಲೀಲಳ ಅವಯವ ಕಂಡು ಬರುತ್ತದೆ. ಅನಂತರ ಯಾವ ರೀತಿ ನೀರಿನ ತಳದಿಂದ ಮೆಲ್ಲ ಮೆಲ್ಲನೆ ಮೀನು ನೀರಿನ ಮೇಲೆ ಎದ್ದು ಬರುವಂತೆ, ಕೆಲಸ ನಿರತ ಆ ಎರಡು ಬಿಳಿಯ ಕೈಗಳು ಸ್ಪಷ್ಟವಾಗಿ ಕಾಣಿಸುತ್ತಾ ಬಂತು. ದುಂಡನೆಯ ಮುಖ, ಹಣೆಯ ಮೇಲೆ ಹರಡಿ ಬಿದ್ದ ಕೂದಲು, ಇಂದು ಅವಳು ಬಿಳಿಯ ಬ್ಲೌಸ್ ತೊಟ್ಟುಕೊಂಡಿದ್ದಾಳೆ. ತಲೆಯಲ್ಲಿ ಎತ್ತರವಾಗಿ ಕಟ್ಟಿದ ತುರುಬು.

ನಿಂತುಕೊಳ್ಳುತ್ತಿರುವಂತೆಯೇ ಕಣ್ಣುಗಳು ಒಂದುಗೂಡಿದವು. ಲೀಲಾ ಚಕಿತಳಾದಳು. ಅವಳ ಮುಖ ಬಿಳುಚಿಕೊಳ್ಳಲಿಲ್ಲ. ಅವಳ ತುಟಿ ಮುಚ್ಚಿಕೊಂಡಿತು. ಹುಬ್ಬು ಸ್ವಲ್ಪ ಕೊಂಕಿತು. ಹಲ್ಲು ಕಡಿದಳು. ಅರೆ ಕ್ಷಣ ನೋಡುತ್ತಲೇ ಅವಳು ತನ್ನ ಕಣ್ಣುಗಳನ್ನು ಸರಿಸಿಕೊಂಡಳು. ನಂತರ ಅವಳು ತನ್ನ ಕಾರ್ಯದಲ್ಲಿ ನಿರತಳಾದಳು.

ಈ ರೀತಿಯೇ ಆಗುತ್ತದೆ ಎಂದು ಶ್ಯಾಮನಿಗೆ ಗೊತ್ತಿತ್ತು. ಅಂತೇ ಅದೇ ತರಹ ಆಗುತ್ತೆ. ನಗುತ್ತಾ ಅವನು ನಿಂತುಕೊಂಡೇ ಇದ್ದನು. ಕ್ರಮೇಣ ತನ್ನ ಪರಿಸರ ಒಂದು ರೀತಿ ಅಸ್ಪಷ್ಟ ಹಾಗೂ ಅಸ್ತಿತ್ವವಿಲ್ಲದಂತೆ ಆದಂತೆ ಅವನಿಗೆ ಅನಿಸಿತು.

ರಸ್ತೆಯಲ್ಲಿನ ಜನ ಸಮಯಾನುಸಾರ ಕರಗಿಹೋದರು. ಈಗ ಕೇವಲ ರೈಲುಗಾಡಿಯ ಶಬ್ದ, ಜಿಂಕೆಗಳ ಓಟದ ಶಬ್ದ, ಎದೆಯೊಳಗೆ ನಿಶ್ಶಬ್ದ, ಒಂದು ರೀತಿ ದೃಷ್ಟಿಪಾತ. ಶರೀರದೊಳಗೆ ಗಂಭೀರ, ಧೀರ ಮೋ‌‌ಡಗಳು ಕವಿಯುತ್ತಿವೆ.

ಕ್ರೂರ ಮುಖದ ಒಬ್ಬ ವ್ಯಕ್ತಿ ಲೀಲಾಳ ಜೊತೆ ಮಾತುಕತೆಯಾಡುತ್ತಿದ್ದಾನೆ. ಆತ ಕಪ್ಪು ಕಡು ಬಣ್ಣದ ಪ್ಯಾಂಟ್ ಹಾಕಿಕೊಂಡಿದ್ದಾನೆ, ಮೇಲೆ ಬಿಳಿಯ ಬಣ್ಣದ ಸ್ವೆಟರ್. ಆ ವ್ಯಕ್ತಿ ತುಂಬಾ ಗಂಭೀರನಾಗಿ ನಗುತ್ತಿದ್ದಾನೆ. ಆದರೆ ಶ್ಯಾಮನಿಗೆ ಆತನ ಎಣಿಕೆ ಸ್ಪಷ್ಟವಾಗಿ ಅರ್ಥವಾಗುತ್ತದೆ. ಅವನು ತನ್ನ ನಾನಾ ಮಾತುಗಳಿಂದ ಲೀಲಳನ್ನು ಮೋಡಿ ಮಾಡುತ್ತಾ ಇದ್ದಾನೆ. ಆದಕ್ಕೆ ಲೀಲಳ ಕಣ್ಣು ಮುಖ ಕೋಮಲವಾಗುತ್ತಾ ಬಂದಿದೆ. ಕನಸುಕಾಣುವವರಂತೆ ಅವಳ ಕಣ್ಣು ಆಲಸ್ಯದಿಂದ ಕೂಡಿದೆ. ಕಾರ್ಯನಿರತ ಅವಳ ಎರಡೂ ಕೈಗಳು ಒಂದು ಕ್ಷಣ, ಕೌಂಟರಿನ ಮೇಲೆ ಸ್ಥಿರವಾದವು. ಲೀಲಾಳ ತುಟಿಯಲ್ಲಿ ಆನಂದದ ನಗು, ಆ ಕೋಣೆಯಲ್ಲಿ ಬೇರೆ

ಇನ್ಯಾರೂ ಇಲ್ಲವೆಂದು ಕಾಣಿಸುತ್ತದೆ. ಒಂದೆರಡು ಕ್ಷಣ ಲೀಲಾಳಿಗೆ ಸುಸಮಯ ಸಿಕ್ಕಿದೆ. ಟೆಲಿಫೋನ್ ಕೂಡಾ ಬಾರಿಸುತ್ತಿಲ್ಲ ಅಂತ ಕಾಣಿಸುತ್ತದೆ. ಅಥವಾ ಅದು ಬಾರಿಸಿದರೂ ಕೂಡಾ ಲೀಲಾ ಉತ್ತರಿಸುತ್ತಿಲ್ಲ ಅಂತ ಕಾಣಿಸುತ್ತದೆ.

ಆ ವ್ಯಕ್ತಿ, ಶ್ಯಾಮನಿಗೆ ಪರಿಚಯವಿರುವಂತೆ ಕಾಣಿಸುತ್ತದೆ. ಶ್ಯಾಮ ತುಂಬಾ ಹೊತ್ತು ಅವನನ್ನೇ ದಿಟ್ಟಿಸಿ ನೋಡುತ್ತಾ ಇರುತ್ತಾನೆ. ಶ್ಯಾಮ ಹಿಂದೊಮ್ಮೆ ಹಿಂಬಾಲಿಸಿದ್ದನಲ್ಲ ಅದೇ ವ್ಯಕ್ತಿ. ಆ ದುಷ್ಟವ್ಯಕ್ತಿ ಇಲ್ಲಿ ಯಾಕೆ ಬಂದ ಎನ್ನುವುದು ಶ್ಯಾಮನಿಗೆ ಅರ್ಥವಾಗಲಿಲ್ಲ. ಅವನು ಮನದಲ್ಲೇ ಕಿರುಚಿಕೊಂಡ – ಮಾತನಾಡಬೇಡ. ಅವನ ಜೊತೆ ಏನು ಮಾತು? ಮುಖ ತಿರುಗಿಸಿಕೊಂಡು ಬಿಡು. ಕಾರ್ಯದಲ್ಲಿ ನಿರತಳಾಗು.' ತುಂಬಾ ಹೊತ್ತಿನಿಂದ ಟೆಲಿಫೋನ್ ಕಿರುಚಿಕೊಳ್ಳುತ್ತಾ ಇದೆ. ಉತ್ತರಿಸು. ಹೊರಗೆ ಕತ್ತಲಾಗುತ್ತಾ ಬಂತು, ನಿನ್ನ ಕೆಲಸವನ್ನು ಪೂರ್ತಿ ಮಾಡು. ಅವನ ಕಡೆ ನೀನು ಹುಬ್ಬು ಕೊಂಕಿಸಿ ಹೇಳು – ಸರಿ ಹಾಗಾದ್ರೆ ನೀವು ಮತ್ತೊಮ್ಮೆ ಬನ್ನಿ.... ಅಥವಾ ಸಿಟ್ಟಿನಿಂದ ಜೋರಾಗಿ ಇನ್ನೇನಾದರೂ ಹೇಳು. ಲೀಲಾ ಅವನನ್ನು ಹೊರಹಾಕು. ಅಥವಾ ನನ್ನನ್ನು ಕಣ್ಣು ಸನ್ನೆಯಿಂದಲೇ ಹತ್ತಿರ ಕರಿ. ನಾನು ಒಳಗೆ ಬಂದು ಅವನನ್ನು ಹೊರಗೆಳೆದುಕೊಂಡು ಬರುತ್ತೇನೆ. ನನಗೆ ಅವನ ಪರಿಚಯವಿದೆ. ಅವನು ಗುಂಪಿನ ಮಧ್ಯೆ ಜನರ ಪರ್ಸನ್ನು ಲಪಟಾಯಿಸಲು ನೋಡುತ್ತಾನೆ. ಅವನ ಲೋಭಿ ಕೈಗಳು ಹೆಣ್ಣು ಹುಡುಗಿಯರ ಎದೆಯನ್ನು ಮುಟ್ಟುತ್ತವೆ. ಅವನ ಜೊತೆ ಮಾತನಾಡಬೇಡ. ಲೀಲ ಸುಮ್ಮನಿರು ಅವನ ಜೊತೆ ಎಂಥಾ ಮಾತು... ಒಬ್ಬ ನಿನ್ನನ್ನು ಗಮನಿಸುತ್ತಾ ಇದ್ದಾನೆ ಎನ್ನುವುದು ನಿನಗೆ ಗೊತ್ತಿಲ್ಲವೇ?

ಟೆಲಫೋನ್ ಬಾರಿಸಿತು ಅಂತ ಕಾಣಿಸುತ್ತದೆ. ಲೀಲಾ ಸ್ವಲ್ಪ ಒರಗಿ, ಕಿವಿಗೆ ಟೆಲಿಫೋನ್ ಒತ್ತಿ ಹಿಡಿದಳು. ಬಲಗೈಯಿಂದ ಹಳದಿ ಪೆನ್ಸಿಲ್ಲನ್ನು ಡೆಸ್ಕಿನ ಮೇಲೆ ಕುಟ್ಟುತ್ತಿದ್ದಳು. ಆದರೂ ಅ ವ್ಯಕ್ತಿಯ ಕಡೆ ನೋಡಿ ನಗುತ್ತಾ ಮಾತನಾಡುತ್ತಿದ್ದಾಳೆ. ಆ ವ್ಯಕ್ತಿ ತನ್ನ ಎರಡೂ ಕೈಗಳಿಂದ ಸ್ವೆಟರನ್ನು ಕೆಳಗೆಳೆದುಕೊಳ್ಳುತ್ತಿದ್ದಾನೆ. ಡೆಸ್ಕಿನ ಮೇಲೆ ಸ್ವಲ್ಪ ಬಗ್ಗಿ ಟೆಲಿಫೋನಿನ ಕಡೆ ಕೈ ಚಾಚುತ್ತಿದ್ದಾನೆ. ಲೀಲಾ ತಲೆ ಅಲ್ಲಾಡಿಸುತ್ತಾಳೆ. ಹಿಂದೆ ಸ್ವಲ್ಪ ಒರಗಿ ನಗುತ್ತಾಳೆ.

ಶ್ಯಾಮನಿಗೆ ಅವರು ಆಟ ಆಡುತ್ತಿದ್ದಾರೆ ಎಂದೆನಿಸುತ್ತದೆ. ಶ್ಯಾಮನ ಇಡೀ ದೇಹ ಉರಿಯುತ್ತೆ. ಅವನಿಗೆ ಆತ್ಮ ವಿಸ್ಮೃತಿಯಾಗಲೂ ಬಹುದು. ಆ ವ್ಯಕ್ತಿಗೆ ಏನು ಧೈರ್ಯ! ಹತ್ತಿರ ನಿಂತು ಅವಳೊಡನೆ ಮಾತನಾಡಿ ಅಥವಾ ಕಣ್ಣಿನ ನೋಟದಿಂದಲೇ ಲೀಲಾಳ ಪಾತಿವ್ರತ್ಯವನ್ನು ಹಾಳು ಮಾಡುತ್ತಿದ್ದಾನೆ.

ಅದೂ ಅಲ್ಲದೆ ಶ್ಯಾಮ ಅವಳನ್ನೇ ನೋಡುತ್ತಿದ್ದಾನೆ ಎನ್ನುವುದು ಲೀಲಾಳಿಗೂ ಗೊತ್ತು. ಆದರೂ ಅವಳು ಹುಬ್ಬೆತ್ತರಿಸುವುದಿಲ್ಲ. ಯಾರಿಗೆ ಗೊತ್ತು ಲೀಲ ಅವನ ಮೇಲೆ ಸೇಡುತೀರಿಸಿಕೊಳ್ಳುತ್ತಿದ್ದಾಳೋ ಏನೋ.

ಶ್ಯಾಮ ಒಂದೊಂದೇ ಹೆಜ್ಜೆ ಹಿಂದೆ ಸರಿದು ಹೋಗುತ್ತಾನೆ. ಅವನು ಏನು ಮಾಡುತ್ತಿದ್ದಾನೆ ಎನ್ನುವುದು ಅವನಿಗೇ ಅರ್ಥವಾಗುವುದಿಲ್ಲ. ಅವನು ತೀರಾ ಬಾಗಿಲ ಹತ್ತಿರ ಬಂದು ನಿಂತುಕೊಳ್ಳುತ್ತಾನೆ. ಗಾಜಿನ ಬಾಗಿಲ ಒಳಗಿನಿಂದ, ಅವಳ ಉದ್ದನೆಯ ದೀರ್ಘ ಕ್ಷೀಣದೇಹ

ತೇಲಿ ಬರುತ್ತದೆ. ಅವನ ನಿಶ್ವಾಸದ ಉಸಿರು ತಾಕಿ ಒಂದೆರಡು ಗಾಜು ಮಂಕಾಗುತ್ತದೆ. ತೀವ್ರ ಕಣ್ಣುಗಳಿಂದ ಅವನು ಒಳಗೆ ದಿಟ್ಟಿಸಿ ನೋಡುತ್ತಾನೆ.

ಟೆಲಿಫೋನ್ ಕೆಳಗಿಟ್ಟು, ನೇರವಾಗಿ ಕುಳಿತು, ತಟ್ಟನೇ ಲೀಲಾ ಕಂಪಿಸುತ್ತಾಳೆ. ಚೀತ್ಕರಿಸಲು ಹೋಗಿ ಕೂಡಾ ಅವಳೂ ತನ್ನ ಕೈಯನ್ನು ಬಾಯಿಗೆ ಅಡ್ಡವಾಗಿಟ್ಟುಕೊಳ್ಳುತ್ತಾಳೆ. ಅವಳ ಎರಡೂ ಅಸಹಾಯ ಕಣ್ಣುಗಳು ವಿಶಾಲವಾಗುತ್ತವೆ. ಕ್ರೂರ ಮುಖದ ವ್ಯಕ್ತಿ ವಿದ್ಯುತ್ ಗತಿಯಲ್ಲಿ, ಸಿಂಹದ ತರಹ ತಿರುಗಿ ನಿಂತುಕೊಳ್ಳುತ್ತಾನೆ. ಶ್ಯಾಮ ನೋಡುತ್ತಾನೆ, ಅವನ ಎರಡೂ ಕೈ ಮುಷ್ಟಿ ಬಿಗಿದಿವೆ. ಅವನು ಹತಭೃಷ್ಟನಂತೆ ಶ್ಯಾಮನ ಕಡೆ ನೋಡುತ್ತಿದ್ದಾನೆ.

ಶ್ಯಾಮ ಮೆಲ್ಲನೆ ನಗುತ್ತಾನೆ. ಅನಂತರ ಒಂದೊಂದೇ ಹೆಜ್ಜೆ ಇಟ್ಟು, ಹಿಂದೆ ತಿರುಗಿ ಸ್ವಸ್ಥಾನಕ್ಕೆ ಬರುತ್ತಾನೆ. ಲ್ಯಾಂಪ್ ಪೋಸ್ಟಿಗೊರಗಿ, ನಿಶ್ಚಿಂತನಾಗಿ ನಿಂತುಕೊಳ್ಳುತ್ತಾನೆ. ಶಾಂತ ಚಿತ್ತದಿಂದ, ವಿವೃತ, ಕೆರಳಿದ ವ್ಯಕ್ತಿಯ ಕಡೆ ನೋಡುತ್ತಾನೆ. ಕಣ್ಣಿನಿಂದಲೇ – ಹುಷಾರ್ ... ನಾನು ಕಾವಲು ಕಾಯುತ್ತಾ ಇದ್ದೇನೆ ಎಂದು ತಿಳಿಸಿ ಹೇಳುತ್ತಾನೆ.

ಆ ವ್ಯಕ್ತಿ ಒಂದು ಕ್ಷಣ ಶ್ಯಾಮನನ್ನು ನೋಡುತ್ತಾನೆ. ಅನಂತರ ತನ್ನ ಅಸ್ವಸ್ತ ಕಣ್ಣುಗಳನ್ನು ತಿರುಗಿಸಿಕೊಳ್ಳುತ್ತಾನೆ. ಲೀಲಾ ತನ್ನ ಮುಖವನ್ನು ತೀರಾ ತಗ್ಗಿಸಿಕೊಂಡು ಕುಳಿತಿದ್ದಾಳೆ. ಇಬ್ಬರು ಸೂಟ್ ತೊಟ್ಟ ಆಂಗ್ಲ ಸಾಹೇಬರು ಒಳಗೆ ಹೊಕ್ಕರು, ಅವರು ಲೀಲಾಳ ಎದಿರು ನಿಂತು ಮಾತನಾಡಿದರು. ಶ್ಯಾಮ, ಲೀಲಾಳ ಮುಖ ಕೆಂಪಗಾಗಿರುವುದನ್ನೂ, ಅವಳು ಸ್ವಾಭಾವಿಕವಾಗಿ ನಗುತ್ತಿಲ್ಲ ಎನ್ನುವುದನ್ನೂ ಗಮನಿಸಿದ. ಲೀಲ ಬೇಗ ಬೇಗ ಅವರ ಪ್ರಶ್ನೆಗಳನ್ನು ಉತ್ತರಿಸಿದಳು. ಪುನಃ ಕೋಣೆ ಬರಿದಾಯಿತು. ಕ್ರೂರ ಮುಖದ ವ್ಯಕ್ತಿ ಲೀಲಾಳ ಕಡೆ ತಿರುಗಿ ಅವಳನ್ನು ಏನೋ ಪ್ರಶ್ನೆ ಕೇಳಿದ. ಲೀಲಾ ಇಲ್ಲ ಎಂದು ತಲೆ ಅಲ್ಲಾಡಿಸಿದಳು. ಅವಳು ಕಣ್ಣು ತಗ್ಗಿಸಿಕೊಂಡೇ ಇದ್ದಳು. ಆ ವ್ಯಕ್ತಿಯ ಮುಖದಲ್ಲಿ ಸ್ವಲ್ಪ ಅಸಹಾಯ ಭಾವ ಎದ್ದು ಕಂಡು ಬರುತ್ತಿದೆ. ಶ್ಯಾಮ ನೋಡುತ್ತಾನೆ, ಆ ವ್ಯಕ್ತಿ ಸ್ವಲ್ಪ ಇತಸ್ತತಃನಾಗುತ್ತಾನೆ. ಅನಂತರ ಕೌಂಟರಿನ ಮೇಲಿಟ್ಟು, ಪೋಲಿಯೋ ಬ್ಯಾಗನ್ನು ಹಿಡಿದು ಹೊರ ಬರುತ್ತಾನೆ. ಬಾಗಿಲ ಹೊರಗೆ ಬಂದು, ಆ ವ್ಯಕ್ತಿ ಶ್ಯಾಮನನ್ನು ಅರೆ ಕ್ಷಣ ದಿಟ್ಟಿಸಿ ನೋಡುತ್ತಾನೆ. ಶ್ಯಾಮ ಅದನ್ನು ಗಮನಿಸುವುದಿಲ್ಲ. ಆ ವ್ಯಕ್ತಿ ಎಡಗಡೆ ನಡೆದು ಹೋಗುತ್ತಾನೆ.

ಶ್ಯಾಮ ಒಂದಿಷ್ಟೂ ಅಲ್ಲಾಡುವುದಿಲ್ಲ. ನಿಶ್ಚಿಂತ ಮನದಿಂದ ನಿಂತುಕೊಂಡೇ ಇರುತ್ತಾನೆ.

ನಿಧಾನವಾಗಿ ಶ್ಯಾಮನ ನಾಲ್ಕೂ ಬದಿ ಅಂಧಕಾರ ಇಳಿದು ಬರುತ್ತಿದೆ. ಆ ಕೋಣೆಯೊಳಗೆ ಲೀಲಾ ಉಜ್ವಲಳಾಗಿ ಕಾಣಿಸುತ್ತಾಳೆ. ಅವಳ ಮುಖ ಮಗುವಿನ ತಾಯಿಯಂತೆ, ಅಭಿಮಾನಿ ಹಾಗೂ ಗಂಭೀರವಾಗಿದೆ. ಶ್ಯಾಮ ನಗುತ್ತಾನೆ, ಅವನ ತುಟಿ ಅಲ್ಲಾಡುತ್ತದೆ – ನಿನ್ನನ್ನು ಇಷ್ಟು ಗುಂಪಿನ ಮಧ್ಯೆ, ಇಷ್ಟೊಂದು ಜನರ ಕಣ್ಣೆದುರು ಗೌರವಿಸುವುದಿಲ್ಲ. ನೀನೇನೂ ಯೋಚಿಸಬೇಡ, ನಿನಗೋಸ್ಕರವೇ ಒಂದು ದಿನ ನಾನು ಈ ಭೂಮಿಯನ್ನು ನಿರ್ಜನವಾಗಿ ಮಾಡಿ ಬಿಡುತ್ತೇನೆ. ಎಲ್ಲರನ್ನೂ ಸುಮ್ಮನಾಗಿಸಿ ಬಿಡುತ್ತೇನೆ. ಸಮಸ್ತ ನಗರವನ್ನು ಕಾಡಿನಲ್ಲಿ ಮುಳುಗಿಸಿ ಬಿಡುತ್ತೇನೆ.

ಅವನು ಯಾರು? ಅವನ ಜೊತೆ ಮಾತುಕತೆಯಾಡುತ್ತಿದ್ದೆಯಲ್ಲಾ. ಅವನ ತರಹ ಹೃದಯಹೀನ ಮುಖಚರ್ಯೆಯ ವ್ಯಕ್ತಿಗಳು, ಈ ಪೃಥ್ವಿಯಿಂದ ಎಷ್ಟು ಕಡಿಮೆಯಾಗುತ್ತಾರೋ ಅಷ್ಟೇ ಒಳ್ಳೆಯದು. ನೀನು ಆ ವ್ಯಕ್ತಿಯೊಡನೆ ತುಂಬಾ ಸಲಿಗೆಯಿಂದ ಎಂದೂ ವರ್ತಿಸಬೇಡ.

ಕೆಲಸ ಮುಗಿದ ಮೇಲೆ ಲೀಲ ಸತರ್ಕ ಭಾವದಿಂದ ತಿರುಗಿ ಬಾಗಿಲ ಕಡೆ ಒಮ್ಮೆ ನೋಡಿದಳು. ಅನಂತರ ಒಂದು ಟೆಲಿಫೋನ್ ಮಾಡಿದಳು. ಮೆಲ್ಲನೆ ಹಿಂದಕ್ಕೊರಗಿ, ಸ್ವಲ್ಪ ಹೊತ್ತು ಕುಳಿತುಕೊಂಡಿದ್ದಳು. ಆ ಕೋಣೆಯಲ್ಲಿ ಅನೇಕ ಜನ ಬಂದು ಹೋಗಿ ಮಾಡುತ್ತಿದ್ದರು. ಶ್ಯಾಮ ಅವರ್‍ಯಾರನ್ನೂ ಗಮನಿಸಲಿಲ್ಲ. ಲೀಲಾಳು ಕುಳಿತಿರುವ ಭಂಗಿ ನೋಡಿ, ಅವಳು ಯಾರಿಗೋಸ್ಕರವೋ ಕಾಯುತ್ತಿದ್ದಾಳೆ ಎಂದು ಶ್ಯಾಮನಿಗೆ ಗೊತ್ತಾಯಿತು. ಅವಳು ಯಾರಿಗಾಗಿ ನಿರೀಕ್ಷಿಸುತ್ತಾ ಇದ್ದಾಳೆ ಎಂದು ಶ್ಯಾಮ ಮೆಲ್ಲನೆ ನಕ್ಕ. ಏಕೋ ಏನೋ ಶ್ಯಾಮನಿಗೆ ಗೊತ್ತು ಅದರಿಂದ ಲೀಲಾಳಿಗೆ ಯಾವ ಲಾಭವೂ ಇಲ್ಲ ಅಂತ.

ಆದರೆ ತುಂಬಾ ಹೊತ್ತಾದರೂ ಯಾರೂ ಬರಲಿಲ್ಲ. ಲೀಲಾ ಎದ್ದು ಒಳಗೆ ಹೋದಳು. ಪುನಃ ಹೊರಗೆ ಬಂದಳು. ಬಾಗಿಲ ಕಡೆ ಬೆನ್ನು ಮಾಡಿ, ಕೌಂಟರಿನ ಮೇಲೆ ಬಗ್ಗಿ, ಏನನ್ನೋ ನೋಡುತ್ತಿರುವವಳಂತೆ ಭಂಗಿ ಮಾಡಿ, ನಿರೀಕ್ಷಿಸುತ್ತಿದ್ದಳು. ಪುನಃ ಎದ್ದು ಅಸ್ಥಿರಭಾವದಿಂದ ಕೋಣೆಯಲ್ಲಿ ಅಡ್ಡಾಡಿದಳು. ಬಾಗಿಲ ಬಳಿ ಮೆಲ್ಲನೆ ನಡೆದು ಬಂದು ನಿಂತುಕೊಂಡಳು. ಆ ಅಂಧಕಾರದ ಮುಖದಿಂದ ಎರಡು ಕಣ್ಣುಗಳು ಅವನನ್ನು ಗಮನಿಸುತ್ತಾ ಇವೆ ಎನ್ನುವುದು ಶ್ಯಾಮನಿಗೆ ಸ್ಪಷ್ಟವಾಗಿ ತಿಳಿಯಿತು.

ಓ ಪಥಿಕನೇ ನಿನಗೇನು ಬೇಕು? ಅಪರಿಚಿತನೇ ನಿನಗೇನು ಬೇಕು?

ಶ್ಯಾಮ ಎರಡೂ ಪ್ರಶ್ನೆಗಳನ್ನೂ ಕೇಳಿಸಿಕೊಳ್ಳುತ್ತಾನೆ. ಅವನ ಶರೀರ ಕಂಪಿಸುತ್ತದೆ. ಅವನು ಗೊಣಗುತ್ತಾನೆ – ನನಗೆ ಗೊತ್ತಿಲ್ಲ ನನಗೇನು ಬೇಕು.

ಶ್ಯಾಮ ಅಸ್ಥಿರಭಾವದಿಂದ ಕಣ್ಣು ತಿರುಗಿಸಿಕೊಳ್ಳುತ್ತಾನೆ. ತಲೆ ತಗ್ಗಿಸಿ ಹಾಗೇ ನಿಂತುಕೊಂಡಾಗ, ಅವನಿಗೆ ದೂರದ ರಸ್ತೆಯ ತಿರುವಿನಲ್ಲಿ ಬರುತ್ತಿರುವ ಮೋಟಾರ್ ಸೈಕಲಿನ ಶಬ್ದ ಕೇಳಿ ಬರುತ್ತದೆ. ಅನಂತರ ಮೋಟರ್ ಸೈಕಲಿನ ಗತಿ ಕಡಿಮೆಯಾಗುತ್ತದೆ. ಮೆಲ್ಲನೆ ಅವನ ಹಿಂದೆ ಫುಟ್‌ಪಾತಿಗೊರಗಿ, ಜೋರಾಗಿ ಶಬ್ದ ಮಾಡಿ, ಮೋಟರ್ ಸೈಕಲ್ ನಿಂತುಕೊಳ್ಳುತ್ತದೆ. ಶ್ಯಾಮ ಸ್ತಬ್ಧನಾಗುತ್ತಾನೆ. ಅವಾತ್ ಆಗಿ, ಒಬ್ಬ ಹುಡಗ, ವೇಗವಾಗಿ ಗಾಜಿನ ಬಾಗಿಲ ಕಡೆ ಹೊರಟು ಹೋದದ್ದನ್ನು ಶ್ಯಾಮ ನೋಡುತ್ತಾನೆ. ಕಪ್ಪು ಬಣ್ಣದ ಪ್ಯಾಂಟ್, ಬಿಳಿಯ ಪುಲ್ ಓವರ್ ತೊಟ್ಟು, ಚಿಕ್ಕದಾಗಿ ಕತ್ತರಿಸಿದ ತಲೆಯ ಕೂದಲು ಸ್ವಲ್ಪ ಓರೆಕೋರೆಯಾಗಿದೆ. ಆದರೆ ಕೂದಲು ದಟ್ಟವಾಗಿದೆ. ಆ ಹುಡುಗ ಬಾಗಿಲ ಕಡೆ ಕೈ ಮುಂದೆ ಚಾಚುತ್ತಲೇ, ಏನೋ ಮಂತ್ರ ಶಕ್ತಿ ಎಂಬಂತೆ ಬಾಗಿಲು ತೆರೆದುಕೊಂಡಿತು. ಅದೇ ಮೊದಲು ಸ್ವಲ್ಪ ಕೀರಲು, ಆದರೆ ಮಧುರವಾದ ಸ್ವರವನ್ನು ಶ್ಯಾಮ ಕೇಳಿಸಿಕೊಂಡ – ಇಷ್ಟೊಂದು ಹೊತ್ತು – ಯಾವಾಗಿನಿಂದ ನಿನಗೆ ಟೆಲಿಫೋನ್ ಮಾಡಿ ಕಾದು ಕುಳಿತುಕೊಂಡಿದ್ದೇನೆ...

ಹುಡುಗ ನಗುತ್ತಾನೆ. ಈ ಸುಡಗಾಡು ಟ್ರಾಫಿಕ್‌ನಲ್ಲಿ ತುಂಬಾ ಸುತ್ತಾಡಿ ಬರಬೇಕಾಯಿತು. ಆದರೂ ಕ್ಲಿಯರ್ ರಸ್ತೆ ಸಿಗಲಿಲ್ಲ... ಏನು ಸಮಾಚಾರ?

–ಏನೂ? ಏನೂ ಇಲ್ಲ.

ಏನೂ ಇಲ್ಲ?

–ಇಲ್ಲ.

ಅವರಿಬ್ಬರೂ ಶ್ಯಾಮನ ಕಡೆಯೆ ನಡೆದು ಬಂದರು. ಶ್ಯಾಮ ಅಲ್ಲಾಡಲಿಲ್ಲ. ಲೀಲಾ ಹುಡುಗನ ಎಡಗಡೆ ಇದ್ದಳು. ಅ ಕಡೆಯೇ ಶ್ಯಾಮ ನಿಂತುಕೊಂಡಿದ್ದ. ಒಂದೆರಡು ಹೆಜ್ಜೆ ನಡೆಯುತ್ತಲೇ ಲೀಲಾ ಉಪಾಯದಿಂದ ಹುಡುಗನ ಬಲಗಡೆ ಸರಿದುಕೊಂಡಳು. ಅನಂತರ ಅವರು ಅವನನ್ನು ದಾಟಿಕೊಂಡು ಹೊರಟು ಹೋದರು. ಶ್ಯಾಮ ಕುತ್ತಿಗೆ ತಿರುಗಿಸಲಿಲ್ಲ. ಸ್ಟಾರ್ಟರ್‌ಗೆ ಜೋರಾಗಿ ಬಿದ್ದ ಶಬ್ದ ಕೇಳಿಬಂತು. ಮೋಟರ್ ಸೈಕಲ್ ಗುರ್ ಗುರ್ ಎಂದು ಶಬ್ದ ಮಾಡಿತು. ಆ ಶಬ್ದದೊಂದಿಗೇ ಮುಂದೆ ಓಡಿತು. ಅವನು ಕಂಬದ ಹಾಗೆ ನಿಂತೇ ಇದ್ದ. ಗಾಳಿಯಲ್ಲಿ ಪೆಟ್ರೋಲಿನ ವಾಸನೆಯೊಂದಿಗೆ ಸುಂದರ ಪರಿಮಳವೂ ತೇಲಿ ಬಂತು, ಬಹುಶಃ ಒಳ್ಳೇ ಸುವಾಸನೆಯ ಪೌಡರಿನದ್ದು ಅಂತ ಕಾಣಿಸುತ್ತದೆ. ಮೊದಲು ಶ್ಯಾಮ ಅನೇಕ ಪೌಡರುಗಳ ವಾಸನೆಯನ್ನು ಗುರುತಿಸುತ್ತಾ ಇದ್ದ. ಈಗ ಮರೆತು ಬಿಟ್ಟಿದ್ದಾನೆ. ಇಲ್ಲಿ ಅವನಿಂದ ಈ ಪೌಡರಿನ ವಾಸನೆಯನ್ನು ಗುರುತಿಸಲು ಸಾಧ್ಯವಾಗಲಿಲ್ಲ. ಅವನು ನಕ್ಕು ತಾನು ಸೋತೆ ಅಂತ ತಲೆ ಅಲ್ಲಾಡಿಸಿದ.

ಶ್ಯಾಮ ಗುಂಪಿನ ಮಧ್ಯೆ ದಾರಿ ಮಾಡಿಕೊಂಡು ನಡೆಯುತ್ತಿದ್ದ. ನಡೆಯುತ್ತಾ ನಡೆಯುತ್ತಾ ಮನದಲ್ಲೇ ಹೇಳುತ್ತಿದ್ದ – ಕ್ರೂರ ಮುಖದ, ಕೆಟ್ಟ ಸ್ವಭಾವದ ಜನರಿಗೆ ಯಾವ ರೀತಿ ಭಯ ತೋರಿಸಬೇಕು ಎನ್ನುವುದು ನನಗೆ ಚೆನ್ನಾಗಿ ಗೊತ್ತು. ಯಾವ ರೀತಿ ನೆಲದಿಂದ ಮೋಟರ್ ಸೈಕಲನ್ನು ಸರಿಸಿ, ಸ್ಕಿಡ್ ಮಾಡಬೇಕು ಎನ್ನುವುದೂ ನನಗೆ ಚೆನ್ನಾಗಿ ಗೊತ್ತು. ಯಾಕೆ ನೀನು ನನಗೆ ತೋರಿಸಿಕೊಡುವುದಿಲ್ಲ. ಈ ವ್ಯಕ್ತಿಯಿಂದಾಗಿಯೇ ನನಗೆ ರಸ್ತೆಯಲ್ಲಿ ಒಬ್ಬಂಟಿಗಳಾಗಿ ಹೋಗಲು ಸಾಧ್ಯವಾಗುವುದಿಲ್ಲ ಎಂದು ಯಾಕೆ ನೀನು ಆ ವ್ಯಕ್ತಿಗೆ ಹೇಳುವುದಿಲ್ಲ ಅಥವಾ ನನ್ನನ್ನು ಉಳಿಸು ಎಂದು ನೀನು ಅದೇ ಕ್ರೂರ ಮುಖದ ವ್ಯಕ್ತಿಗೆ ಹೇಳಬಹುದು.

ನಡೆಯುತ್ತಾ ನಡೆಯುತ್ತಾ ಶ್ಯಾಮ ಏನೋ ಆದವನಂತೆ ತಟಸ್ಥವಾಗಿ ನಿಂತು ಬಿಡುತ್ತಾನೆ. ಯಾಕೆ? ಹಿಂದಿನಿಂದ ಒಬ್ಬ ವ್ಯಕ್ತಿ ಶ್ಯಾಮನಿಗೆ ಡಿಕ್ಕಿ ಹೊಡೆಯುತ್ತಾನೆ. ಶ್ಯಾಮ ಹೊಡೆತ ತಿಂದು ನಗುತ್ತಾನೆ. ಯಾಕೆ ನನ್ನನ್ನು ಹಿಡಿದುಕೊಳ್ಳುವುದಿಲ್ಲ? ಅನಂತರ ಪುನಃ ಮುನ್ನಡೆಯುತ್ತಾನೆ.

ವಸ್ತುತಃ ಭೂಮಿಯು ನಿಜವಾಗಿಯೂ ತುಂಬಾ ನಿರ್ಜನವಾಗಿ ಬಿಟ್ಟಿದೆ. ಶ್ಯಾಮನಿಗೆ ಜೀವಂತ ವ್ಯಕ್ತಿಗಳೇ ಕಣ್ಣಿಗೆ ಬೀಳುವುದಿಲ್ಲ. ಬ್ರ್ಯಾಕೆಟ್‌ನಲ್ಲಿ ಜೋಲಾಡಿಸಿದ ಬಟ್ಟೆಗಳ ತರಹ ಜನಗಳು ನಡೆಯುತ್ತಿದ್ದಾರೆ. ಟ್ಯಾಕ್ಸಿ ಡರ್ಮಿ ಮಾಡಿದ ದೇಹ ಹಾಗೂ ಮುಖಗಳು ಅವನ ಕಣ್ಣಿಗೆ ಬೀಳುತ್ತವೆ. ಅರೆ ಅರೆ ನೆರಳಿನಲ್ಲಿ ಚಲಂಡ ನೆರಳು ಮುರಿದು ಬೀಳುತ್ತೆ. ಶ್ಯಾಮ ಅನೇಕ ರಸ್ತೆಗಳಲ್ಲಿ ಸುತ್ತಾಡಿದ. ಆದರೆ ಒಂದಾದರೂ ಪರಿಚಿತ ಮುಖ, ಚೆನ್ನಾದ ಮುಖ ಅವನ ಕಣ್ಣಿಗೆ ಬೀಳಲಿಲ್ಲ. ವರ್ಷ ಮಲಗಿ, ಎದ್ದು ಅವನಿಂದ ಏನನ್ನೂ ಗುರುತಿಸಲು ಸಾಧ್ಯವಾಗುತ್ತಿಲ್ಲ

ಎಂದು ಅವನ ಮನಸ್ಸಿಗನ್ನಿಸುತ್ತದೆ. ಈ ಹಲವಾರು ವರ್ಷಗಳಲ್ಲಿ ಎಲ್ಲಾ ಗುರುತ ಪರಿಚಯ ಹಳೆತಾಗಿ ಹಳಸಿ ಹೋಗಿದೆ. ಚೆನ್ನಾದ ಮುಖಗಳು ವಿಸ್ಫೋಟಗೊಂಡಿವೆ. ಎಲ್ಲಾ ಕಡೆ ಸ್ವಲ್ಪ ಮಂಜು ಹರಡಿದೆ. ದೂರದ ವಸ್ತುಗಳು ಕಣ್ಣಿಗೆ ಕಾಣಿಸುವುದಿಲ್ಲ. ಮಂಜು ಸರಿದರೆ ದೂರದ ವಿದೇಶ ಕಾಣಿಸುತ್ತದೆ ಎಂದು ಅವನ ಮನಸ್ಸಿಗನ್ನಿಸುತ್ತದೆ. ಒಂದು ನಿರ್ಜನ ರಸ್ತೆಯ ಅಂಚಿನಲ್ಲಿ, ಗಾಜಿನ ಬಾಗಿಲ ಬದಿಯಲ್ಲಿ ನಿಂತು ಲೀಲಾ ಅವನಿಗಾಗಿ ನಿರೀಕ್ಷಿಸುತ್ತಿದ್ದಾಳೆ. ಅವನನ್ನು ನೋಡುತ್ತಲೇ ಬಾಗಿಲನ್ನು ಸರಿಸಿ, ಹೊರ ಬರುತ್ತಾಳೆ. ಅನಂತರ ಅವರಿಬ್ಬರೂ ನಿರ್ಜನ ಪಟ್ಟಣದ ಬೀದಿ ಬೀದಿಗಳಲ್ಲಿ ಪರಸ್ಪರರನ್ನು ಮುಟ್ಟದೆ ಸುತ್ತಾಡುತ್ತಾರೆ. ಯಾವುದೋ ಒಂದು ಮನೆಯಲ್ಲಿ ಅವರಗೋಸ್ಕರ ಹಾಸಿಗೆ ಹಾಸಲ್ಪಟ್ಟಿರುತ್ತದೆ. ಅಂಗಡಿ ಅಂಗಡಿಗಳಲ್ಲಿ ಸಾಮಾನುಗಳನ್ನು ಸಜ್ಜಾಗಿಟ್ಟಿರುತ್ತಾರೆ. ಅವರಿಗೋಸ್ಕರ ಮರ ಮರಗಳಡಿಯಲ್ಲಿ ಹಣ್ಣು ಹೂವುಗಳು ಬಿಟ್ಟಿರುತ್ತವೆ. ಅವರಿಗೋಸ್ಕರವೇ ಭೂಮಿಯಲ್ಲಿ ಬಿಸಿಲು ಅಥವಾ ಮಳೆ ಬೀಳುತ್ತದೆ.

ಇಲ್ಲ. ಪೃಥ್ವಿಯಲ್ಲಿ ಈ ರೀತಿ ಎಂದೂ ಆಗುವುದಿಲ್ಲ. ಶ್ಯಾಮ ತಲೆ ಅಲ್ಲಾಡಿಸುತ್ತಾನೆ. ಅವನಿಗೆ ಗೊತ್ತು, ಅದಕ್ಕೇ ಭೂಮಿ ಅಷ್ಟೊಂದು ಸುಂದರವಾಗಿಲ್ಲ. ಇನ್ನೂ ಕೆಲವು ಅಹಂಕಾರಿ ಸೈಕಲಿಸ್ಟ್ ಹಾಗೂ ಕೆಲವು ಕ್ರೂರ ವ್ಯಕ್ತಿಗಳಿದ್ದಾರೆ.

ಮಿತ್ರನನ್ನು ಇಂದು ಹೋಟೇಲಿನಲ್ಲಿ ಕಾಣದೆ ಶ್ಯಾಮ ಆಶ್ಚರ್ಯಗೊಂಡ. ದಿನಾ ಅವರಿಬ್ಬರು ಭೇಟಿಯಾಗೇ ಆಗುತ್ತಿದ್ದರು ಎಂದೇನಿಲ್ಲ. ಆದರೂ ಇಂದು ಶ್ಯಾಮನಿಗೆ ಊಟಕ್ಕೆ ಕುಳಿತಾಗ ತುಂಬಾ ಒಂಟಿಯೆಂದೆನಿಸಿತು. ಎದುರಿನ ಶೂನ್ಯ ಕುರ್ಚಿಯ ಕಡೆ, ಅನೇಕ ಸಲ ವಾರೆಗಣ್ಣಿನಿಂದ ನೋಡಿದ. ಅವನ ಮನಸ್ಸಿನಲ್ಲಿ ಸ್ವಲ್ಪ ಸಂಶಯ ಸುಳಿದು ಹೋಯಿತು. ಅಂದು ಶ್ಯಾಮನಿಗೆ ಊಟ ಅಷ್ಟೇನು ರುಚಿಸಲಿಲ್ಲ. ಆದರೂ ಹಾಗೇ ಊಟ ಮಾಡಿದ.

ಹೋಟೇಲಿನ ಮ್ಯಾನೇಜರರೊಂದಿಗೆ ಶ್ಯಾಮ ಅಷ್ಟೇನು ಮಾತನಾಡುತ್ತಿರಲಿಲ್ಲ. ಬಾಗಿಲ ಹತ್ತಿರದ ಮೇಜಿನೆದುರು ವಿನಯ ಹಾಗೂ ದಪ್ಪನೆಯ ಅ ವ್ಯಕ್ತಿ ಯಾವಾಗಲೂ ಕುಳಿತುಕೊಂಡಿರುತ್ತಾನೆ. ಆತನ ಅಮಲಿನ ಕಣ್ಣುಗಳನ್ನು ನೋಡಿದರೆ, ಸಂಜೆ ಒಂದರ್ಧ ಚಿಲುಮೆ ಗಾಂಜಾ ಸೇವಿಸಿದ್ದಾನೆ ಎಂದು ತಕ್ಷಣ ತಿಳಿಯುತ್ತದೆ. ಆತ ಮಾತು ಕಡಿಮೆಯಾಡಿದರೂ ತುಂಬಾ ನಗುತ್ತಾನೆ. ಆದರೆ ಒಂದಿಷ್ಟೂ ಶಬ್ದ ಮಾಡುವುದಿಲ್ಲ. ಆ ವ್ಯಕ್ತಿ ಹುಡುಗರನ್ನು ಅಥವಾ ಅಡಿಗೆಯವರನ್ನು ಎಂದೂ ಜೋರಾಗಿ ಕರೆದದ್ದನ್ನು ಶ್ಯಾಮ ಕಂಡಿಲ್ಲ. ವಸ್ತುತಃ ಕಿರುಚಾಡಿ ಮಾಡಲೆಂದೇ ಬೇರೆ ಇನ್ನೊಬ್ಬ ವ್ಯಕ್ತಿಯನ್ನು ನೇಮಿಸಲಾಗಿದೆ. ಆ ವ್ಯಕ್ತಿ ಕೆಲಸದವರ ಮೇಲಾಳು. ಶಾಂತ ಚಿತ್ತದಿಂದ ಮ್ಯಾನೇಜರ್ ಹಸನ್ಮುಖಿಯಾಗಿ ಯಾವಾಗಲೂ ಕುಳಿತುಕೊಂಡಿರುತ್ತಾನೆ. ಆತ ದಿನೇ ದಿನೇ ಇನ್ನೂ ಶಾಂತನಾಗುತ್ತಿರುವುದನ್ನು ಶ್ಯಾಮ ಗಮನಿಸುತ್ತಲೇ ಇದ್ದಾನೆ. ಮುಖದ ಮೇಲಿನ ನಗುವಿನಲ್ಲಿ ಇನ್ನೂ ವಿನಯ ಹಾಗೂ ಉದಾಸೀನತೆ ಎದ್ದು ಕಾಣಿಸುತ್ತಿದೆ. ದಿನೇ ದಿನೇ ಮಾತು ಇನ್ನೂ ಕಡಿಮೆಯಾಗುತ್ತಿದೆ. ಆತನ ಹಿಂದಿನ ಗೋಡೆಯ ಮೇಲೆ, ಆತನ ಸ್ವರ್ಗಸ್ಥ ತಂದೆಯ ಫೋಟೋ ತೂಗು ಹಾಕಲಾಗಿದೆ. ಆ ಫೋಟೋಗೆ ಹೋದ ವರ್ಷ ಹಾಕಿದ, ಒಣಗಿದ ಮಲ್ಲಿಗೆ ಹೂವಿನ ಹಾರ, ಒಮ್ಮೊಮ್ಮೆ

ಶ್ಯಾಮನಿಗೆ ಸಂದೇಹವಾಗುತ್ತದೆ. ಈತ ಕೂಡಾ ತನ್ನ ಮಗನನ್ನು ಗಲ್ಲದ ಮೇಲೆ, ತನ್ನ ಜಾಗದಲ್ಲಿ ಕೂಡಿಸಿ ಒಂದೇ ನೆಗೆತಕ್ಕೆ ತನ್ನ ತಂದೆಯ ಫೋಟೋದ ಪಕ್ಕಕ್ಕೆ ತುಂಬಾ ಬೇಗ ಹಾರಿ ಹೋಗಬಹುದು. ತುಂಬಾ ಬೇಗನೇ ಒಂದು ದಿನ ಅದೇ ರೀತಿ ಒಣಗಿದ ಮಲ್ಲಿಗೆ ಹೂವಿನ ಹಾರ ಹಾಕಿಕೊಂಡ ಫೋಟೋ ಆಗಿಬಿಡುತ್ತಾನೆ. ಇಲ್ಲದಿದ್ದರೆ ಆತ ಈಗ ಎಲ್ಲಿ ಕುಳಿತುಕೊಂಡಿದ್ದಾನೋ ಅಲ್ಲೇ ಕುಳಿತು ನಿಧಾನವಾಗಿ ಒಂದು ದಿನ ಸಿಮೆಂಟ್ ಕಾಂಕ್ರೀಟಿನ ತರಹ ಹೂತು ಹೋಗುತ್ತಾನೆ. ತಣ್ಣನೆಯ ಕಲ್ಲಾಗಿ ಬಿಡುತ್ತಾನೆ. ಮುಂದೆಂದೂ ಅಲ್ಲಾಡುವುದಿಲ್ಲ.

ಇಂದು ಶ್ಯಾಮ ಹೊರ ಹೋಗುವ ಮೊದಲು ಗಲ್ಲದ ಮೇಜಿನ ಬಳಿ ಒಂದರೆಕ್ಷಣ ನಿಂತುಕೊಂಡ. ಹೊರಗಡೆ ದಿಟ್ಟಿಸಿ ನೋಡಿದ. ನಾಯಿಗಳು – ಅನೇಕ ನಾಯಿಗಳು ಕುಳಿತುಕೊಂಡಿವೆ. ದಿನಾ ಇದೇ ರೀತಿ ಇರುತ್ತದೆ. ಆ ಕಾರಣವಾಗಿ ಶ್ಯಾಮ ಸ್ವಲ್ಪ ನಕ್ಕು ಹೇಳಿದ – ನಾಯಿ! ಅನಂತರ ಒಂದು ಎರಡು ಮೂರು ಎಂದು ಹನ್ನೊಂದರವರೆಗೂ ನಾಯಿಗಳನ್ನು ಎಣಿಸಿದ.

ಇಷ್ಟೊಂದು ನಾಯಿ; ಶ್ಯಾಮ ಮೆಲ್ಲನೆ ನಕ್ಕು ಶಾಂತ ವ್ಯಕ್ತಿಯ ಕಡೆ ನೋಡಿದ – ದಿನ ನೀವು ಇಷ್ಟೊಂದು ನಾಯಿಗಳಿಗೆ ಅನ್ನಾ ಹಾಕ್ತೀರಾ?

– ಹಾಕ್ತೇವೆ. ಬಹಳ ವಿಯನದಿಂದ ಆ ವ್ಯಕ್ತಿ ನಕ್ಕ. ಅವನು ನಗುವಾಗ ಅರೆ ಕಣ್ಣು ಮುಚ್ಚಿತ್ತು.

ಶ್ಯಾಮ ಕಣ್ಣರಳಿಸಿ ನೋಡಿದ – ಹನ್ನೊಂದು ನಾಯಿಗಳಿಗೆ – ಹಾಗಾದ್ರೆ ನೀವು ತುಂಬಾ ಪುಣ್ಯ ಶೇಖರಿಸುತ್ತಿದ್ದೀರ ಅಂತ ಕಾಣಿಸುತ್ತೆ. ತುಂಬಾ ಬೇಗನೇ ನೀವು ಪುಣ್ಯ ಸಂಚಯ ಮಾಡಿದ್ದೀರ.

ತುಂಬಾ ವಿನಯದಿಂದಲೇ ಆತ ಕುತ್ತಿಗೆ ಕೊಂಕಿಸಿ ಹೇಳಿದ - ಹನ್ನೊಂದಕ್ಕೂ ಕಡಿಮೆ ನಾಯಿಗಳಿರುತ್ತವೆ.

ಇರುತ್ತಾ?

ಇರುತ್ತೆ. ಆತ ನಾಯಿಗಳ ಕಡೆ ನೋಡಿ ಹೇಳಿದ, ದಿನೇ ದಿನೇ ನಾಯಿಗಳು ಹೆಚ್ಚಾಗುತ್ತಾ ಇವೆ. ಇನ್ನೂ ಹೆಚ್ಚಾಗಬಹುದು.

ಯಾಕೆ?

ಯಾಕೆ? ಆತ ಚಿಂತೆಯ ಮುಖದಿಂದ ಶ್ಯಾಮನ ಕಡೆ ನೋಡಿದ. ದೇಶದ ಅವಸ್ಥೆ ಹೇಗಿದೆ ನೋಡಿ, ತಿನ್ನಲು ಅದಕ್ಕೆ ಬೇರೆ ಇನ್ನೆಲ್ಲೂ ಸಿಗುತ್ತಿಲ್ಲ. ಕ್ರಮೇಣ ಎಲ್ಲಾ ಇಲ್ಲಿ ಬಂದು ಸೇರಿಕೊಂಡಿವೆ.

ಹಾಗಾ. ಶ್ಯಾಮ ಎಲ್ಲಾ ತಿಳಿದವನಂತೆ ತಲೆ ಅಲ್ಲಾಡಿಸುತ್ತಾನೆ. ವಸ್ತುತಃ ದೇಶದ ಆಹಾರದ ಅವಸ್ಥೆ ಏನಾಗಿದೆ ಎಂದು ಶ್ಯಾಮನಿಗೆ ಒಂದಿನಿತು ಗೊತ್ತಿಲ್ಲ. ಆದರೂ ಆ ವ್ಯಕ್ತಿ ಇಷ್ಟೊಂದು ಮಾತನಾಡುತ್ತಿರುವುದು ಶ್ಯಾಮನಿಗೆ ತುಂಬಾ ಇಷ್ಟವಾಯಿತು. ಎಲ್ಲಾ ಕಳಪೇ ನಾಯಿಗಳೇ ಏನಲ್ಲ. ಆತ ಹೇಳಿದ – ಆ ನಡುವಿನ ಬಿಳಿಯ ನಾಯಿಯನ್ನು ಗಮನಿಸಿ, ಅದರ ಮೈಮೇಲೆ

ದೊಡ್ಡ ದೊಡ್ಡ ಮಚ್ಚೆ ಇದೆ. ಕಿವಿಗಳು ಜೋತು ಬಿದ್ದಿವೆ. ಅದು ಸ್ಪ್ಯಾನಿಯ ಲೇನಿನ ಕ್ರಾಸ್ ಬ್ರೀಡ್. ಅದೇ ಆ ಬೂದು ಬಣ್ಣದ್ದನ್ನು ನೋಡಿದರೆ ಗೊತ್ತಾಗುವುದಿಲ್ಲ. ಹಿಂದೆ ಅದು ಬೋಸ್ ಮನೆ ನಾಯಿಯಾಗಿತ್ತು. ಅಲ್‌ಸೀಷಿಯನ್ ಮೈಮೇಲೆ ಹುಣ್ಣಾಗಿ ಅದೀಗ ಬೀದಿ ನಾಯಿಯಾಗಿ ಬಿಟ್ಟಿದೆ. ಸ್ವಾಮಿ ಅದರ ಮಧ್ಯೆ ಎಂದೆನ್ನುತ್ತಾ ಆತ ನಕ್ಕು ಇಷ್ಟರವರೆಗೂ ಕಾಯಿಸಿದ್ದ ಒಬ್ಬ ಗಿರಾಕಿಗೆ ತಕ್ಷಣ ಹಣ ಎಣಿಸಿಕೊಟ್ಟ.

ಶ್ಯಾಮ ಸ್ವಲ್ಪ ಸುಮ್ಮನಿದ್ದು, ನಂತರ ಮುಖ ಎತ್ತುತ್ತಲೇ ಕೇಳಿದ, ಇಂದು ಮಿತ್ರ ಕಾಣುತ್ತಿಲ್ಲ, ಸುಬೋದ್ ಮಿತ್ರ?

ಆತ ಅಮಾಯಕ ನಗೆ ನಕ್ಕು ತಲೆ ಅಲ್ಲಾಡಿಸಿದ. ಇಲ್ಲ. ಆತ ಇನ್ನೂ ಬಂದಿಲ್ಲ. ಆತ ಸಸ್ನೇಹದಿಂದ ನಾಯಿಗಳ ಕಡೆ ನೋಡುತ್ತಲಿದ್ದ. ನಾಯಿಗಳೂ ಕೂಡಾ ತುಂಬಾ ಸ್ನೇಹ ಹಾಗೂ ಪ್ರೇಮದಿಂದ ಶಾಂತ ವ್ಯಕ್ತಿಯ ಕಡೆಯೇ ನೋಡುತ್ತಿರುವುದನ್ನು ಶ್ಯಾಮ ಗಮನಿಸಿದ.

ಶ್ಯಾಮ ಮುಂದೆ ಮಾತು ಬೆಳೆಸದೆ ಹೊರ ಹೊರಟು ಬಂದ. ಅವನು ನಾಯಿಗಳ ಗುಂಪನ್ನು ದಾಟಿಕೊಂಡು ಮುಂದೆ ಹೋದ. ಅವು ಸ್ವಲ್ಪ ಸರಿದು ಅವನಿಗೆ ಸ್ಥಳ ಮಾಡಿಕೊಟ್ಟವು ಸಂಕೋಚದಿಂದ ಒಮ್ಮೆ ಸ್ಪ್ಯಾನಿಯ ಲೇನಿನ ಕಡೆ ಕೈ ಮುಂದೆ ಚಾಚಿ ಶ್ಯಾಮ ಸರಕ್ಕನೆ ತನ್ನ ಕೈ ಹಿಂದೆ ಎಳೆದುಕೊಂಡ. ಅಷ್ಟರಿಂದಲೇ ಸಂಕೋಚಗೊಂಡ ನಾಯಿ ಬಾಲವನ್ನು ಅಲ್ಲಾಡಿಸಿತು. ಹರಕು ಮುಂಡೇವು – ಶ್ಯಾಮ ಮನದಲ್ಲೇ ಅದಕ್ಕೆ ಬೈದ.

ಶ್ಯಾಮನ ಮನದಲ್ಲಿ, ಮಿಂಚಿನಂತೆ ಒಂದು ಸಂದೇಹ ಹೊಳೆಯಿತು. ಸುಬೋದ್ ಮಿತ್ರನ ಮನೆ ಹತ್ತಿರವೇ ಇದೆ. ಮನಸ್ಸು ಮಾಡಿದರೆ ಒಮ್ಮೆ ಅಲ್ಲಿಗೆ ಹೋಗಿ ನೋಡಿ ಬರಬಹುದು. ಆದರೆ ಮನಸ್ಸಾಗುತ್ತಿಲ್ಲ. ಒಂದು ವೇಳೆ ಅಂಥಹುದೇನಾದರೂ ಘಟನೆ ನಡೆದಿದ್ದರೆ ಅವನು ಹೋಗಿ ಏನು ಪ್ರಯೋಜನ? ಅದೂ ಅಲ್ಲದೆ ಈಗ ಹೊದರೆ ಪೋಲೀಸ್ ಠಾಣೆಯ ಗೊಂದಲದಲ್ಲಿ ಸಿಕ್ಕಿ ಬೀಳೋದು ಖಂಡಿತ. ಆ ರೀತಿ ಯೋಚಿಸುತ್ತಲೇ ಅವನಿಗೆ ತುಂಬಾ ಆಲಸ್ಯವೆನಿಸಿತು. ಶ್ಯಾಮ ನಡೆಯುತ್ತ ಸ್ವಲ್ಪ ನಿಂತುಕೊಂಡು ಜೋರಾಗಿ ಆಕಳಿಸಿದ. ಒಂದು ವೇಳೆ ಆ ಘಟನೆ ನಡೆದೇ ಇದ್ದರೆ, ಮಿತ್ರ ತನ್ನ ಮಾತನ್ನು ಉಳಿಸಿಕೊಂಡಿಲ್ಲ ಎಂದು ಹೇಳಬಹುದು. ಕಾರಣ ಹದಿನೇಳು ನಿದ್ದೆಗುಳಿಗೆಯಲ್ಲಿ ಅರ್ಧಪಾಲು ಶ್ಯಾಮನದಾಗಿತ್ತು.

ಶ್ಯಾಮ ಯೋಚಿಸುತ್ತಾ ಹಾಗೇ ನಿಂತುಬಿಟ್ಟ. ಅವನು ತನಗೆ ಎಷ್ಟು ಗುಳಿಗೆ ಸಿಗಬೇಕಿತ್ತು ಎಂದು ಲೆಕ್ಕ ಮಾಡಿ ನೋಡಿದ, ಎಂಟು ಅಥವಾ ಒಂಭತ್ತು. ಮಿತ್ರ ಸರಿಯಗಿ ಅರ್ಧ ಪಾಲು ಕೊಡುವುದಾಗಿ ಹೇಳಿದ್ದ. ಆದರೆ ಸರಿಯಾಗಿ ಎಷ್ಟು ಎಂದು ಹೇಳಿರಲಿಲ್ಲ. ಶ್ಯಾಮ ಯೋಚಿಸಿ ನೋಡಿದ. ಇನ್ನೊಬ್ಬನನ್ನು ಗುಂಪಿಗೆ ಸೇರಿಸಿಕೊಂಡಿದ್ದರೂ ಸರಿಯಾಗಿ ಪಾಲು ಮಾಡಲು ಸಾಧ್ಯವಾಗುತ್ತಿರಲಿಲ್ಲ. ಕಠಿಣ ಸಮಸ್ಯೆಯಲ್ಲಿ ಶ್ಯಾಮ ಸಿಕ್ಕಿಕೊಂಡ. ಕೊನೆಗೆ ಯಾರು ಪಾಲು ಕೊಡುತ್ತಾರೋ ಅವರಿಗೆ ಹದಿನೇಳು ಗುಳಿಗೆಗಳು ತುಂಬಾ ಕಡಿಮೆ ಎಂಬ ಸಿದ್ಧಾಂತಕ್ಕೆ ಬಂದು ಮುಟ್ಟಿದ. ಅನಂತರ ಪುನಃ ನಡೆಯುತ್ತಾ ಮುಂದೆ ಸಾಗಿದ.

ಭೂಮಿ ತುಂಬಾ ನಿರ್ಜನವಾಗಿ ಹೋಗಿದೆ. ಕ್ರಮೇಣ ಇನ್ನೂ ನಿರ್ಜನವಾಗುತ್ತಿದೆ.

ನಿಧಾನವಾಗಿ ಎಲ್ಲಾ ಅವನೊಬ್ಬನದೇ ಆಗಿ ಬಿಡುತ್ತದೆ. ಮಿತ್ರನಿಂದ ಆರಂಭಿಸಿದ್ದರೂ ಕೂಡಾ ಅಷ್ಟೇ. ಅಥವಾ ಸರಿಯಾಗಿ ಅದಿಲ್ಲದಿದ್ದರೆ... ಇನ್ನೂ ಮೊದಲಿನಿಂದ, ಅವನ ತಲೆಯಲ್ಲಿ ಬಕ ಪಕ್ಷಿಯಂತೆ ಮರೆತು ಹೋಗಿದ್ದ, ಒಂದು ಮೋಟರ್ ಸೈಕಲಿನ ಧ್ವನಿ ಗುರ್ ಗುರ್ ಎಂದಿತು. ಮೃತ್ಯುಕೂಪದಲ್ಲಿ ಆ ಆಟದಂತೆ ಸುತ್ತಿ ಸುತ್ತಿ ಮೇಲೆ ಬಂದು ಪುನಃ ಕೆಳಗಿಳಿದು ಹೋಗುತ್ತಿದೆ. ಶ್ಯಾಮ ಬೇಗನೇ ಮುಂದೆ ನಡೆದ.

# 12

ಹೇಗೋ ಏನೋ ಭೂಮಿಯಲ್ಲಿ ಸುಸಮಯ ಕೂಡಿ ಬಂದಿತ್ತು. ಆಗ ಶ್ಯಾಮ ಇರಲಿಲ್ಲ.

ಹಿಂದೆ ಒಮ್ಮೆ ಒಳ್ಳೆ ಸುಕಾಲ ಬಂದಿತ್ತು. ಆಗ ಶ್ಯಾಮ ಇರಲಿಲ್ಲ. ಮುಂದೆ ಒಂದು ಕಾಲದಲ್ಲಿ ಒಳ್ಳೇ ಸುಸಮಯ ಬರುತ್ತದೆ. ಆಗ ಶ್ಯಾಮ ಇರುವುದಿಲ್ಲ. ಹಿಂದಿನ ಆ ಒಳ್ಳೇ ಕಾಲ ಹೇಗಿತ್ತು? ಯಾರಿಗೆ ಗೊತ್ತು? ಮುಂದೆ ಒಳ್ಳೇ ಕಾಲ ಹೇಗೆ ಇರುತ್ತದೆ ಎಂಬುದು ಯಾರಿಗೆ ಗೊತ್ತು? ಶ್ಯಾಮನಿಗೂ ಗೊತ್ತಿಲ್ಲ. ಒಮ್ಮೊಮ್ಮೆ ಅವನು ಸುಮ್ಮನೆ ತನ್ನ ಸುತ್ತಾ ಮುತ್ತಾ ನೋಡುತ್ತಾನೆ. ಹಿಂದಿನ ಒಳ್ಳೇ ಕಾಲದ ಅನೇಕ ಚಿನ್ಹೆ ಹಾಗೇ ಉಳಿದುಕೊಂಡಿವೆ. ಹೇಗೋ ಹಕ್ಕಿಯ ಕೊಕ್ಕಿನಿಂದ ಬಿದ್ದ ಫಸಲಿನ ಬೀಜವನ್ನು ನೋಡಿದರೆ, ಯಾವ ರೀತಿ ಆಕಾಶದಲ್ಲಿನ ಮೋಡಗಳನ್ನು ನೋಡಿದರೆ, ನಮ್ಮ ಹೊಲಗದ್ದೆಗಳಲ್ಲಿ ವೃಷ್ಟಿಯಾಗುತ್ತೇಂತ ಗೊತ್ತಾಗುತ್ತೋ, ಅದೇ ರೀತಿ ಹಿಂದೆ ಒಳ್ಳೇ ಫಸಲಾಗಿತ್ತು ಎಂಬುದು ಗೊತ್ತಾಗುತ್ತೆ.

ಅಥವಾ ಇದೇ ಎಲ್ಲಕ್ಕಿಂತ ಸುಸಮಯವೋ ಏನೋ ಯಾರಿಗೆ ಗೊತ್ತು? ।

ಮಧ್ಯಾಹ್ನದ ನಡು ನೆತ್ತಿಯ ಬಿಸಿಲಿನಲ್ಲಿ ಶ್ಯಾಮ ತನ್ನ ಪ್ರತಿ ದಿನದ ವಾಡಿಕೆಯಂತೆ, ಪರಿಚಿತ ಕಂಬಕ್ಕೆ ಒರಗಿ ನಿಂತುಕೊಂಡಿದ್ದನು. ಇಷ್ಟೊಂದು ಬೆಳಕಿನ ನಡುವೆಯೂ ನೆರಳಿನಂತೆ, ಅಸ್ತಿತ್ವವಿಲ್ಲದ ಜನರು ಕೆಲಸವಿಲ್ಲದೆ ನಡೆದು ಹೋಗುತ್ತಿದ್ದಾರೆ ಎಂದು ಅವನ ಮನಸ್ಸಿಗನಿಸುತ್ತಿತ್ತು. ನಿಜವಾಗಿ ಯಾವುದೂ ವಾಸ್ತವವಲ್ಲ. ಗಾಜಿನ ಬಾಗಿಲಿನ ಆ ಕಡೆ ಲೀಲಾ ಕುಳಿತುಕೊಂಡಿದ್ದಾಳೆ; ಅವಳ ಸುಂದರ ಕೆಲಸ ನಿರತ ಬಿಳಿಯ ಎರಡು ಕೈಗಳು, ಸ್ವಲ್ಪ ಗಂಭೀರ ಹಾಗೂ ವಿಷಣ್ಣ ಮುಖ. ಅವಳು ಈಗಲೂ ಯಾವ ನಿರ್ಣಯಕ್ಕೂ ಬಂದಿಲ್ಲ ಎಂದು ಶ್ಯಾಮನಿಗೆ ಗೊತ್ತು. ಅವನ ಮನಸ್ಸು ಈಗಲೂ ಕರುಣೆಯಿಂದ ತುಂಬಿದೆ. ಆಘಾತ ಮಾಡುವ ಮೊದಲು ಅವಳಿಗೆ ಎಚ್ಚರಿಕೆಯಿಂದಿರಲು ಸಮಯ ಕೊಡುತ್ತಾನೆ. ತುಂಬಾ ಬೇಗನೆ ಒಂದು ದಿನ ರಸ್ತೆಯ ಜನರೇ ಅವನನ್ನು ಸುತ್ತುವರಿದು, ಕಣ್ಣು ಕೆಂಪು ಮಾಡಿಕೊಂಡು ಅವನನ್ನು ಅಲ್ಲಿಂದ ಸರಿದು ಹೋಗಲು ಹೇಳುತ್ತಾರೆ ಎಂದು ಶ್ಯಾಮನಿಗೆ ಚೆನ್ನಾಗಿ ಗೊತ್ತು.

ಎಲ್ಲಿಯವರೆಗೂ ಆ ರೀತಿಯಾಗುವುದಿಲ್ಲವೋ ಅಲ್ಲಿಯವರೆಗೂ ಎಲ್ಲಕ್ಕಿಂತ ಮಿಗಿಲಾದ ಸುಕಾಲ.

ಅನಂತರ ಒಂದು ದಿನ ಅವನು ಇರ್‌ಫಾನ್‌ನ ಬಳಿ ಹೋಗಿ ನೇರವಾಗಿ ಹೇಳುತ್ತಾನೆ, ನಾನು ಪಾಕಿಸ್ತಾನಕ್ಕೆ ಹೊರಟು ಹೋಗುತ್ತೇನೆ. ನನ್ನನ್ನು ಸೀಮೆ ದಾಟಿಸಿ ಬಿಡು.

ಅಥವಾ ಕಷ್ಟಪಟ್ಟು ಹದಿನೇಳು ಗುಳಿಗೆಗಳನ್ನು ಶೇಖರಿಸಲು ಪ್ರಯತ್ನಿಸುತ್ತಾನೆ. ಅದನ್ನು ಕೈಯಲ್ಲಿ ಹಿಡಿದರೆ ಆತ್ಮ ವಿಶ್ವಾಸವನ್ನು ಮರಳಿಪಡೆಯುತ್ತೇವೆ. ಭಯ ಅಥವಾ ಭವಿಷ್ಯತ್ತಿನ ಚಿಂತೆ ತಲೆದಿಂಬಿನ ಬಳಿಯಿಂದ ಕಂಬಿಕೀಳುತ್ತವೆ.

ಅವನೇನು ಮಾಡುತ್ತಾನೆಂದು ಶ್ಯಾಮನಿಗೇ ಸರಿಯಾಗಿ ಗೊತ್ತಿಲ್ಲ. ಈಗಲೇ ಎಲ್ಲಕ್ಕಿಂತ ಮಿಗಿಲಾದ ಸುಸಮಯ ಎಂದು ಅವನ ಮನಸ್ಸಿಗನಿಸುತ್ತೆ.

ಇಂದು ಕೂಡ ಲೀಲಾ ಗಾಜಿನ ಬಾಗಿಲ ಬಳಿ ಬಂದು ಕ್ಷಣ ನೆರಳಿನ ಆಕೃತಿಯಂತೆ ಬಂದು ನಿಂತುಕೊಂಡಿದ್ದಳು. ದ್ವಂದ್ವವೋ? ಅಥವಾ ನಿರೀಕ್ಷೆಯೋ? ಅನಂತರ ಶ್ಯಾಮನನ್ನು ಆಪಾದಮಸ್ತಕ ನೋಡಿ, ಚಕಿತಳಾಗಿ ಬಾಗಿಲು ತೆರೆದು ಲೀಲಾ ರಸ್ತೆಗೆ ಬಂದು, ಧೀರಳಾಗಿ ನಡೆಯುತ್ತಾ ಮುಂದೆ ಹೋದಳು.

ಮೊದಲು ಸ್ವಲ್ಪ ಹೊತ್ತು ಶ್ಯಾಮ ಇದನ್ನು ನಂಬಲಿಲ್ಲ. ಆ ಹುಡುಗಿ ಲೀಲಾಳೇ ಎಂದು ಅವನಿಗೆ ತಿಳಿಯಿತು.

ನಿಶ್ಯಬ್ದವಾಗಿ ಶ್ಯಾಮ ಕಂಬಕ್ಕೊರಗಿದ ತನ್ನ ದೇಹವನ್ನು ಕಂಬದಿಂದ ಬೇರ್ಪಡಿಸಿದ. ಅವನ ಶರೀರ ಕಂಪಿಸುತ್ತಿತ್ತು. ನಾನಾ ರಹಸ್ಯಮಯ ಸಂಶಯ ಅವನೊಳಗೆ ಆಟವಾಡುತ್ತಿತ್ತು. ತುಂಬಾ ಜೋರಾಗಿ ನಗಬೇಕು ಎಂದು ಅವನಿಗನ್ನಿಸಿತು. ಮುಖ ಮುಚ್ಚಿಕೊಂಡು ಜೋರಾಗಿ ಅಳಬೇಕೆಂದೆನಿಸಿತು. ನೀನು ಲೀಲಾ, ನೀನು ಯಾವ ಲೀಲಾ? ಒಬ್ಬಳೇ ನನ್ನೊಡನೆ ಪಕ್ಕದಲ್ಲಿ ನಡೆದು ಹೋಗುತ್ತಾ ಇದೀಯಾ.

ಶ್ಯಾಮ ಬೆಕ್ಕಿನಂತೆ ನಿಶ್ಯಬ್ದವಾಗಿ ಹೆಜ್ಜೆ ಇಟ್ಟು, ಪತ್ತೇದಾರಿಯಂತೆ ಲೀಲಾಳ ಮೇಲೆ ಕಣ್ಣಿಟ್ಟು, ನಡೆಯುತ್ತಾ ಗುಂಪಿನ ಮಧ್ಯೆ ತನ್ನನ್ನು ಬಚ್ಚಿಟ್ಟುಕೊಳ್ಳುವ ಪ್ರಯತ್ನ ಮಾಡುತ್ತಾನೆ. ಶ್ಯಾಮ ನಡೆಯುತ್ತಾ ಮುಂದೆ ಸಾಗುತ್ತಾನೆ.

ಬಾದಾಮಿ ಬಣ್ಣದ ಸೀರೆಗೆ ಅಂಚಿನಲ್ಲಿ ಅನೇಕ ಬಣ್ಣದ ಪಟ್ಟೆಯಿರುವ ಸೀರೆಯನ್ನು ಲೀಲಾ ಉಟ್ಟಿದ್ದಾಳೆ. ಉದ್ದ ಜಡೆಯಾಗಿ ಕೂದಲನ್ನು ಹೆಣೆದುಕೊಂಡಿದ್ದಾಳೆ. ಹಿಂದಿನಿಂದಲೂ ಲೀಲಾ ತುಂಬಾ ಪವಿತ್ರಳಾಗಿ ಕಾಣಿಸುತ್ತಾಳೆ. ಆಲಸಿಯಂತೆ ನಿಧಾನಿಸಿ ನಡೆಯುತ್ತಿದ್ದಾಳೆ. ತನ್ನ ಎಡಗೈಯನ್ನು ಎದೆಯ ಮೇಲೆ ಮಡಿಚಿಟ್ಟುಕೊಂಡಿದ್ದಾಳೆ ಅಂತ ಕಾಣಿಸುತ್ತದೆ. ಬಹುಶಃ ಅವಳು ತನ್ನ ಬಿಳಿಯ ಹ್ಯಾಂಡ್ ಬ್ಯಾಗನ್ನು ಎದೆಗೊತ್ತಿ ಹಿಡಿದುಕೊಂಡಿರಬೇಕು. ಕುತ್ತಿಗೆಗೆ ಕಟ್ಟಿಕೊಂಡ ಕಾಶ್ಮೀರೀ ಸ್ಕಾರ್ಫಿನ ಅಂಚು ಗಾಳಿಗೆ ಹಾರಾಡುತ್ತಿದೆ.

ರಸ್ತೆಯಲ್ಲಿ ತುಂಬಾ ಗುಂಪಿದ್ದರೂ ಜನನಿಬಿಡವಾಗಿದೆ ಎಂದು ಶ್ಯಾಮನಿಗನಿಸುವುದಿಲ್ಲ. ಅವನ ಹಾಗೂ ಲೀಲಾಳ ನಡುವೆ ತುಂಬಾ ಶೂನ್ಯ ಜಾಗವಿದೆ ಎಂದೆನಿಸುತ್ತದೆ. ಲೀಲಾ ಕುತ್ತಿಗೆ ಹಿಂದೆ ತಿರುಗಿಸುತ್ತಲೇ ಕಣ್ಣು ಕಣ್ಣು ಕೂಡುವ ಸಂಭವವಿದೆ. ಅವನ ಶೂನ್ಯ ಎದೆಯೊಳಗೆ

ಜಿಂಕೆಗಳು ಓಡುತ್ತಿವೆ. ಶರೀರದೊಳಗೆ ರಹಸ್ಯಮಯ ಮೇಘಗಳು ಘರ್ಜಿಸುತ್ತಿವೆ. ಮಳೆ ಬೀಳುತ್ತಿದೆ. ಒಂದು ಕಪ್ಪು ರೈಲು ಗಾಡಿಯು ಉದ್ದನೆಯ ಒಂದು ಸೇತುವೆಯನ್ನು ದಾಟುತ್ತಿದೆ. ಒಂದು ವೇಳೆ ಕಣ್ಣು ಕಣ್ಣು ಕೂಡಿದರೆ.... ಒಂದು ವೇಳೆ ಕಣ್ಣು ಕಣ್ಣು ಕೂಡಿಯೇ ಬಿಟ್ಟರೆ... ಲೀಲಾ ಒಂದು ವೇಳೆ ಮಾತನಾಡಿಸಿದರೆ! ನೀವು ಯಾರು ಅಂತ ಒಂದು ವೇಳೆ ಪ್ರಶ್ನಿಸಿದರೆ!

ಈ ರೀತಿ ಯೋಚಿಸುತ್ತಲೇ ಶ್ಯಾಮನ ಕೈಕಾಲು ತಣ್ಣಗಾಗುತ್ತೆ. ರಸ್ತೆಯಲ್ಲಿ ನಡೆಯುತ್ತಲೇ ಅವನು ನಗುತ್ತಾನೆ. ಹಾಗಾದರೆ ಭಯಂಕರ ವಿಸ್ಫೋಟವಾಗುತ್ತದೆ. ಅಥವಾ ರಸ್ತೆ ಮಾತನಾಡಲು ಪ್ರಾರಂಭಿಸುತ್ತೆ. ಆಗ ಶ್ಯಾಮ ನಿಶ್ಚಿಂತನಾಗಿ ತನ್ನ ಪರಿಚಯವನ್ನು ಮರೆತುಬಿಡುತ್ತಾನೆ. ಲೀಲಾಳ ಮುಂದೆ ಪಾಠ ಮರೆತು ಹೋದ ಹುಡುಗನಂತೆ, ಭಯದ ಕಣ್ಣುಗಳಿಂದ ಅವಳನ್ನು ದಿಟ್ಟಿಸಿ ನೋಡುತ್ತಾನೆ. ನಾನು ಯಾರು ಅಂತ ನನ್ನನ್ನು ಪ್ರಶ್ನಿಸಬೇಡ. ನನಗೆ ಗೊತ್ತಿಲ್ಲ ಅಂತ ಅವಳಿಗೆ ಹೇಳುತ್ತಾನೆ.

ಎದುರಿನ ತಿರುವಿನಲ್ಲಿ ರಸ್ತೆ ದಾಟಲೆಂದು ಜನ ಗುಂಪಾಗಿ ನಿಂತುಕೊಂಡಿದ್ದಾರೆ. ವಾಹನಗಳನ್ನು ಪೋಲಿಸಿನವನ ಎತ್ತಿದ ಕೈಗಳು ಅಡ್ಡ ಕಟ್ಟಿದವು. ಲೀಲಾ ಸ್ವಲ್ಪ ನಿಂತು ಮುಂದೆ ನಡೆಯುತ್ತಾಳೆ. ರಸ್ತೆಯನ್ನು ನಿಧಾನವಾಗಿ ದಾಟುತ್ತಾಳೆ. ಅವಳಿಗೆ ಬೇಗ ಹೋಗಬೇಕೆಂಬ ಆತುರವಿಲ್ಲ. ಅಥವಾ ತನ್ನ ಅಕ್ಕಪಕ್ಕದ ಪರಿವೆಯಿಲ್ಲ. ಅಸ್ತಿತ್ವವಿಲ್ಲದ ನೆರಳಿನಂತೆ ಜನರು ಓಡಾಡುತ್ತಿದ್ದಾರೆ. ಶ್ಯಾಮ ಅವರಲ್ಲಿ ಯಾರೊಬ್ಬರನ್ನೂ ಗುರುತಿಸುವುದಿಲ್ಲ. ವಾಸ್ತವಿಕವಾಗಿ ಇವರೆಲ್ಲಾ ಇದ್ದಾರಾ ಎನ್ನುವುದೂ ಅವನಿಗೆ ಗೊತ್ತಿಲ್ಲ. ಅದು ಅವರಿಗೂ ಗೊತ್ತಿಲ್ಲ. ಶ್ಯಾಮ ಈ ಎಲ್ಲಾ ನೆರಳನ್ನು ಬೇಧಿಸಿಕೊಂಡು ಮುಂದೆ ನಡೆಯುತ್ತಾನೆ. ಬಸ್ ಸ್ಟಾಪಿನಿಂದ, ಯಾರೋ ಒಬ್ಬರು ಲೀಲಾಳನ್ನು ಉದ್ದೇಶಿಸಿ ಛೇಡಿಸುತ್ತಾರೆ. ಶ್ಯಾಮನ ಮೈ ಬಿಸಿಯಾಗುತ್ತದೆ. ನಿಂತು ಹಿಂದೆ ತಿರುಗಿ, ಅಸೂಯಾಪರ ಧ್ವನಿಯಲ್ಲಿ ಪಿಸುಗುಟ್ಟುತ್ತಾನೆ. ಎಚ್ಚರಿಕೆ ನಾನು ಕಾವಲಿಗಿದ್ದೇನೆ, ನಗುತ್ತಾ ಪುನಃ ಮುಂದೆ ನಡೆಯುತ್ತಾನೆ. ತಾನು ಜೀವಂತನಾಗಿದ್ದೇನೆಂದು ಅವನ ಮನಸ್ಸಿಗನಿಸುತ್ತೆ. ಶರೀರದೊಳಗೆ ಕಾರ್ಯನಿರತ ಕಾರ್ಖಾನೆಯ ಶಬ್ದ.

ಸುಸಮಯ –ಭೂಮಿಯಲ್ಲಿ ತಾನೀಗ ಇರುವ ಇದೇ ಎಲ್ಲಕ್ಕೂ ಮಿಗಿಲಾದ ಸುಸಮಯ ಎಂದು ಶ್ಯಾಮನಿಗನಿಸುತ್ತೆ.

ಲೀಲಾಳ ನಡಿಗೆ ಇನ್ನೂ ನಿಧಾನವಾಗುತ್ತದೆ. ಅವಳು ಫುಟ್‌ಪಾತಿನ ಮೇಲೆ ಅನ್ಯಮನಸ್ಕಳಾಗಿ ನಡೆಯುತ್ತಿದ್ದಾಳೆ. ಶೋಕೇಸಿನ ಸಾಮಾನುಗಳನ್ನು ನೋಡುತ್ತಾ ನಡೆಯುತ್ತಾಳೆ. ನಡೆಯುತ್ತಾ ಹಾಗೇ ನಿಂತುಬಿಡುತ್ತಾಳೆ. ಗಮನವಿಟ್ಟು ಯಾವುದೋ ಸಾಮಾನನ್ನು ನೋಡುತ್ತಾಳೆ. ನಂತರ ಹೆಜ್ಜೆಯ ಮೇಲೆ ಹೆಜ್ಜೆ ಇಟ್ಟು ನಡಿಯುತ್ತಾಳೆ. ಲೀಲಾ ಅನ್ಯಮನಸ್ಕಳಾಗಿ ಕಾಣಿಸುವಷ್ಟೇನು ಅನ್ಯಮನಸ್ಕಳಾಗಿಲ್ಲ ಎನ್ನುವುದು ಶ್ಯಾಮನಿಗೆ ಚೆನ್ನಾಗಿ ಗೊತ್ತು. ಲೀಲಾಳ ದೇಹ ಎಚ್ಚರಿಕೆಯಿಂದಿದೆ. ಕಿವಿ ಚುರುಕು. ಶ್ಯಾಮ ತನ್ನ ಹಿಂದೆ ಇರುವುದು ಅವಳಿಗೆ ಚೆನ್ನಾಗಿ ಗೊತ್ತು. ದೊಡ್ಡ ರಸ್ತೆಯಲ್ಲಿ ಲೀಲಾ ಒಂಟಿ. ನಿಶ್ಶಬ್ದವಾಗಿ ಲೀಲಾ – ಹತ್ತಿರ ಬಾ. ನಿನ್ನ ಮುಖವನ್ನು ಸರಿಯಾಗಿ ನೋಡಲು ಬಿಡು. ನೀನೂ ಹಿಂದೂನಾ? ನಿನ್ನ

ಗೋತ್ರವೇನು? ನಿನ್ನ ಹೆಸರು ಪರಿಚಯ ನನಗೆ ಹೇಳು. ನಿನ್ನ ಒಡಹುಟ್ಟಿದವರು ಯಾರು? ನಿನ್ನ ಕೆಲಸ ಏನು?... ಎಂದು ಹೇಳುತ್ತಾ ಇದ್ದಾಳೋ ಏನೋ ಯಾರಿಗೆ ಗೊತ್ತು.

ಎಲ್ಲಕ್ಕಿಂತ ಇದು ಮುಖ್ಯವಾದ ಪ್ರಶ್ನೆ. ಲೀಲಾ ಅದನ್ನು ತಿಳಿದುಕೊಳ್ಳುವುದು ಮುಖ್ಯ. ಶ್ಯಾಮ ಅದಕ್ಕೆ ಮನದಲ್ಲೇ ಉತ್ತರ ಕೊಟ್ಟುಬಿಡುತ್ತಾನೆ. ನನ್ನ ಹೆಸರು ಶ್ಯಾಮ ಚಕ್ರವರ್ತಿ. ಕಮಲಾಕ್ಷ ಚಕ್ರವರ್ತಿ ನನ್ನ ಅಪ್ಪ. ನಮ್ಮದು ಕೌಂಡಿಲ್ಯ ಗೋತ್ರ. ವಿಕ್ರಮಪುರದ ಬಾನೀಖಾಡಾ ಗ್ರಾಮದಲ್ಲಿ ನಮ್ಮ ಮನೆ... ಇಲ್ಲಿ ನನಗೆ ಅಣ್ಣ ತಮ್ಮ ಅಕ್ಕ ಯಾರೂ ಇಲ್ಲ. ತಂಗಿ ಒಬ್ಬಳೇ. ಮುರ್ಶಿದಾಬಾದಿನಲ್ಲಿ ಅವಳ ಮದುವೆಯಾಗಿತ್ತು. ಅನಂತರ ಅವಳ ಸುದ್ದಿ ಏನು ಅಂತ ಗೊತ್ತಿಲ್ಲ. ಸೇಂಟ್ ಎಂಡ್ ಮಿಲರ್ ಕಂಪೆನಿಯಲ್ಲಿ ನಾನು ಚಿಕ್ಕ ಸಾಹೇಬನಾಗಿದ್ದೆ, ನನ್ನ ಮೇಲಿನವ ನನ್ನನ್ನು ಬ್ಯಾಸ್ಟರ್ಡ್ ಎಂದು ಬೈದದ್ದಕ್ಕೆ ನಾನು ಕೆಲಸ ಬಿಟ್ಟುಬಿಟ್ಟೆ.... ಆದರೂ ನಾನು ಯಾರು ಅಂತ ನಿಜ ಹೇಳಲು ಅಭ್ಯಂತರವೇನು? ನಿನಗೆ ನಾನು ಯಾರು ಅಂತ ಗೊತ್ತಿಲ್ಲ. ನಾನು ಯಾವ ತರಹ...

ಲೀಲಾ ಇನ್ನೂ ಮೆಲ್ಲನೆ ನಡೆಯುತ್ತಾಳೆ. ಯಾವುದಾದರೊಂದು ಅಂಗಡಿಯ ಮುಂದೆ ಸ್ವಲ್ಪ ಹೊತ್ತು ನಿಂತುಕೊಳ್ಳುತ್ತಾಳೆ. ಶೋಕೇಸ್ ನೋಡಿ ಪುನಃ ಮುಂದೆ ಸಾಗುತ್ತಾಳೆ. ಧೈರ್ಯವಂತ ವ್ಯಕ್ತಿಗಳು ಅವಳನ್ನು ಸರಿಸಿಕೊಂಡೇ ನಡೆಯುತ್ತಾರೆ.

ಕ್ರಮೇಣ ಅವರು ಲಿಂಡ್‌ಸೇ ಸ್ಟ್ರೀಟಿನ ಹತ್ತಿರ ನಡೆದು ಬಂದರು. ಕ್ರಮೇಣ ರಸ್ತೆಯ ತಿರುವು ಬರುತ್ತದೆ. ರಸ್ತೆ ದಾಟುವ ಮೊದಲು ಲೀಲಾ ಒಮ್ಮೆ ಅನ್ಯಮನಸ್ಕಳಾಗಿ ಹಿಂದೆ ತಿರುಗಿ ನೋಡುತ್ತಾಳೆ. ಆದರೂ ದುಂಬಿಯ ತರಹ ಅದೇ ಎರಡು ಕಣ್ಣುಗಳು ಶ್ಯಾಮನೆದೆಯನ್ನು ಸೀಳುತ್ತವೆ. ಅವನ ಎದೆ ನೋವಿನಿಂದ ಚಡಪಡಿಸುತ್ತದೆ. ಎದೆಯೊಳಗೆ ತಟ್ಟನೆ ಜಲ್ಲೋಜ್ವಾಸ ಉಬ್ಬಿ, ಅವನಿಗೆ ಉಸಿರಾಡಲು ತೊಂದರೆಯಾಗುತ್ತದೆ.

ಲೀಲಾ ನಿಶ್ಶಬ್ದವಾಗಿ ಹೇಳುತ್ತಾಳೆ – ಹತ್ತಿರ ಬಾ. ಶ್ಯಾಮ ಅನ್ಯಮನಸ್ಕನಾಗಿ ತಲೆ ಅಲ್ಲಾಡಿತ್ತಾನೆ. ಬೇಡ ನನಗೆ ಗೊತ್ತು ನಾನು ಹತ್ತಿರ ಬರಲು ಪ್ರಯತ್ನಿಸಿದರೆ, ಅಕ್ಕಪಕ್ಕ ಮನೆ ಮಠ ಎಲ್ಲಾ ಕಂಪಿಸುತ್ತವೆ. ಬೇರು ಕಿತ್ತು ಗಿಡಮರಗಳು ಉರುಳುತ್ತವೆ. ಗಾಳಿ ಆರ್ತನಾದ ಮಾಡಿ ಹೇಳುತ್ತದೆ, ರಕ್ಷಿಸು. ರಕ್ಷಣೆ ಮಾಡಿರಿ. ನನಗೆ ಗೊತ್ತು ಅದಕ್ಕೆ ಇಲ್ಲಿ ಬೇಡ. ಬೇರೆ ಯಾವುದಾದರೂ ಸುಂದರ ಭೂಮಿಯಲ್ಲಿ ನಮ್ಮಿಬ್ಬರ ಭೇಟಿಯಾಗೋದು ಉತ್ತಮ. ಇಷ್ಟು ಜನರ ನಡುವೆ, ಈ ಗುಂಪಿನ ಮಧ್ಯೆ ಬೇಡ. ನೋಡ್ತಾ ಇರು ತುಂಬಾ ಬೇಗನೆ ಒಂದು ದಿನ ಭೂಮಿಗೆ ಸುಕಾಲವನ್ನು ತರುತ್ತೇನೆ.

ಅವನಿಗೆ ಲೀಲಾಳ ಸ್ವರ ಕೇಳುತ್ತದೆ – ಮಾತನಾಡು.

ಬೇಡ. ಶ್ಯಾಮ ತಲೆ ಅಲ್ಲಾಡಿಸುತ್ತಾನೆ. ಇಲ್ಲಿ ಬೇಡ. ನಿನ್ನೊಡನೆ ಮಾತನಾಡಲೆಂದೇ ನಾನು ಬೇರೊಂದು ಭಾಷೆಯನ್ನು ತಯಾರಿಸುತ್ತೇನೆ. ಆ ಭಾಷೆಯಲ್ಲಿ ಯಾವ ಕಠಿಣ ರೂಢ ಅಥವಾ ಅಶ್ಲೀಲ ಶಬ್ದಗಳು ಇರುವುದಿಲ್ಲ. ಆ ಭಾಷೆಯಲ್ಲಿ ಯಾವ ರೀತಿಯ ಬೈಗಳೂ ಇರುವುದಿಲ್ಲ. ಮನುಷ್ಯರ ಭಾಷೆ ಈಗ ಅಷ್ಟೇನು ಚೆನ್ನಾಗಿಲ್ಲ. ಅವರು ತಿಳಿದುಕೊಳ್ಳಬೇಕಾಗಿರುವ ಶಬ್ದಗಳು

ಇನ್ನೂ ತುಂಬಾ ಇವೆ. ರಹಸ್ಯಮಯ, ಸಿಟ್ಟು, ಉದ್ದೇಶ, ಅವಹೇಳನ, ಎದುರ್ಮಾತು ಮೊದಲಾದ ಈ ಎಲ್ಲಾ ಶಬ್ದಗಳನ್ನು ನೀನು ಮೊದಲು ಮರೆತುಬಿಡು. ಅನಂತರ...

ರಸ್ತೆಯನ್ನು ಲೀಲಾ ದಾಟಲಿಲ್ಲ. ಅವಳು ಎಡಗಡೆಯ ಓಣಿಯಲ್ಲಿ ತಿರುಗಿದಳು. ಒಂದೆರಡು ಹೆಜ್ಜೆ ನಡೆದು, ಒಂದು ತೆರೆದ ಬಾಗಿಲಿನ ಮುಂದೆ ತಟ್ಟನೆ ನಿಂತುಕೊಂಡಳು. ಹಿಂದೆ ತಿರುಗಿ ಅನ್ಯಮನಸ್ಕಳಾಗಿ, ನಾಲ್ಕೂ ಕಡೆ ನೋಡಿ, ಬಾಗಿಲೊಳಗೆ ಹೊರಟು ಹೋದಳು.

ಶ್ಯಾಮ ಮೆಲ್ಲ ಮೆಲ್ಲನೆ ಬಾಗಿಲೆದುರು ಬಂದು ನಿಂತುಕೊಂಡ. ಒಳಗೆ ಒಂದು ಮೆಟ್ಟಲು ಮಾತ್ರ ಕಾಣಿಸುತ್ತಿದೆ – ಸ್ಟೀಮರಿನ ಮೆಟ್ಟಿಲುಗಳ ತರಹ ಸುಂದರವಾದ ಕಬ್ಬಿಣದ ಮೆಟ್ಟಲುಗಳು. ಮೃದುವಾದ ರೇಲಿಂಗ್ಸ್ ಉಜ್ವಲ ದೀಪ ಉರಿಯುತ್ತಿದೆ. ಲೀಲಾ ಮೆಟ್ಟಲ ಬಳಿ ಇಲ್ಲ, ಮೇಲೆ ಹತ್ತಿ ಹೊರಟು ಹೋಗಿದ್ದಾಳೆ. ಹೊಸದಾಗಿ ಬಣ್ಣ ಹಚ್ಚಿದ ವಾಸನೆ. ಜೊತೆಗೆ ಅದೇ ಸುವಾಸನೆ, ಪೌಡರಿನ ಪರಿಮಳ.

ಇದೇನು ರೆಸ್ಟೋರೆಂಟಾ? ಶ್ಯಾಮ ಒಂದೆರಡು ಹೆಜ್ಜೆ ಹಿಂದೆ ಸರಿದು ಬಾಗಿಲ ಮೇಲೆ ನೋಡಿದ. ಹೌದು ಸೈನ್ ಬೋರ್ಡಿನಲ್ಲಿ ರೆಸ್ಟೋರೆಂಟಿನ ಹೆಸರು ಬರೆದಿದೆ. ಇಲ್ಲಿ ಲೀಲಾಳಿಗೋಸ್ಕರ ಯಾರೋ ನಿರೀಕ್ಷಿಸುತ್ತಿದ್ದಾರೆ ಎನ್ನುವುದು ಶ್ಯಾಮನಿಗೆ ಗೊತ್ತು. ಆ ವ್ಯಕ್ತಿ ಯಾರು ಎಂದು ತಿಳಿಯುವುದು ಶ್ಯಾಮನಿಗೆ ತುಂಬಾ ಮುಖ್ಯ. ಯಾರಾದರೂ ಮೋಟರ್ ಸೈಕಲ್ ನಿಲ್ಲಿಸಿದ್ದಾರೆ ಎಂದು ಅವನು ಎಲ್ಲಾ ಕಡೆ ನೋಡಿದ. ಆದರೆ ಯಾರೂ ನಿಲ್ಲಿಸಿರಲಿಲ್ಲ.

ಶ್ಯಾಮನಿಗೆ ಏನೂ ಅನ್ನಿಸಲಿಲ್ಲ. ಅವನು ನಿಧಾನವಾಗಿ ಮೆಟ್ಟಲು ಹತ್ತಿ ಮೇಲೆ ಹೋದ.

ದಿವಾನಖಾನೆಯಂತಹ ದೊಡ್ಡ ಕೋಣೆ. ಅಲ್ಲಿ ಬೆಳಕು ಎಷ್ಟು ಉಜ್ವಲವಾಗಿತ್ತೆಂದರೆ ಕಣ್ಣು ಕೋರೈಸುತ್ತಿತ್ತು. ಚಮಚ ಹಾಗೂ ಟೇಬಲಿನ ಮೇಲಿನ ಗಾಜಿನಿಂದ ಬೆಳಕು ಹೊಕ್ಕು ಬಂದು, ಗುಂಡು ಸೂಜಿಯ ತರಹ ಕಣ್ಣು ಕುಕ್ಕುತ್ತಿತ್ತು. ಅವನಿಂದ ಸ್ವಲ್ಪ ಹೊತ್ತು ಲೀಲಾಳನ್ನು ನೋಡಲಾಗಲಿಲ್ಲ. ಅವನು ತನ್ನ ಅಡ್ಡಾದಿಡ್ಡಿ ಪೋಷಾಕು, ಒಣಗಿದ ಮುಖದಲ್ಲೇ ಪಳಪಳ ಹೊಳೆಯುವ ಈ ಕೋಣೆಯಲ್ಲಿ ನಿಂತುಕೊಂಡಿದ್ದನು.

ಸ್ವಲ್ಪ ಹೊತ್ತಾದ ನಂತರ ಅವನಿಗೆ ಲೀಲಾ ಕಾಣಿಸಿದಳು. ರೆಸ್ಟೋರೆಂಟಿನಲ್ಲಿ ಅಷ್ಟೇನು ಗದ್ದಲವಿರಲಿಲ್ಲ. ದೂರದ ಟೇಬಲಿನಲ್ಲಿ, ಮುಖ ಸ್ವಲ್ಪ ತಗ್ಗಿಸಿಕೊಂಡು ಲೀಲಾ ಕುಳಿತುಕೊಂಡಿದ್ದಳು. ಲೀಲಾ ಒಬ್ಬಳೇ ಇಲ್ಲ. ಅವಳೆದುರಿನ ಕುರ್ಚಿಯಲ್ಲಿ ಸುಂದರ ಮುಖಚರ್ಯೆಯ ಒಬ್ಬಾತ ಕುಳಿತುಕೊಂಡಿದ್ದಾನೆ.

ಅರುಣ ಅಲ್ವಾ ಶ್ಯಾಮ ಕಣ್ಣು ಸಣ್ಣದು ಮಾಡಿ ನೋಡುತ್ತಾನೆ. ಹೌದು ಅರುಣನೇ.

ಅರುಣ ಅವನನ್ನು ಮೊದಲು ನೋಡಿದ. ಅದರೊಂದಿಗೆ ಅರುಣನ ಎರಡೂ ಕಣ್ಣುಗಳು ಹಿಗ್ಗಿದವು. ಆದರೆ ತಕ್ಷಣ ಅವನ ಮುಖ ಸಪ್ಪೆಯಾಯಿತು. ಅರುಣನ ಮುಖ ಹಾಗೇಕಾಯಿತೆಂದು ಶ್ಯಾಮನಿಗೆ ಅರ್ಥವಾಗಲಿಲ್ಲ. ಶ್ಯಾಮ ನಗು ಮುಖದಿಂದ ಅರುಣನ ಕಡೆಯೇ ನೋಡುತ್ತಿದ್ದ.

ಸ್ವಲ್ಪ ಹೊತ್ತಾದ ಮೇಲೆ ಅರುಣ ಪಿಸುಗುಟ್ಟಿದ, ಶ್ಯಾಮ ಬಾ ಇಲ್ಲಿ. ಆಶ್ಚರ್ಯ. ಲೀಲಾ ಅವನ ಕಡೆ ತಿರುಗಿಯೂ ನೋಡಲಿಲ್ಲ.

ಶ್ಯಾಮ ಅರುಣನ ಕರೆಯನ್ನು ಗಮನಿಸಲಿಲ್ಲ. ನಡುವೆ ಮೂರು ಟೇಬಲ್ ಬಿಟ್ಟು ಅವನು ಒಬ್ಬನೇ ಕುಳಿತುಕೊಂಡ. ಮುದುಕ ಬೇರರ್‌ನಿಗೆ ಒಂದು ಕಪ್ ಚಹ ತಂದುಕೊಡಲು ಹೇಳಿದ.

ಶ್ಯಾಮ ವಾರೆಗಣ್ಣಿನಿಂದ ಎಲ್ಲವನ್ನೂ ಗಮನಿಸುತ್ತಾನೆ. ಅರುಣನ ಮುಖ ಕೆಂಪಗಾಗಿದೆ. ನಾಚಿಕೆ ಹಾಗೂ ಭಯದ ಸ್ವಭಾವದವನಂತೆ ಕಾಣಿಸುತ್ತಾನೆ. ಶ್ಯಾಮ ಆಶ್ಚರ್ಯಗೊಂಡ; ಅರುಣ ಈ ರೀತಿ ಆಗುವ ಕಾರಣವಿರಲಿಲ್ಲ. ಶ್ಯಾಮ ತನ್ನ ಭೂತಕಾಲದ ಚರಿತ್ರೆಯಂತೆ, ಅರುಣನ ಚರಿತ್ರೆಯನ್ನೂ ಬಲ್ಲ. ಬೇರೊಬ್ಬ ವ್ಯಕ್ತಿಯ ಬದಲು ಅರುಣನನ್ನು ನೋಡಿ ಶ್ಯಾಮನಿಗೆ ಹಾಯೆನಿಸುತ್ತದೆ. ಶ್ಯಾಮನಿಗೆ ಗೊತ್ತು ಅವನು ಎಲ್ಲಿಯವರೆಗೂ ಇರುತ್ತಾನೋ ಅಲ್ಲಿಯವರೆಗೂ ಲೀಲಾಳಿಗೆ ಅರುಣನಿಂದ ಭಯವೇನೂ ಇಲ್ಲ. ಶ್ಯಾಮ ಅರುಣನಿಗಿಂತ ತುಂಬಾ ಖದೀಮ.

ಅರುಣ ಲೀಲಾಳೊಂದಿಗೆ ಮಾತನಾಡದಿರುವುದನ್ನು ಶ್ಯಾಮ ಗಮನಿಸಿದ. ಅರುಣ ಚಮಚ ಚಾಕುವಿನಿಂದ ಆಲೂಗಡ್ಡೆ ಬೋಂಡವನ್ನು ತುಂಡು ಮಾಡಿ, ಅದರ ತುಣುಕನ್ನು ಬಾಯಿಗೆ ಹಾಕಿಕೊಂಡ. ತುಂಬಾ ಉತ್ತೇಜಿತ ಭಾವದಿಂದ ಅವನ ಚಮಚ ತಟ್ಟೆಗೆ ತಾಕಿದ ಶಬ್ದ. ಅಕಾರಣವಾಗಿ ಅರುಣ ಕರವಸ್ತ್ರದಿಂದ ಮುಖ ಒರೆಸಿಕೊಳ್ಳುತ್ತಾನೆ. ಅವನ ಕಣ್ಣು ಲೀಲಾಳ ತಲೆಯ ಮೇಲಿನಿಂದ ಹಾದು ಎದುರಿನ ಗೋಡೆಯ ಮೇಲೆ ಹರಿದಾಡುತ್ತಿವೆ. ಅರುಣನ ಮುಖ ಹಾಗೂ ಪೋಷಾಕು ಸುಂದರವಾಗಿದೆ. ಆ ಭಾವ ಭಂಗಿ ಶ್ಯಾಮನಿಗೆ ತುಂಬಾ ಇಷ್ಟ. ಲೀಲಾ ಶಾಂತ ಹಾಗೂ ಸಹಜ ಭಂಗಿಯಲ್ಲಿ ಕುಳಿತುಕೊಂಡಿದ್ದಾಳೆ. ತಗ್ಗಿಸಿದ ತಲೆ ಎತ್ತಿ ಅರುಣನ ಕಡೆ ನೋಡುತ್ತಿದ್ದಾಳೆ. ಅವಳ ಮುಖದಲ್ಲಿ ಒಂದು ತರಹ ಕಾತುರದ ಭಾವ. ತಟ್ಟನೆ ಅವಳು ಹಕ್ಕಿಯ ಉಲಿಯ ತರಹ, ಸ್ವಾಭಾವಿಕಕ್ಕಿಂತ ಸ್ವಲ್ಪ ಜೋರಾಗಿ, ಮಧುರವಾಗಿ ನೀವು ನನ್ನನ್ನು ಕರೆದಿದ್ದೀರಾ? ಎಂದು ಕೇಳಿದಳು.

ಅರುಣ ಸ್ವಲ್ಪ ಕಸಿವಿಸಿಗೊಂಡು ನಕ್ಕು ಹೌದು ಎನ್ನುತ್ತಾನೆ. ನಾನು ಬಂದಿದ್ದೇನೆ. ತುಂಬಾ ಮೃದು ಧ್ವನಿಯಲ್ಲಿ ಅರುಣ ಏನೋ ಹೇಳಿದ. ಶ್ಯಾಮನಿಗದು ಕೇಳಿಸಲಿಲ್ಲ. ಅರುಣನ ಮಾತಿಗುತ್ತರವಾಗಿ ಲೀಲಾ ಕೇವಲ ಇಲ್ಲ ಎಂದು ತಲೆ ಅಲ್ಲಾಡಿಸಿದಳು.

ಅರುಣ ಲೀಲಾಳನ್ನು ಇಲ್ಲಿಗೇಕೆ ಕರೆದುಕೊಂಡು ಬಂದಿದ್ದಾನೆ ಎನ್ನುವುದು ಶ್ಯಾಮನಿಗೆ ಗೊತ್ತು. ಲೀಲಾ ಶಾಂತಳಾಗಿ ಕಾಣಿಸುತ್ತಾಳೆ – ಏನೋ ಒಂದು ರೀತಿ ಅವಳೊಂದಿಗೆ ಸಮರ್ಥ ವ್ಯಕ್ತಿ ಇದ್ದು, ಅವಳನ್ನು ಆಪತ್ತಿನಲ್ಲಿ ರಕ್ಷಿಸುತ್ತಾನೆ ಎನ್ನುವಂತೆ, ಲೀಲಾಳ ಕಣ್ಣು ಮುಖದಲ್ಲೂ ಅದೇ ಭಾವ. ಅರುಣ ತನ್ನ ಒಣಗಿದ ತುಟಿಯನ್ನು ಸವರಿಕೊಳ್ಳುತ್ತಾನೆ. ಹಾಗೂ ಶ್ಯಾಮನ ಕಣ್ಣುಗಳಿಂದ ಪೆದ್ದನಂತೆ ತಪ್ಪಿಸಿಕೊಳ್ಳಲು ಪ್ರಯತ್ನಿಸುತ್ತಾನೆ. ಶ್ಯಾಮ ಎಲ್ಲವನ್ನೂ ಗಮನಿಸಿ ನಗುತ್ತಾನೆ. ಅವನ ಟೇಬಲಿನ ಮೇಲಿಟ್ಟ ಚಹ ಮೆಲ್ಲನೆ ತಣ್ಣಗಾಗುತ್ತಾ ಇದೆ.

ಅವರಿಬ್ಬರೂ ಪುನಃ ಮಾತನಾಡುವುದಿಲ್ಲ. ಸುಮ್ಮನೆ ಕುಳಿತುಕೊಂಡಿರುತ್ತಾರೆ. ಲೀಲಾಳ ಎದುರು ತಿಂಡಿಯ ತಟ್ಟೆ ಇದೆ. ಶ್ಯಾಮ ಸ್ವಲ್ಪ ವಿಸ್ಮಿತನಾಗುತ್ತಾನೆ. ಲೀಲಾಳಿಗೇನು ಶ್ಯಾಮ ಅವಳ ಹತ್ತಿರವೇ ಕುಳಿತುಕೊಂಡಿದ್ದಾನೆಂದು ಗೊತ್ತಿಲ್ಲವೇ? ಲೀಲಾಳಿಗೆ ಗೊತ್ತು ಎಂದು ಸ್ವಲ್ಪ ಹೊತ್ತಾದ ಮೇಲೆ ಶ್ಯಾಮನಿಗೆ ಗೊತ್ತಾಗುತ್ತದೆ.

ಎಡಗೈಯಲ್ಲಿ ನೀರಿನ ಲೋಟ ಹಿಡಿದು ಬಲಗೈಯಿಂದ ಲೀಲಾ ತನ್ನ ಜಡೆಯನ್ನು ಎದೆಯ ಮೇಲೆಳೆದುಕೊಳ್ಳುತ್ತಾಳೆ. ಅದೇ ಭಂಗಿಯಲ್ಲಿ, ಅರುಣನಿಗೆ ತಿಳಿಯದೆ ತಟ್ಟನೆ ನೇರವಾಗಿ, ಶ್ಯಾಮ ಎಲ್ಲಿ ಕುಳಿತುಕೊಂಡಿದ್ದಾನೆ ಎನ್ನುವುದು ತಿಳಿದಿರುವವಳಂತೆ, ಅವನ ಕಡೆ ನೇರವಾಗಿ ನೋಡುತ್ತಾಳೆ. ಶ್ಯಾಮನ ಕಣ್ಣು ಲೀಲಾಳ ಕಣ್ಣುಗಳೊಂದಿಗೆ ಬೆರೆಯುತ್ತವೆ. ಅದೇ ಕ್ಷಣದಲ್ಲಿ ಏನೋ ಚಕಿತಳಾದವಳಂತೆ, ಸ್ವಲ್ಪ ನಕ್ಕಂತೆ ಮಾಡಿ ತುಟಿ ತಿರುಗಿಸಿ, ತನ್ನ ಕಣ್ಣಿನ ಇಂಗಿತದಲ್ಲೇ ಅರುಣನಿಗೆ ಏನೋ ಸನ್ನೆ ಮಾಡಿ ಲೀಲಾ ತೋರಿಸಿದ್ದನ್ನು ಶ್ಯಾಮ ಗಮನಿಸಿದ. ನಿಶ್ಶಬ್ದವಾಗಿ, ಒಂದೆರಡು ಕ್ಷಣದಲ್ಲೇ ಈ ಎಲ್ಲಾ ಅದ್ಭುತ ಘಟನೆ ನಡೆದುಹೋಯಿತು. ನಂತರ ಸ್ವಾಭಾವಿಕ ಭಾವದಿಂದ ಲೀಲಾ ಮುಖ ತಿರುಗಿಸಿಕೊಂಡಳು.

ಮೆಲ್ಲನೆ ಇಂದು ಸಂಜೆ ಲೀಲಾ ಯಾಕೆ ಇಲ್ಲಿಯವರೆಗೂ ನಡೆದುಕೊಂಡು ಬಂದಳು ಎನ್ನುವುದು ಶ್ಯಾಮನಿಗರ್ಥವಾಗುತ್ತದೆ. ಶ್ಯಾಮ ಅವಳನ್ನು ಹಿಂಬಾಲಿಸುತ್ತಾ ಇದ್ದಾನೆ ಎನ್ನುವುದು ಲೀಲಾಳಿಗೆ ಮಾತ್ರ ಗೊತ್ತು. ಅದಕ್ಕೆ ಬುದ್ಧಿವಂತಿಕೆಯಿಂದ ಇಷ್ಟು ದೂರ ಅವನನ್ನು ಎಳೆದು ತಂದಿದ್ದಾಳೆ. ಯಾವುದೇ ಒಂದು ವಿಪತ್ತು ಆಪತ್ತಿನಲ್ಲಿ ಶ್ಯಾಮ ಅವಳನ್ನು ರಕ್ಷಿಸುತ್ತಾನೆ ಎನ್ನುವುದು ಲೀಲಾಳಿಗೆ ಚೆನ್ನಾಗಿ ಗೊತ್ತು. ಅದಕ್ಕೆ ಅವಳು – ಈ ವ್ಯಕ್ತಿಯ ಕೈಯಿಂದ ನನ್ನನ್ನು ರಕ್ಷಿಸು ಎಂದು ಶ್ಯಾಮನಿಗೆ ಹೇಳಿಬಿಟ್ಟಳು.

ಶ್ಯಾಮನಿಗೆ ಕಸಿವಿಸಿಯಾಗುತ್ತದೆ. ಅವನ ಮುಷ್ಟಿ ಬಿಗಿಯಾಗುತ್ತದೆ. ಅವನು ಹಲ್ಲು ಕಡಿಯುತ್ತಾನೆ. ಅವನು ಅರುಣನ ಕಡೆ ನೋಡುತ್ತಿದ್ದಾನೆ. ಅವನ ರಕ್ತದಲ್ಲಿ ವಿದ್ಯುತ್ ಹರಿದಂತಾಗುತ್ತದೆ. ಅವನ ಶರೀರ ಒಂದೇ ಒಂದು ಸನ್ನೆಗಾಗಿ ಕಾತುರಗೊಂಡಿದೆ. ಅರುಣ ಮೆಲು ಧ್ವನಿಯಲ್ಲಿ ಮಾತನಾಡುತ್ತಾನೆ. ಲೀಲಾ ಸಿಟ್ಟಿನಿಂದ ಇಲ್ಲ ಎಂದು ತಲೆ ಅಲ್ಲಾಡಿಸುತ್ತಾಳೆ. ಸ್ವಲ್ಪ ಹೊತ್ತು ಹೀಗೇ ಇರುತ್ತದೆ. ಶ್ಯಾಮ ಶಾಂತನಾಗಿ ಕುಳಿತು ನಿರೀಕ್ಷಿಸುತ್ತಾನೆ. ನಿಧಾನವಾಗಿ ಅವನ ತಲೆಯೊಳಗೆ ಬೇರೆ ಎಲ್ಲಾ ಭಾವನೆಗಳು ಉಪ್ತವಾಗಿ ಬಿಡುತ್ತವೆ. ಮಂಜಿನಂತೆ ಕೇವಲ ಸಿಟ್ಟು ಮನ ತುಂಬೆಲ್ಲಾ ತುಂಬಿಕೊಳ್ಳುತ್ತದೆ.

ಅರುಣ ಬಿಲ್ ಹಣ ಪಾವತಿ ಮಾಡುತ್ತಿದ್ದಾನೆ. ಲೀಲಾ ಟೇಬಲಿನಿಂದ ಬಿಳಿಯ ಹ್ಯಾಂಡ್ ಬ್ಯಾಗನ್ನು ಎತ್ತಿಕೊಳ್ಳುತ್ತಾಳೆ. ಅವರಿಬ್ಬರೂ ಎದ್ದು ನಿಂತುಕೊಂಡರು. ಅವರು ಮುಂದೆ ನಡೆದು ಬಂದರು. ಲೀಲಾ ಮುಂದಿದ್ದಾಳೆ. ಶ್ಯಾಮ ಎಲ್ಲವನ್ನೂ ಗಮನಿಸುತ್ತಾನೆ.

ಅರುಣ ಶ್ಯಾಮನ ಕಡೆ ನೋಡಿ ನಗುತ್ತಾನೆ. ಆ ನಗುವಿನಲ್ಲಿ ಯಾವೊಂದು ಇಚ್ಛೆ ಅಥವಾ ಜೀವವಿಲ್ಲ. ಅದೇ ಎತ್ತರದ ಪಿಸು ಧ್ವನಿಯಲ್ಲಿ ಹೇಳಿದ – ಶ್ಯಾಮ, ಸ್ವಲ್ಪ ಹಿಂದೆ ಮುಂದೆ ನೋಡಿ ಹೇಳಿದ, ಆಮೇಲೆ ಮಾತನಾಡೋಣ.

ಲೀಲಾ ಹಿಂತಿರುಗಿ ನೋಡಲಿಲ್ಲ. ಅದರ ಅಗತ್ಯವೇನೂ ಇಲ್ಲ. ವೃದ್ಧ ಬೇರರ್ ಟ್ರೇ ಕೈಯಲ್ಲಿ ಹಿಡಿದು ರಸ್ತೆಗಡ್ಡವಾಗಿ ಬಂದು ನಿಂತುಕೊಂಡ. ಶ್ಯಾಮ ಸಿಟ್ಟಿನಿಂದ ಜೇಬಿಗೆ ಕೈಹಾಕಿ ಎಷ್ಟೊಂದು ಚಿಲ್ಲರೆ ಕೈಗೆ ಸಿಕ್ಕಿತೋ ಅದನ್ನು ಕೈಗೆ ತೆಗೆದುಕೊಂಡು, ಆ ಟ್ರೇಗೆ ಹಾಕಿದ ನಂತರ ಹಿಂತಿರುಗಿ ನೋಡದೆ ಹೊರಗೆ ನಡೆದು ಬಂದ.

ಕೆಳಗಿಳಿದು ಬಂದು ನೋಡಿದ, ಎಲ್ಲೂ ಯಾರೂ ಇಲ್ಲ. ಶ್ಯಾಮ ಅವರನ್ನು ಹುಡುಕಲಿಲ್ಲ. ಮೆಲ್ಲನೆ ನಿಶ್ಚಿಂತ ಮನದಿಂದ ನಡೆದು ಬಂದು ಬಸ್ ಹಿಡಿದ.

ಹೋಟೇಲಿಗೆ ನುಗ್ಗಿ ಭೂತವನ್ನು ನೋಡಿ ಶ್ಯಾಮ ಸ್ವಲ್ಪ ಆತಂಕಗೊಂಡ. ಸುಬೋದ್ ಮಿತ್ರ. ತುಂಬಾ ದಿನದ ಸ್ನೇಹಿತನಂತೆ ಮಿತ್ರ ನಕ್ಕ.

ಶ್ಯಾಮ ವಿಚಾರಿಸಿದ, ನಿನ್ನೆ ಬಂದಿರಲಿಲ್ಲವೇ? ಇಲ್ಲ. ನಿನ್ನೆ ಒಂದು ವರಪೂಜೆಗೆ ಹೋಗಿದ್ದೆ ಎಂದ ಮಿತ್ರ. ಶ್ಯಾಮ ಅವನಿಗೆದುರು ಕುಳಿತುಕೊಂಡ.

ಮಿತ್ರನೆಂದ, ನಿನ್ನೆ ಒಂದು ಆಶ್ಚರ್ಯದ ಸಂಗತಿ ನಡೆಯಿತು ಸ್ವಾಮಿ. ನಿನ್ನೆ ನಾನು ದಕ್ಷಿಣವೋ ಪಶ್ಚಿಮವೋ ಗೊತ್ತಿಲ್ಲ. ಅಂತೂ ಪೂಟಿಯೂರಿಗೆ ಹೋಗಿದ್ದೆ. ಟಾಲಿಗಂಜನ್ನು ದಾಟಿ ಮುಂದೆ ಹೋಗಬೇಕು. ಕೆಲವು ವರ್ಷಗಳ ಹಿಂದೆ ಅದೆಲ್ಲಾ ಹಳ್ಳಿಯ ತರಹ ಇತ್ತು. ಆದರೆ ಅಲ್ಲಿ ಕೇಳಿದೆ. ಅದೂ ಕೂಡ ಕಲ್ಕತ್ತೆಗೇ ಸೇರಿದೆಯಂತೆ... ಹಾ... ಹಾ.... ಎರಡು ದಿನದ ನಂತರ ನಾವು ಯಾವ ಕಡೆಯೇ ಆಗಲಿ, ಎಷ್ಟೇ ದೂರ ಹೋಗಿ ಬರಲಿ. ನೋಡ್ತಾ ಇರಿ ಎಲ್ಲಾ ಬರೀ ಕಲ್ಕತ್ತಾ ಹರಡುತ್ತಾ ಪಟ್ಟಣ ವಿಶಾಲವಾಗುತ್ತಾ ಇದೆ ಸ್ವಾಮಿ. ಹಳ್ಳ – ಗಿಳ್ಳ ಹೊಲ – ಗದ್ದೆ ಯಾವುದು ಸಿಗುತ್ತೋ ಅದರ ಮೇಲೆಲ್ಲಾ ಕಲ್ಕತ್ತ ಅಂತ ಸ್ಟ್ಯಾಂಪ್ ಒತ್ತುತ್ತಾರೆ. ಹಾ... ಹಾ.... ಬೆಳೆಯುತ್ತಾ ಬೆಳೆಯುತ್ತಾ ಒಂದು ದಿನ ಈ ಪ್ರಪಂಚವೇ ಕಲ್ಕತ್ತಾಮಯವಾಗಿಬಿಡುತ್ತೆ. ಹಾ... ಹಾ... ಇಷ್ಟು ದಿನ ಕಲ್ಕತ್ತೆಯ ಮಧ್ಯೆ ಇದ್ದು ಕಲ್ಕತ್ತೆ ಹೇಗೆ ಹರಡುತ್ತಿದೆ ಎಂಬುದರ ಕಲ್ಪನೆಯೂ ಇರಲಿಲ್ಲ. ಇದಾದ ಮೇಲೆ ಕಲ್ಕತ್ತೆಯ ಹೊರಗೆ ಹೋಗುವ ಪ್ರಯತ್ನ ಮಾಡಿದರೂ ಹೋಗಲಾಗುವುದಿಲ್ಲ ಸ್ವಾಮಿ. ತುಂಬಾ ಆಶ್ಚರ್ಯದ ಸಂಗತಿಯಾಗುತ್ತೆ ನೋಡುತ್ತಾ ಇರಿ. ಆಗ ಬೆಟ್ಟಕ್ಕೆ ಹೋದರೂ ಅದು ಕಲ್ಕತ್ತಾನೇ. ಸಮುದ್ರಕ್ಕೆ ಹೋದರೂ ಅದು ಕಲ್ಕತ್ತಾ. ಆಗ ಕಲ್ಕತ್ತೆಯಲ್ಲಿ ಹುಟ್ಟಿದರೆ ಇಡೀ ಜೀವಮಾನ ಕಲ್ಕತ್ತೆಯನ್ನೇ ಸುತ್ತಿ ಜನ ಸಾಯ್ತಾರೆ... ಹಾ... ಹಾ.

ಊಟ ಮುಗಿದ ಮೇಲೆ ಇಬ್ಬರೂ ಒಟ್ಟಿಗೆ ಹೊರಗೆ ಹೊರಟರು. ಶ್ಯಾಮ ಎಣಿಸಿ ನೋಡಿದ. ಇಂದು ಹದಿನೈದು ನಾಯಿಗಳಿದ್ದವು. ಅವನು ತಟ್ಟನೆ ಹೇಳಿದ, ನೋಡಿದಿರಾ ನಾಯಿಗಳು ತುಂಬಾ ಹೆಚ್ಚಾಗುತ್ತಿವೆ. ಹೌದು ಎಂದು ಮಿತ್ರ ನಕ್ಕು ಹೇಳ್ತಾನೆ; ನಮ್ಮ ಮ್ಯಾನೇಜರ್ ಮಹಾಶಯರು ತುಂಬಾ ನಾಯಿ ಭಕ್ತರು. ಆ ಮೇಲೆ ಧ್ವನಿ ತಗ್ಗಿಸಿ ದಿನಾ ಮಹಾಭಾರತ ಓದ್ತಾರೆ ಅಂತ ಕಾಣುತ್ತೆ... ಹಾ... ಹಾ....

ಗಡಿಯಾಹಾಟ್‌ನಲ್ಲಿ ಮಿತ್ರನನ್ನು ಬಿಟ್ಟು ಶ್ಯಾಮ ಮನೆ ಕಡೆ ನಡೆದ. ದೂರದಿಂದಲೇ ನೋಡಿದ. ಮನೆ ಎದುರು ರಸ್ತೆಯಲ್ಲಿನ ಫುಟ್‌ಪಾತಿನಲ್ಲಿ ಅರುಣ ನಿಂತುಕೊಂಡಿದ್ದಾನೆ. ಅವನ ಟೈಯ್ ನಾಟ್ ಸಡಿಲವಾಗಿ ಹೋಗಿದೆ. ರಸ್ತೆಯ ಮಬ್ಬು ಬೆಳಕಿನಲ್ಲಿ ಅವನ ಮುಖ ಕೆಂಪು ಹಾಗೂ ಕಣ್ಣೆರಡೂ ಚಂಚಲವಾಗಿರುವಂತೆ ಕಾಣಿಸುತ್ತದೆ.

ಓ ಶ್ಯಾಮ್. ಅರುಣ ಸ್ವಲ್ಪ ವಾಲುತ್ತಾ ನಡೆದು ಒಂದು ಕೈ ಮುಂದೆ ಚಾಚಿ ಪೆದ್ದು ನಗೆ ನಕ್ಕು... ನಿನ್ನ ಜೊತೆ ಮಾತನಾಡುವುದಿದೆ ಎನ್ನುತ್ತಾನೆ.

ಶ್ಯಾಮ ಅವನ ಕೈ ಮುಟ್ಟುವುದಿಲ್ಲ. ದೂರ ನಿಂತುಕೊಂಡೇ ನೇರ ದೃಷ್ಟಿಯಿಂದ ಅವನನ್ನು ದಿಟ್ಟಿಸಿ ನೋಡುತ್ತಾನೆ. ಶಾಂತ ಧ್ವನಿಯಲ್ಲಿ ಬಾ ಎಂದು ಅರುಣನನ್ನು ಕರೆಯುತ್ತಾನೆ.

ಶ್ಯಾಮನಿಗೆ ವ್ಹಿಸ್ಕಿಯ ಪರಿಚಿತ ವಾಸನೆ ಗೊತ್ತಾಗುತ್ತದೆ. ಸ್ವಲ್ಪ ಅಸ್ಥಿರ ನಡಿಗೆಯಲ್ಲಿ ಅರುಣ ಅವನ ಹಿಂದೆ ನಡೆದು ಬರುತ್ತಾನೆ. ಅವನನ್ನು ಹಿಂಬಾಲಿಸುತ್ತಾ ಓ ಶ್ಯಾಮ ನನಗೆ ತುಂಬಾ ತೊಂದ್ರೆ ಕಣೋ. ನನ್ನಿಂದ ಇನ್ನು ಸಹಿಸಲು ಸಾಧ್ಯವಿಲ್ಲ ಕಣೋ ಎಂದೆನ್ನುತ್ತಾನೆ.

ವ್ಹಿಸ್ಕಿಯ ಪರಿಚಿತ ವಾಸನೆ – ಬಹು ದೂರದಿಂದ ಈ ವಾಸನೆ ಬರುತ್ತಿದೆ. ಶ್ಯಾಮ ಅದರ ರುಚಿ ಮರೆತುಬಿಟ್ಟಿದ್ದಾನೆ. ಈ ರೀತಿ ಯೋಚಿಸುತ್ತಾ ಮೆಟ್ಟಲೇರುತ್ತಾನೆ. ಅರುಣ ಅವನನ್ನು ಹಿಂಬಾಲಿಸುತ್ತಾನೆ.

ಮನೆ ಹೊಕ್ಕು ಅರುಣ ಏದುಸಿರು ಬಿಡುತ್ತಾನೆ. ಹಾಗೇ ಹಾಸಿಗೆಯ ಮೇಲೆ ಕುಸಿಯುತ್ತಾನೆ. ತಲೆ ದಿಂಬನ್ನು ಎಳೆದುಕೊಂಡು ಹಾಗೇ ಒರಗಿ ಅಡ್ಡಾಗುತ್ತಾನೆ. ಅವನ ಸೂಟಿನ ಮಡಿಕೆ ಮುದುರಿದೆ. ಅರುಣನಿಗೆ ಅದರ ಕಡೆ ಗಮನ ಕೂಡ ಇಲ್ಲ. ನೀನೇ ಎಲ್ಲಾ ನೋಡ್ತಾ ಇರು. ನೀನೇ ಎಲ್ಲಾ ನೋಡಿ ಅರ್ಥ ಮಾಡಿಕೊಳ್ಳುವಿಯಂತೆ ಕಣೋ ಎಂದು ಹೇಳುತ್ತ ಅರುಣನ ಧ್ವನಿ ಶೂನ್ಯವಾಗಿ ಬಿಡುತ್ತೆ. ಅವಾಕ್ ಆಗಿ ನೋಡುತ್ತಲೇ ಇರುತ್ತಾನೆ.

ಶ್ಯಾಮ ತನ್ನ ಕುರ್ಚಿಯನ್ನು ಕಿಟಕಿಯ ಬಳಿ ಎಳೆದು ತರುತ್ತಾನೆ. ಅದರ ಮೇಲೆ ಒಂದು ಕಾಲನ್ನೆತ್ತಿಟ್ಟುಕೊಂಡು ಅರುಣನನ್ನು ನೋಡುತ್ತಾ ನಿಂತುಕೊಳ್ಳುತ್ತಾನೆ.

ತಾನು ಏನು ಹೇಳುತ್ತಿದ್ದೆ ಎನ್ನುವುದನ್ನು ಮರೆತು ಅರುಣ ಹೇಳುತ್ತಾನೆ. ಹೌದು. ನಿನ್ನ ನನ್ನ ಮಾವನವರ ಬಳಿ ಕರೆದುಕೊಂಡು ಹೋಗಬೇಕೆಂದು ಹೇಳಿದ್ದೆನಲ್ಲಾ, ನಿನಗೆ ಕೆಲಸವಾಗುತ್ತೆ. ಶ್ಯಾಮ ನೀನೇನೂ ಯೋಚನೆ ಮಾಡಬೇಡ. ನಾನು ಹೊರಗೆ ಹೋಗೋ ಮೊದಲು ನಿನಗೊಂದು ನೆಲೆ ಮಾಡಿ ಕೊಟ್ಟು ಹೋಗುತ್ತೇನೆ. ಅರುಣ ಪೆದ್ದನಂತೆ ಅರ್ಥಹೀನ ನಗೆ ನಗ್ತಾನೆ. ನನ್ನಿಂದ ಎಲ್ಲಾ ಸಾಧ್ಯವಿದೆ ಗೊತ್ತಾ. ನೋಡ್ತೋ ನನ್ಮಗನೇ ನಾನು ಅನೇಕ ಕೆಲಸ... ಮೆಲ್ಲ ಮೆಲ್ಲನೆ ಅರುಣನ ಕಣ್ಣು ಮುಚ್ಚಿಹೋಗುತ್ತದೆ. ವಾಂತಿ ಮಾಡುವ ಮೊದಲಿನ ಕ್ಷಣದ ತರಹ ಅವನ ದೇಹ ಕಂಪಿಸುತ್ತದೆ. ಕಣ್ಣು ಸಂಕುಚಿತಗೊಳ್ಳುತ್ತೆ. ಮುಖ ಕೆಂಪಗಾಗುತ್ತೆ. ಪುನಃ ಅರುಣ ತನ್ನನ್ನೇ ಸಂಭಾಳಿಸಿಕೊಳ್ಳುತ್ತಾನೆ. ಆದರು ಏದುಸಿರು ಬಿಡುತ್ತಾನೆ – ಏನೇ ಹೇಳಲಿ ಆ ಮುದುಕನನ್ನು ಕಂಡರೆ ನನಗೆ ಹೆದರಿಕೆ. ಆ ಬಡ್ಡೀ ಮಗ ನನ್ನಿಂದ ಎಲ್ಲವನ್ನೂ ಕಸಿದುಕೊಂಡು ನನ್ನನ್ನು ಮುಷ್ಟಿಯಲ್ಲಿ ಹಿಡಿದಿದ್ದಾನೆ. ಮನಸ್ಸು ಮಾಡಿದರೆ ಅವನು ನನ್ನನ್ನು ಕೋತಿ ತರಹ ಕುಣಿಸಬಹುದು. ಕಳ್ಳ ಬಡ್ಡೀ ಮಗನೇ.... ಎಂದು ಹೇಳುತ್ತಾ ಪುನಃ ವಾಂತಿಯ ಉಬ್ಬಳಿಕೆಯನ್ನು ತಡೆದುಕೊಳ್ಳುತ್ತಾನೆ – ಅವನು ನನ್ನ ಹಿಂದೆ ಜನರನ್ನು ಕಾವಲಿರಿಸಿದ್ದಾನೆ. ಅಗತ್ಯವಾದರೆ ನನ್ನನ್ನು ಗುಂಡಿಟ್ಟು ಬೇಕಾದರೂ ಕೊಲ್ಲಿ ಅಂತ ಅವರಿಗೆ ಬೇರೆ ಹೇಳಿಟ್ಟಿದ್ದಾನೆ.

ಯಾರು? ಶ್ಯಾಮ ಶಾಂತ ಸ್ವರದಲ್ಲಿ ಕೇಳುತ್ತಾನೆ.

– ನನ್ನ ಹೆಂಡತಿಯ ಅಪ್ಪ. ಅದೇ ನನ್ನ ಮಾವ... ಆ ಮನುಷ್ಯನಿಂದ ಒಂದು ಒಳ್ಳೇ ಹುಡುಗಿಗೆ ಜನ್ಮ ಕೊಡಲು ಸಾಧ್ಯವಾಗಲಿಲ್ಲ. ಆದರೂ ಅವನು ನನ್ನ ಮಾವ ನನ್ನ ಮಾವ...

ಶ್ಯಾಮ ನಿನಗೆ ಅರ್ಥವಾಗೊಲ್ಲಾ ಕಣೋ... ನನ್ನ ಹೆಂಡತಿ ಎಷ್ಟು ಕೆಟ್ಟವಳೂಂತ. ಮನೆ ಕತ್ತಲಾಗಿಸಿ ಬಿಡುವ ಮುಖಶ್ರೀ, ಆದರೂ ನಾನು ಇನ್ ಟೈಮ್ ಮನೆ ಸೇರಿ ಬಿಡಬೇಕು. ಒಂದು ವೇಳೆ ಹಿಂತಿರುಗದಿದ್ದರೆ ನಾನು ಚರಿತ್ರಹೀನ. ಶ್ಯಾಮ ಒಂದು ವೇಳೆ ನೀನು ನನ್ನ ಹೆಂಡತಿಯನ್ನು ನೋಡಿದರೆ ಒಂದು ವೇಳೆ ಅಡಲ್ಟರಿ ಮಾಡಬೇಕು ಎಂದೆನಿಸಿದರೆ... ಎಂದು ಹೇಳುತ್ತಾ ಹಾಸಿಗೆಯಿಂದ ತಲೆ ಎತ್ತಿ ಅರುಣ ತಲೆ ತಗ್ಗಿಸುತ್ತಾನೆ. ಇಡೀ ದೇಹ ಬಿಕ್ಕಳಿಸುವಂತೆ ಕಂಪಿಸುತ್ತಿದೆ. ಶ್ಯಾಮ ಗಮನಿಸುತ್ತಾನೆ, ಅರುಣನ ಮುಖದಿಂದ ಮಣ್ಣಿನ ನೀರಿನ ಪ್ರವಾಹ. ನಲ್ಲೀ ನೀರಿನ ತರಹ ಧಾರೆಯಾಗಿ ಆ ಕೋಣೆಯೊಳಗೆ ಹರಿದು ಹೋಗುತ್ತ ಇದೆ. ಕ್ಷಣದಲ್ಲೇ ವ್ಹಿಸ್ಕಿ ಹಾಗೂ ವಾಂತಿಯಿಂದ ದುರ್ವಾಸನೆಯ ಗಾಳಿ ಕೋಣೆಯೆಲ್ಲಾ ತುಂಬಿ ಹೋಗುತ್ತದೆ. ಆದರೂ ಶ್ಯಾಮ ಒಂದಿಷ್ಟೂ ಅಲ್ಲಾಡುವುದಿಲ್ಲ. ಕಲ್ಲಿನ ಬಂಡೆಯಂತೆ ಸ್ಥಿರವಾಗಿ ನಿಂತುಕೊಂಡು ಅರುಣನನ್ನು ಗಮನಿಸುತ್ತಾನೆ.

ಅರುಣ ಮೆಲ್ಲ ಮೆಲ್ಲನೆ ಮುಖ ಎತ್ತುತ್ತಾನೆ. ಹಿಂದೆ ಮುಂದೆ ನೋಡದೆ, ಶ್ಯಾಮನ ಹಾಸಿಗೆಯಿಂದ ಕೊಳೆಯಾದ ಟವೆಲ್ ತೆಗೆದುಕೊಂಡು ಮುಖ ಒರೆಸಿಕೊಳ್ಳುತ್ತಾನೆ. ಪುನಃ ಅದನ್ನು ದಿಂಬಿನ ಮೇಲೆ ಹೊದಿಸುವ ಪ್ರಯತ್ನ ಮಾಡುತ್ತಾನೆ. ಅನಂತರ ಅಷ್ಟೇ ಬೇಸರದಿಂದ ತನ್ನ ಕೈಮುಂದೆ ಚಾಚಿ ಸಿಗರೇಟ್ ಅಂತ ಕೇಳುತ್ತಾನೆ.

ಶ್ಯಾಮ ತನ್ನ ಕಡಿಮೆ ಬೆಲೆಯ ಸಿಗರೇಟಿನ ಪ್ಯಾಕೇಟನ್ನು ಹಾಗೇ ಬೆಂಕಿ ಪೆಟ್ಟಿಗೆಯನ್ನು ಹಾಸಿಗೆಯ ಮೇಲೆ ಎಸೆಯುತ್ತಾನೆ. ಅರುಣ ತುಂಬಾ ಕಷ್ಟದಿಂದ ಸಿಗರೇಟ್ ಹೊತ್ತಿಸುತ್ತಾನೆ. ಸಿಗರೇಟಿನ ಬೂದಿ ಹಾಸಿಗೆಯ ಮೇಲೆ ಬೀಳುತ್ತೆ. – ನನ್ನ ದೇಹದಲ್ಲಿ ಹುಲಿ, ಸಿಂಹ ಓಡಾಡುತ್ತೆ. ಆದರೂ ನಾನು ಇನ್‌ಟೈಮ್ ಮನೆ ಸೇರಿಬಿಡಬೇಕು... ಆಮೇಲೆ ಅದೇ ದುಷ್ಟ ಹೆಂಡತಿ... ಒಂದು ಲಾವಣ್ಯ ಇಲ್ಲ. ಡಯಾಟ್ ಕಂಟ್ರೋಲ್ ಮಾಡದೆಯೇ ಬರೀ ಮೂಳೆ ಮಾತ್ರ... ಓಃ ಅಮೇರಿಕಾ...

ಅರುಣ ತಲೆ ದಿಂಬಿಗೆ ಹುದುಗಿಸುತ್ತಾನೆ. ಸ್ವಲ್ಪ ಹೊತ್ತು ಕನಸು ಕಾಣುವವನಂತೆ ನಕ್ಕು ಪುನಃ ಮೆಲ್ಲಮೆಲ್ಲನೆ ತಲೆ ಎತ್ತಿ ಅಪರಿಚಿತ ಕಣ್ಣುಗಳಿಂದ ಶ್ಯಾಮನ ಕಡೆ ನೋಡಿ ಹುಬ್ಬು ಕೊಂಕಿಸಿ ಶ್ಯಾಮ ಎಂದೆನ್ನುತ್ತಾನೆ.

ಅನಂತರ ಮಾತನಾಡುವುದನ್ನು ಮರೆತು ಅವಿವೇಕಿಯಂತೆ ನೋಡುತ್ತಿರುತ್ತಾನೆ.

– ನಿನಗೆ ಗೊತ್ತಿಲ್ಲ ಕಣೋ ಶ್ಯಾಮ. ನನ್ನ ಹಿಂದೆ ಕಾವಲಿಡಲಾಗಿದೆ. ಏನು ಮಾಡಿದರು ನನ್ನಿಂದ ಆ ಜನರನ್ನು ಹಿಡಿಯಲಾಗುತ್ತಿಲ್ಲ. ನನ್ನ ಎಲ್ಲಾ ವಿಷಯವನ್ನು ಆ ಮುದುಕನಿಗೆ ಅವರು ವರದಿ ಮಾಡುತ್ತಾರೆ. ನಾನು ರೆಸ್ಟೋರೆಂಟಿನ ಮೇಲೆ ರೆಸ್ಟೋರೆಂಟ್ ಬದಲಾಯಿಸುತ್ತೇನೆ. ಎಷ್ಟೊಷ್ಟೋ ಓಣಿಗಳಲ್ಲಿ ಸುತ್ತಾಡುತ್ತೇನೆ. ಹೆಂಡತಿ ಮಕ್ಕಳನ್ನು ಕರೆದುಕೊಂಡು ಎಷ್ಟೋ ಗುರುತು ಪರಿಚಯವಿಲ್ಲದ ಸ್ಥಳಗಳಿಗೆ ಹೋಗುತ್ತೇನೆ. ಆದರೂ ಎಲ್ಲಿ ಹೋದರೂ ತಪ್ಪಿಸಿಕೊಳ್ಳಲಾಗುವುದಿಲ್ಲ. ಬಚ್ಚಿಟ್ಟುಕೊಳ್ಳಲೂ ಆಗುವುದಿಲ್ಲ. ಆ ಮುದುಕ ನನ್ನೆದುರೇ ನಿಂತುಕೊಂಡು ನನ್ನ ದಿನಚರಿಯ ವರದಿಯನ್ನು ನನಗೇ ಒಪ್ಪಿಸುತ್ತಾನೆ. ಅದೂ

ಅಲ್ಲದೆ ನನ್ನನ್ನು ಕೆಲಸದವರ ತರಹ ಟ್ರೀಟ್ ಮಾಡುತ್ತಾನೆ. ಚಿಕ್ಕ ಹುಡುಗರಂತೆ ನನ್ನನ್ನು ಗದರಿಸುತ್ತಾನೆ... ಯಾವ ರೀತಿ ಅವನಿಗೆ ವಿಷಯಗಳು ತಿಳಿಯುತ್ತವೆಯೋ ಏನೋ...

ತಟ್ಟನೆ ಅರುಣ ನಗ್ತಾನೆ – ತಾಳು ಬಡ್ಡೀ ಮಗನೇ ಒಂದೇ ಸಲಕ್ಕೆ ನಾನು ಓಡಿ ಹೋಗ್ತೇನೆ. ವೀಸಾ ಒಂದು ಕೈಗೆ ಬರಲಿ ಆ ಮೇಲೆ ಜೆಟವರ್ ವೇಟು ಅಮೇರಿಕಾ... ಬೊಂ.... ಓಂ..... ಓಂ.... ಯಾವ ಕೈಯಿಂದ ಅರುಣ ಏರೋಪ್ಲೇನಿನ ಭಂಗಿ ಮಾಡಿ ತೋರಿಸಿದನೋ ಅದೇ ಕೈಯನ್ನು ತಟ್ಟನೆ ಮುಷ್ಟಿ ಬಿಗಿ ಮಾಡಿ, ಗಟ್ಟಿ ಸ್ವರದಲ್ಲಿ ಹೇಳಿದ – ಯಾರು ಅವನಿಗೆ ಸುದ್ದಿ ತಿಳಿಸ್ತಾರೆ? ನನ್ನಿಂದ ಒಂದು ಚೂರೂ ಪತ್ತೆ ಹಚ್ಚಲಾಗುತ್ತಿಲ್ಲ. ಯಾರು ರಸ್ತೆಯಲ್ಲಿ ತಿರುಗಾಡ್ತಾನೆ, ರೆಸ್ಟೋರೆಂಟ್‌ಗಳಲ್ಲಿ ಕೂತುಕೊಳ್ಳುತ್ತಾನೆ. ನನ್ನ ಎದೆ ಹೊಡೆದುಕೊಳ್ಳುತ್ತ ಯಾರೋ ಬೆನ್ನ ಹಿಂದೆ ನನ್ನನ್ನು ಕಣ್ಣಿಟ್ಟು ಗಮನಿಸುತ್ತಿರುವಂತೆ, ಯಾವಾಗಲೂ ತುಂಬಾ ಭಯವಾಗುತ್ತೆ. ಅಂತೂ ಯಾರು ಸುದ್ದಿ ತಿಳಿಸ್ತಾರೋ ಏನೋ.

ಅರುಣ ಶೂನ್ಯವನ್ನು ದಿಟ್ಟಿಸಿ ನೋಡಿ ಪ್ರಶ್ನಿಸುತ್ತಾನೆ. ಯಾರು? ಪುನಃ ಕ್ಯಾಕರಿಸಿ ಹೇಳ್ತಾನೆ, ನಿನಗೆ ಗೊತ್ತಿಲ್ಲಾ ಕಣೋ. ಅಮೇರಿಕಾಗೆ ಹೋಗುವ ಅರ್ಧ ದಾರಿಯಲ್ಲೂ ಆ ಮುದುಕ ನನ್ನನ್ನು ಹಿಂತಿರುಗಿ ಕರೆಯಿಸಿಕೊಳ್ಳಬಲ್ಲ. ಮನಸ್ಸು ಮಾಡಿದರೆ ಅವನು ನನ್ನ ಕ್ಯಾರಿಯರನ್ನೇ ಹಾಳು ಮಾಡಬಹುದು. ಬೇಕಾದಾಗ ಅವನಿಚ್ಛೆಯಂತೆ ನನ್ನನ್ನು ಗದರಿಸಬಹುದು. ನಾವು ದೊಡ್ಡ ಮನುಷ್ಯರು ಕಣೋ, ಮನಸ್ಸು ಮಾಡಿದರೆ ಎಲ್ಲಾ ಖರೀದಿ ಮಾಡಬಹುದು. ಮಗಳ ಹೆಸರಿನಲ್ಲಿ ಎರಡು ಲಕ್ಷ ಬಾಳೋ ಎರಡು ಮನೆ ಕೊಟ್ಟಿದ್ದಾನೆ, ಮನಸ್ಸು ಮಾಡಿದರೆ... ಮನಸ್ಸು ಮಾಡಿದರೆ ನನ್ನನ್ನು ಗಾಳಿಯನ್ನಾಗಿ ಮಾಡಬಹುದು. ದೇಹದಲ್ಲಿ ಹುಲಿ ಸಿಂಹ ಓಡಾಡುತ್ತೆ. ಒಂದು ಸುಂದರ ಹೆಣ್ಣಿಗೋಸ್ಕರ – ಯಾವುದಾದರೂ ಸುಂದರ ವಸ್ತುವಿಗಾಗಿ.... ನಾನು....

ಅರುಣನ ಕಣ್ಣಿನಿಂದ ಮೆಲ್ಲನೆ ಕಣ್ಣೀರು ಹರಿಯುತ್ತೆ. ಯಾವ ಶಬ್ದವೂ ಇಲ್ಲ. ಕೇವಲ ಅವನ ಎರಡು ತುಟಿಗಳು ಮಾತ್ರ ಕಂಪಿಸುತ್ತಿವೆ. ಶ್ಯಾಮ ಸ್ಥಿರವಾಗಿ ನಿಂತು ನೋಡುತ್ತಾನೆ. ಅರುಣ ಮೆಲ್ಲನೆ ಶ್ಯಾಮನ ಕಡೆ ನೋಡಿ ಬಿಕ್ಕಳಿಸುತ್ತಾ ಹೇಳ್ತಾನೆ – ನೀನು ನನ್ನ ಇಂದು ನೋಡಿದ್ದಿ.

ಶ್ಯಾಮ ಹೌದೆಂದು ತಲೆ ತೂಗುತ್ತಾನೆ.

ಅರುಣ ಪೆದ್ದನಂತೆ ನಕ್ಕು – ನಿನ್ನ ನೋಡಿ ನನಗೆ ಆಶ್ಚರ್ಯವಾಗಿತ್ತು, ತುಂಬಾ ದಿನವಾಗಿತ್ತು ನಿನ್ನ ನೋಡಿ. ನಿಜವಾಗಿ ನನಗೆ ಸರಿಯಾಗಿ ಗೊತ್ತಿಲ್ಲ. ಈಗ ನೀನು ಏನು ಮಾಡ್ತಾ ಇದೀಯ? ಅಂದು ನಿನ್ನ ನೋಡಿದ್ದಾಗ, ತುಂಬಾ ಮಾತುಕತೆಯಾಡಿದ್ದೆ. ಅದಕ್ಕೆ ತಟ್ಟನೆ ಇಂದು ನಿನ್ನ ನೋಡಿದಾಗ, ನೀನೂ ನಮ್ಮ ಮಾವ ಕಳುಹಿಸಿದ ಗುಪ್ತಚಾರರಲ್ಲಿ ಒಬ್ಬನೇನೋ ಅಂತ ಅಂದುಕೊಂಡೆ. ಎಂದು ಅರುಣ ನಗುತ್ತಾನೆ.

ಶ್ಯಾಮ ಮಾತನಾಡುವುದಿಲ್ಲ. ಸ್ಥಿರವಾಗಿ ನಿಂತು ಅರುಣನನ್ನೇ ಗಮನಿಸುತ್ತಾನೆ.

ಮೆಲ್ಲ ಮೆಲ್ಲನೆ ಅರುಣನ ಮುಖದಿಂದ ನಗು ಮಾಯವಾಗುತ್ತೆ. ಭಿಕ್ಷುಕನ ಧ್ವನಿಯಂತೆ ಧ್ವನಿಮಾಡಿ ಅವನು ಹೇಳ್ತಾನೆ, ನಿನಗೋಸ್ಕರ ನಾನು ಎಲ್ಲಾ ಮಾಡ್ತೀನಿ. ನನ್ನಿಂದ ಎಲ್ಲಾ

ಸಾಧ್ಯವಿದೆ. ನಾನು ಓಡಿ ಹೋಗಲು ನೋಡ್ತಾ ಇದೀನಿ. ಒಂದು ಸಲ ಓಡಿ ಹೋಗಲು ಸಾಧ್ಯವಾದರೆ, ನಾನು ಪುನಃ ಹಿಂತಿರುಗುವುದಿಲ್ಲ. ಆ ದುಷ್ಟ ಹೆಂಡತಿ, ಆ ಹರಾಮೀ ಮುದುಕ – ಹಾಗೇ ಈ ಭಿಕ್ಷುಕ ದೇಶವನ್ನು ಬಿಟ್ಟು ಓಡಿ ಹೋಗಲು ಸಾಧ್ಯವಾದರೆ... ಪುನಃ ನಾನು ದೊಡ್ಡ ಮನುಷ್ಯನಾಗಿಬಿಡುತ್ತೇನೆ ಎಂದು ಹೇಳಿ ಅಸಹಾಯ ಭಾವದಿಂದ ಅರುಣ ಎಲ್ಲಾ ಕಡೆ ದಿಟ್ಟಿಸುತ್ತಾನೆ. ನಾಲಿಗೆಯಿಂದ ತುಟಿ ಸವರಿಕೊಂಡು, – ಇಲ್ಲಿಗೇ ನನ್ನದು ಎಲ್ಲಾ ಮುಗಿದಿಲ್ಲ. ನನಗೆ ಅಷ್ಟೇನು ವಯಸ್ಸಾಗಿಲ್ಲ. ಆದರೆ ಶ್ಯಾಮ ಒಂದು ವೇಳೆ ನೀನು ಫೋನೆತ್ತಿ ಇಂದು ಸಂಜೆ ನಾನು ಲೀಲಾಳೊಂದಿಗಿದ್ದೆ ಎಂದು ಆ ಮುದುಕನಿಗೆ ತಿಳಿಸಿದರೆ ಎಲ್ಲಾ ಗೊಂದಲವಾಗಿ ಬಿಡುತ್ತೆ.

ತಟ್ಟನೆ ಪುನಃ ಈಗ ಶ್ಯಾಮನೆದೆಯಲ್ಲಿ ಗುರ್ ಗುರ್ ಎಂದು ಮೋಡ ಗರ್ಜಿಸುತ್ತದೆ. ಮಿಂಚು ಮಿಂಚುತ್ತೆ. ಜಿಂಕೆಗಳು ಓಡುತ್ತವೆ. ಅದೇ ಕಪ್ಪು ರೈಲು ಗಾಡಿಯು ಉದ್ದನೆಯ ಒಂದು ಸೇತುವೆಯನ್ನು ದಾಟಿ ಹೋಗುತ್ತಾ ಇದೆ.

ಶಾಂತ ಧ್ವನಿಯಲ್ಲಿ ಶ್ಯಾಮ ಪ್ರಶ್ನಿಸುತ್ತಾನೆ, ಎಂದಾದರೂ ನೀನು ಲೀಲಾಳನ್ನು ಮುಟ್ಟಿದ್ದೀಯಾ?

– ಆಂ ಎಂದು ಅರುಣ ಅರ್ಥಹೀನ ಕಣ್ಣುಗಳಿಂದ ಸುಮ್ಮನೆ ದಿಟ್ಟಿಸುತ್ತಾನೆ. ಅನಂತರ ದುಃಖದಿಂದ ಹೇಳ್ತಾನೆ – ಇಲ್ಲ. ಅನಂತರ ಖದೀಮನಂತೆ ನಗುತ್ತಾನೆ. ಶೀ ಈಸ್ ಇನ್ ಲವ್. ನಿನ್ನ ಅವಳಿಗೆ ಪರಿಚಯ ಮಾಡಿಕೊಡ್ತೇನೆ ಅಂತ ಹೇಳಿದ್ದೆ ಅಲ್ವಾ... ಅವಳ ಜೊತೆ ಮಾತುಕತೆ ಆಡ್ತೀಯಾ?

ಶ್ಯಾಮ ಪುನಃ ಕೇಳ್ತಾನೆ – ಇಂದು ಸಂಜೆ ಏನಾಯ್ತು?

ಅರುಣ ನಗುತ್ತಾನೆ – ನಥಿಂಗ್. ನಾವು ಅಣ್ಣ ತಂಗಿಯರಂತೆ ಇದ್ದೆವು ಎಂದು ಹೇಳಿ ಅರುಣ ಜೋರಾಗಿ ಉಸಿರಾಡ್ತಾನೆ. ಇಂದೇ ಮೊದಲ ಅಪಾಇಂಟ್‌ಮೆಂಟ್. ಗುಂಪಿನಿಂದ ದೂರ ನಿರ್ಜನವಾದ ಸ್ಥಳಕ್ಕೆ ಹೋಗೋಣ ಎಂದೆ. ಅದಕ್ಕೆ ಅವಳು ಬೇಡ ಅಂದಳು. ಹಾಗಾದ್ರೆ ಒಂದು ಟ್ಯಾಕ್ಸಿಯಲ್ಲಿ ಕುಳಿತು ಸುತ್ತಾಡೋಣ ಅಂತಂದೆ. ಅದೂ ಬೇಡಾ ಅಂದಳು. ರಾತ್ರಿ ಒಂಟಿ ಒಂಟಿ ಭಾವನೆ ಬರೋಲ್ವೇ ಅಂತ ಕೇಳಿದೆ. ತುಂಬಾ ಸಿಟ್ಟಾಗಿಬಿಟ್ಟಳು ಎಂದು ಹೇಳುತ್ತಾ ಅರುಣ ಆಕಳಿಸಿ ನಗುತ್ತಾನೆ – ನಿಜವಾಗಿ ಆ ಹುಡುಗಿ ಇನ್ನೂ ಮಗು. ಅದಕ್ಕೆ ಎಲ್ಲಾ ಹೊಸದು. ಅದರ ಮೇಲೆ ಅವಳಿಗೆ ಎಂಗೇಜ್ ಆಗಿದೆ ಅಂತ ಕಾಣುತ್ತೆ. ಆದರೂ ನಾನು ಅಂಬಿಕಾ ಹಾಲ್‌ದಾರ್‌ನ ಅಳಿಯ. ನನ್ನ ಮಾತನ್ನು ತಳ್ಳಿಹಾಕಲಾಗದೆ ಬಂದಿದ್ದಳು... ಎಂದು ಹೇಳುತ್ತಾ ಅವನ ಮುಖದಲ್ಲಿ ಸ್ವಲ್ಪ ಅಹಂಕಾರದ ಭಾವ ತೇಲಿ ಬಂತು. ಅವನು ನಕ್ಕು ಹೇಳಿದ – ಇವಳಿಗಿಂತ ಮಿಸ್ ದತ್ ತುಂಬಾ ಹಾಟ್ ಆಗಿದ್ದಳು. ಎಂಥಾ ಬಟಕ್ ಗೊತ್ತಾ.

ಮೆಲ್ಲನೆ ಅರುಣ ತನ್ನ ವಾಂತಿಯ ಮೇಲೇ ನಿಂತುಕೊಂಡು – ಶ್ಯಾಮ ನನ್ನಾಣೆ ಕಣೋ, ಆ ಮುದುಕನಿಗೆ ಒಂದು ವೇಳೆ ಗೊತ್ತಾದರೆ... ನಿನ್ನ ಕಣ್ಣು ಎಷ್ಟೊಂದು ಚುರುಕು, ಆ ರೆಸ್ಟೋರೆಂಟಿನಲ್ಲೇ ನೀನು ನಮ್ಮನ್ನು ಹೇಗೆ ಹುಡುಕಿದಿ? ಬಡ್ಡೀ ಮಗನೇ ನೀನು ನಮ್ಮನ್ನು

ಹಿಂಬಾಲಿಸುತ್ತಾ ಇದ್ದೀ ಅಂತ ಕಾಣುತ್ತೆ.

– ಅಲ್ವಾ?

ಶ್ಯಾಮ ಸುಮ್ಮನೆ ನೋಡುತ್ತಾ ನಿಂತಿರುತ್ತಾನೆ. ಇಲ್ಲ ಅವನು ಇನ್ನೇನು ಮಾಡಬೇಕಾಗಿಲ್ಲ. ಅರುಣ ತನಗೆ ತಾನೇ ಕಷ್ಟ ಕೊಟ್ಟುಕೊಳ್ಳುವ ಭಾರವನ್ನು ಹೊತ್ತಿದ್ದಾನೆ.

ಅರುಣ ತನ್ನ ವಾಂತಿಯ ಮೇಲೆ ಒಂದು ಸಲ ಜಾರ್ತಾನೆ. ಹಾಗೇ ಸಾವರಿಸಿಕೊಂಡು ಎಚ್ಚರಿಕೆಯಿಂದ ಮೆಲ್ಲನೆ ಬಾಗಿಲ ಬಳಿ ಹೋಗ್ತಾನೆ. ಕೈ ಎತ್ತಿ ನಕ್ಕು – ಟು ಅಮೇರಿಕಾ.... ಎಂದ್ಹೇಳಿ ಹೊರಟು ಹೋಗ್ತಾನೆ. ಬಾಗಿಲವರೆಗೂ ನೆಲದ ಮೇಲೆ ವಾಂತಿಯಿಂದ ಒದ್ದೆಯಾದ ಅವನ ಕಾಲಿನ ಹೆಜ್ಜೆಯ ಗುರುತು ಬಿದ್ದಿರುತ್ತೆ.

ಶ್ಯಾಮ ಕಿಟಕಿಯಿಂದ ನೋಡ್ತಾನೆ. ಅರುಣ ರಸ್ತೆಯಂಚಿನ ಫುಟ್‌ಪಾತಿನ ಮೇಲೆ ನಿಂತುಕೊಂಡು, ಒಂದು ಕೈ ಮೇಲೆತ್ತಿ ಅದೃಶ್ಯ ಟ್ಯಾಕ್ಸಿಯೊಂದನ್ನು ನಿಲ್ಲಿಸಲು ಪ್ರಯತ್ನಿಸುತ್ತಿದ್ದಾನೆ.

ಶ್ಯಾಮ ಮುಖ ತಿರುಗಿಸಿಕೊಳ್ಳುತ್ತಾನೆ. ಅರುಣ ಸರಿಯಾಗಿ ಮನೆ ಸೇರ್ತಾನೆ ಎನ್ನುವುದು ಅವನಿಗೆ ಗೊತ್ತು. ಅರುಣನಿಗೆ ನಾಳೆ ಬೆಳಗ್ಗೆ ಇಂದಿನ ವಿಷಯ ನೆನಪು ಮರೆಯುತ್ತಾ ಅರುಣ ನಿರ್ದಿಷ್ಟ ಜಾಗ ತಲುಪುತ್ತಾನೆ. ಕೋಣೆಯ ನೆಲದ ಕಡೆ ನೋಡಿ ಶ್ಯಾಮ ಜೋರಾಗಿ ನಗುತ್ತಾನೆ.

ತುಂಬಾ ದಿನದ ನಂತರ ಯಾಕೋ ಇಂದು ಅವನಿಗೆ ತನ್ನ ಕೋಣೆಯನ್ನು ಸ್ವಚ್ಛಗೊಳಿಸಬೇಕೆಂದೆನಿಸಿತು.

# 13

ಹೌದು ಇಂದಿನ ವೃತ್ತಪತ್ರಿಕೆಯಲ್ಲಿ ಸುದ್ದಿ ಇದೆ. ಆದರೆ ಸುದ್ದಿ ಯಾರಿಗೂ ಸರಿಯಾಗಿ ಅರ್ಥವಾಗುವುದಿಲ್ಲ. ಆದರೂ ಅದು ಇದೇ ಸುದ್ದಿ ಎಂದು ಮನಸ್ಸಿಗನಿಸುತ್ತದೆ.

ಮೊದಲು ಶ್ಯಾಮನಿಗೆ ತನ್ನ ಕಣ್ಣಿನ ಭೋದ ಶಕ್ತಿ ಹಾಗೂ ಇಂದ್ರಿಯಗಳ ಮೇಲೆ ನಂಬಿಕೆಯಾಗಲಿಲ್ಲ. ಅನಂತರ ಮೆಲ್ಲನೆ ಅವನಿಗೆ ಆ ಘಟನೆ ನಡೆದು ಹೋಗಿದೆ ಎಂದು ತಿಳಿಯಿತು. ಕೆಲವು ದಿನಗಳ ಹಿಂದೆ, ದಕ್ಷಿಣ ಕಲ್ಕತ್ತೆಯಲ್ಲಿ, ಮೋಟರ್ ಸೈಕಲ್ ದುರ್ಘಟನೆಯಲ್ಲಿ ಗಾಯಗೊಂಡ, ಶ್ರೀಗೌರ ಭೌಮಿಕ (32) ನಿನ್ನೆ ಮಧ್ಯಾಹ್ನ, ಶುಕಲಾಲ್, ಕಾರನಾನಿ ಆಸ್ಪತ್ರೆಯಲ್ಲಿ ಮೃತನಾದನು. ಆತನಿಗೆ ದುರ್ಘಟನೆಯ ನಂತರ ಸಾಯುವವರೆಗೂ ಜ್ಞಾನವಿರಲಿಲ್ಲ. ಮೃತನಿಗೆ ಎರಡು ವರ್ಷಗಳ ಹಿಂದೆ ಮದುವೆಯಾಗಿತ್ತು. ಹಾಗೇ

ಅವನಿಗೊಂದು ಹೆಣ್ಣು ಮಗು ಇದೆ. ಅಪ್ಪ, ಅಮ್ಮ ಹಾಗೂ ಮೂರು ಜನ ಅಣ್ಣ, ಅಕ್ಕ, ತಮ್ಮ, ತಂಗಿಯರಿದ್ದಾರೆ. ಆ ವ್ಯಕ್ತಿ ಅಷ್ಟೇನು ಅಖ್ಯಾತನಗೇನೂ ಇರಲಿಲ್ಲ. ಒಮ್ಮೊಮ್ಮೆ ರೇಡಿಯೋದಲ್ಲಿ ಹಾಡು ಹೇಳುತ್ತಿದ್ದ. ಅವನ ಹಾಡುಗಳ ಎರಡು ರೆಕಾರ್ಡುಗಳೂ ಇವೆ. ಆದರೆ ಶ್ಯಾಮ ಆ ಹಾಡುಗಳನ್ನು ಎಂದೂ ಕೇಳಿರಲಿಲ್ಲ. ಹಾಗೂ ಅವನಿಗೆ ಆ ವ್ಯಕ್ತಿಯ ಹೆಸರೂ ತಿಳಿದಿರಲಿಲ್ಲ.

ಅವನು ಅದೇ ವ್ಯಕ್ತಿಯೋ, ಅಲ್ಲವೋ ಯಾರಿಗೆ ಗೊತ್ತು? ಶ್ಯಾಮನಿಗಂತೂ ಗೊತ್ತಿಲ್ಲ. ಮೆಲ್ಲನೆ ಶ್ಯಾಮ ವೃತ್ತಪತ್ರಿಕೆಯನ್ನು ನೆಲದ ಮೇಲೆ ಬಿಸಾಡಿ ಬಿಟ್ಟ. ಕಿಟಕಿಯ ಬಳಿ ಬಂದು ನಿಂತುಕೊಂಡು ಸಿಗರೇಟು ಹೊತ್ತಿಸಿದ. ಇಂದು ಕೂಡ 23 ನೇ ಡಿಸೆಂಬರಿನ ತರಹವೇ ಬಿಸಿಲು. ಅದೇ ರಸ್ತೆಯ ತಿರುವಿನಲ್ಲಿ ಆ ವ್ಯಕ್ತಿ ಬಲಗಡೆ ತಿರುಗಲು ಹೋಗಿ ಮುಗ್ಗರಿಸಿ ಬಿದ್ದಿದ್ದ. ಗೌರ ಭೌಮಿಕ ಹಾಡು ಹೇಳುತ್ತಿದ್ದ, ಅವನಿಗೊಂದು ಹೆಣ್ಣು ಮಗುವಿದೆ. ಒಬ್ಬ ಹೆಂಡತಿ ಕೂಡಾ, ಅಪ್ಪ, ಅಮ್ಮ, ಅಣ್ಣ, ತಂಗಿಯರಿದ್ದಾರೆ. ಆಶ್ಚರ್ಯ. ಇಷ್ಟೊಂದು ಸಂಪರ್ಕದ ನಡುವೆಯೂ ಆ ವ್ಯಕ್ತಿ ಬಂಧಿಯಾಗಿದ್ದಿರಬಹುದು ಎಂದು ಶ್ಯಾಮನಿಗೆ ಅನ್ನಿಸಿರಲಿಲ್ಲ. ಒಂದು ಮೋಟರ್ ಸೈಕಲಿನ ಕಪ್ಪು ಮುಖ. ಹಾಗೂ ಪರಿಚಯವಿಲ್ಲದ ಒಬ್ಬ ಮನುಷ್ಯನ ಛಿದ್ರ ಶರೀರ. ಯಾರಿಗೆ ಗೊತ್ತು ಆ ವ್ಯಕ್ತಿಗೆ ಇಷ್ಟೊಂದು ಪರಿಚಯವಿದೆಯೆಂದು.

ಆದರೂ ಇವನು ಅದೇ ವ್ಯಕ್ತಿ ಹೌದೋ ಅಲ್ಲವೋ ಎಂದು ಯಾರಿಗೆ ಗೊತ್ತು? ಶ್ಯಾಮನಿಗಂತೂ ಗೊತ್ತಿಲ್ಲ. ಒಂದು ವೇಳೆ ಇವನು ಇದೇ ವ್ಯಕ್ತಿಯಾಗಿದ್ದರೆ ಶ್ಯಾಮ ಈ ಜನ್ಮಕ್ಕನುಸಾರವಾಗಿ ಬದುಕುತ್ತಾನೆ. ಎಂದೂ ಅಕಾರಣವಾಗಿ ಕನ್ನಡಿಯ ಬೆಳಕನ್ನು ಬೀರಿದ್ದಕ್ಕೆ ಅವನನ್ನು ಯಾರೂ ದೂಷಿಸುವುದಿಲ್ಲ. ಎಲ್ಲ ಪ್ರಮಾಣಗಳು ಲೋಪವಾಗಿರುತ್ತೆ. ಎಲ್ಲಾ ಕಾರಣಗಳೂ ಗುಟ್ಟಾಗಿರುತ್ತದೆ. ಕೇವಲ ಯಾವ ವ್ಯಕ್ತಿ ಸತ್ತಿದ್ದಾನೆ ಎನ್ನವುದು ಮಾತ್ರ ಗೊತ್ತಾಗುತ್ತದೆ.

ಶ್ಯಾಮ ತುಂಬಾ ದಿನಗಳಿಂದ ಪುನಃ ತನ್ನ ಮುಖವನ್ನು ಕನ್ನಡಿಯಲ್ಲಿ ನೋಡಿಕೊಂಡಿಲ್ಲ. ಅಟ್ಟದ ಮೇಲಿಂದ ಕನ್ನಡಿಯನ್ನು ತೆಗೆದುಕೊಳ್ಳುವಾಗ, ಕನ್ನಡಿ ಮೇಲೆ ತುಂಬಾ ಧೂಳು ತುಂಬಿರುವುದನ್ನು ಗಮನಿಸಿದ. ತನ್ನ ಗುರುತು ಸಿಗದ ಮಿಥ್ಯ ಮುಖವನ್ನು ಅವನು ಅರೆಕ್ಷಣ ನೋಡುತ್ತಲಿದ್ದ. ಅನಂತರ ತಲೆ ಅಲ್ಲಾಡಿಸಿ ತನ್ನ ಪ್ರತಿಬಿಂಬಕ್ಕೆ ಹೇಳಿದ, ನಾನಲ್ಲ. ಆದರೆ ನೀನು ನೀನೇ ಮಾಡಿದ್ದು. ಅನಂತರ ಶ್ಯಾಮ ಜೋರಾಗಿ ನಕ್ಕು – ಇಲ್ಲ ನಿನ್ನ ಗುರುತು ಸಿಗಲಿಲ್ಲ. ಕೊಳೆಯಾದ ರೇಶಿಮೆಯ ಶಾಲನ್ನು ಶ್ಯಾಮ ಮೈ ಮೇಲೆ ಹೊದೆದುಕೊಂಡ. ಮೆಲ್ಲನೆ ಕೋಣೆಗೆ ಬೀಗ ಹಾಕಿದ. ವೇಗವಾಗಿ ನಡೆಯುತ್ತಾ ಕೋಣೆಯಿಂದ ಹೊರ ಹೊರಟು ಬಂದ.

ಅದೇ ಚಿಕ್ಕ ಚಹದಂಗಡಿಗೆ ಬಂದು ಶ್ಯಾಮ ಕುಳಿತುಕೊಂಡ. ಒಂದು ಕಪ್ ಚಹ ತೆಗೆದುಕೊಂಡು, ಸುಮ್ಮನೆ ತುಂಬಾ ಹೊತ್ತು ಕುಳಿತುಕೊಂಡು ಸಿಗರೇಟು ಸೇದಿದ. ಅನಂತರ ಶ್ಯಾಮ ಸರ್ವರ್. ಹುಡುಗನನ್ನು ಕರೆದು ಮತ್ತೊಂದು ಕಪ್ ಚಹ ತೆಗೆದುಕೊಂಡು ಬರಲು ಹೇಳಿದ. ಸರ್ವರ್ ಚಹ ತಂದುಕೊಟ್ಟು ಹೋದ ಮೇಲೆ, ಶ್ಯಾಮ ಚಹದ ಕಪ್ಪನ್ನು ಎದುರು

ಬದಿಯ ಶೂನ್ಯ ಕುರ್ಚಿಯ ಮೇಜಿನ ಮೇಲೆ ಇಡುತ್ತಾನೆ. ಚಾಯ್‌ದಾನಿಯಲ್ಲಿ ಇಟ್ಟ ಚಹದ ಕಪ್ಪಿನ ಹತ್ತಿರ ಒಂದು ಸಿಗರೇಟನ್ನು ಹೊತ್ತಿಸಿ ಹುಷಾರಾಗಿ ಶ್ಯಾಮ ಅದರ ಮೇಲೆ ಇಡುತ್ತಾನೆ. ಆ ಸರ್ವರ್ ಹುಡುಗ ಕಣ್ಣರಳಿಸಿ ಅದನ್ನೇ ನೋಡುತ್ತಾ ಇರುತ್ತಾನೆ. ಅಂಗಡಿಯ ಮುದುಕ ಮಾಲೀಕ ಇದನ್ನು ಗಮನಿಸುತ್ತಾನೆ. ಇಬ್ಬರು ಗಿರಾಕಿಗಳು ಮಾತನಾಡುವುದನ್ನು ಬಿಟ್ಟು ಶ್ಯಾಮ ಮಾಡುವುದನ್ನೇ ಗಮನಿಸುತ್ತಾರೆ. ಶ್ಯಾಮ ಇವರ್‍ಯಾರನ್ನೂ ಗಮನಿಸುವುದಿಲ್ಲ. ಶೂನ್ಯ ಕುರ್ಚಿಯ ಎದುರಿನ ಮೆಲೆ ಸುಮ್ಮನೆ ಒಂದು ಸಿಗರೇಟು ಬೂದಿಯಾಗುತ್ತಿದೆ. ಹೊಗೆ ಎದ್ದೂ ಎದ್ದೂ ಒಂದು ಕಪ್ ಚಹ ತಣ್ಣಗಾಗುತ್ತ ಬಂದಿದೆ. ಶ್ಯಾಮ ಮನದಲ್ಲೇ ಹೇಳಿಕೊಳ್ಳುತ್ತಾನೆ. ಗೌರ ಭೌಮಿಕ, ಸಾಧ್ಯವಾದರೆ ಪುನಃ ಹುಟ್ಟಿ ಬಾ. ಜಲದಿಂದ, ಗಾಳಿಯಿಂದ, ಮಣ್ಣಿನಿಂದ ಪುನಹ ನಿನ್ನ ಶರೀರವನ್ನು ಸಂಗ್ರಹಿಸಿ ತೆಗೆದುಕೊಂಡು ಬಾ, ಅದಾದ ಮೇಲೆ ಕೇವಲ ಜೀವ ಜೋಪಾನ ಮಾಡುವುದನ್ನು ಮರೆತು ಬಿಡು... ಆದರೆ ಪುನಃ ಬದುಕಲು ತುಂಬಾ ಮನಸ್ಸಾಗುತ್ತದೆ. ಪುನಃ ಮತ್ತೊಮ್ಮೆ ಪೃಥ್ವಿಯಲ್ಲಿ ಹುಟ್ಟಲು... ಗೌರಭೌಮಿಕ ಅದಾಗುವುದಿಲ್ಲ. ಒಂದು ವೇಳೆ ಆದರೆ, ಪುನಃ ಹುಟ್ಟಿ ಬಾ, ಅಲ್ಲಿಯವರೆಗೆ ನಾನು ಪೃಥ್ವಿಯನ್ನು ಸುಂದರವಾಗಿ ಮಾಡುತ್ತೇನೆ. ನೀನು ಆಗ ರಸ್ತೆಯ ತಿರುವನ್ನು ಅನಾಯಾಸವಾಗಿ ಬಿರುಗಾಳಿಯ ವೇಗದಲ್ಲಿ ದಾಟಿ ಹೋಗಬಹುದು... ನೀನು ಲೀಲಾಳ ತೊಡೆಯ ಕಂದನಾಗಿ ಬಾ, ಆಗ ನಾನು ನಿನ್ನನ್ನು ಚೆನ್ನಾಗಿ ಬೆಳೆಸಿ ದೊಡ್ಡವನನ್ನಾಗಿ ಮಾಡುತ್ತೇನೆ.

ಅನಂತರ ಶ್ಯಾಮ ಎದ್ದು ಎರಡು ಕಪ್ ಚಹದ ಹಣವನ್ನು ಪಾವತಿ ಮಾಡಿ, ಚಹದಂಗಡಿಯಿಂದ ಹೊರಗೆ ಎದ್ದು ಬರುತ್ತಾನೆ.

ನೀನು ಹುಡುಗನಾಗಿದ್ದಿ, ನೀನು ಗಂಡನಾಗಿದ್ದಿ, ನೀನು ಅಪ್ಪನಾಗಿದ್ದಿ, ನೀನು ಇಷ್ಟೆಲ್ಲ ಆಗಿದ್ದಿ ಎಂದು ಯಾರಿಗೂ ಗೊತ್ತು ಕೂಡಾ ಇರಲಿಲ್ಲ. ಪುನಃ ನೋಡು ನೀನೇ ಜೋರಾಗಿ ಓಡುತ್ತಿರುವ, ಮೋಟರ್ ಸೈಕಲಿನ ಕೆಳಗೆ ಬೀಳುತ್ತಿರುವ ವಿಚ್ಛಿನ್ನ ವ್ಯಕ್ತಿ. ನೀನು ಪೃಥ್ವಿಯ ಯಾವ ವ್ಯಕ್ತಿಯೂ ಅಲ್ಲ... ಗೌರ ಭೌಮಿಕ ನನ್ನ ಮೇಲಿನ ಅಧಿಕಾರಿ, ಬ್ಯಾಸ್ಟರ್ಡ್ ಎಂದು ನನ್ನನ್ನು ಬೈಯದೇ ಇರುತ್ತಿದ್ದರೆ, ನಾನೇನು ಕೆಲಸ ಬಿಡುತ್ತಿದ್ದೆನಾ? ಕೆಲಸ ಬಿಡದೇ, ನಾನೇನು ಆಟದ ಛಲದಿಂದ ನಿನ್ನ ಮುಖದ ಮೇಲೆ ಕನ್ನಡಿಯ ಬೆಳಕನ್ನು ಬೀರುತ್ತಿದ್ದೆನಾ? ನೋಡು ಇವೆಲ್ಲ ಏನೋ ಒಂದು ತರಹ ಕಾರ್ಯಾಕರಣ ಸೂತ್ರದಲ್ಲಿ ಬಂಧಿಸಿದಂತೆ, ಆಗ ನೀನು ಯಾರನ್ನು ಹೊಣೆ ಮಾಡುವಿ? ಈ ಎರಡೂ ಕೈಗಳನ್ನು ಮೇಲೆತ್ತಿ ಹೇಳುತ್ತಿದ್ದೇನೆ – ನಾನೇ ಹೊಣೆಯಲ್ಲ, ಪುನಃ ನೋಡು, ನಾನೇ ತಲೆ ತಗ್ಗಿಸಿ ಒಪ್ಪಿಕೊಳ್ಳುತ್ತಿದ್ದೇನೆ – ನಾನು ಹೊಣೆ. ನೀನು ಯಾರನ್ನು ಹೊಣೆ ಎಂದೆನ್ನುವಿ? ಒಮ್ಮೊಮ್ಮೆ ನಡುರಾತ್ರಿ ನಿದ್ದೆಯ ಮಧ್ಯೆ ನಾನು ಕರೆಯುತ್ತೇನೆ. ಶ್ಯಾಮ ಅನಂತರ ನಾನೇ ನನಗೆ ಉತ್ತರಿಸುತ್ತೇನೆ. ನಿನಗೆ ಎಲ್ಲಾ ತಿಳಿಸಿ ಹೇಳುವುದಿನ್ನೂ ಮುಗಿದಿಲ್ಲ. ಇನ್ನೂ ನನ್ನ ಒಳಗೆ ಅಪರಿಚಿತ ಶ್ಯಾಮನೊಬ್ಬನಿದ್ದಾನೆ... ಇಲ್ಲ ಭೂಮಿ ಅಷ್ಟೇನು ಸುಂದರವಾಗಿಲ್ಲ. ಆದರೂ ನಾನು ನಿರೀಕ್ಷೆಯಲ್ಲಿದ್ದೇನೆ... ಪುನಃ ಹುಟ್ಟಿ ಬಾ. ಒಂದು ಸಲ ಮತ್ತೊಮ್ಮೆ ಹುಟ್ಟಿ ನನ್ನ ಬಳಿ ಬಾ...

ಶ್ಯಾಮ ತುಂಬಾ ಹೊತ್ತು ರಸ್ತೆಗಳನ್ನೆಲ್ಲಾ ಸುತ್ತಾಡಿದ. ತಲೆಯೊಳಗೊಮ್ಮೆ, ಎದೆಯೊಳಗೊಮ್ಮೆ, ದುಂಬಿಯ ಶಬ್ದದಂತೆ, ತುಂಬಾ ಆಳದಲ್ಲಿ ಒಂದು ಮೋಟರ್ ಸೈಕಲಿನ ಶಬ್ದ ಕೇಳಿ ಬಂತು. ಶ್ಯಾಮ ತುಂಬಾ ಚಕಿತನಾಗಿ, ತನ್ನನ್ನೇ ಕರೆದು ಕೇಳಿದ – ನೀನು ಕೂಡಾ, ವೇಗವಾಗಿ ಓಡುತ್ತಿರುವ ಮೋಟರ್ ಸೈಕಲಿನಿಂದ ಹಾರಿ ಬೀಳುವ ಒಬ್ಬ ವಿಚ್ಛಿನ್ನ ವ್ಯಕ್ತಿ, ನೀನು ಪೃಥ್ವಿಯಲ್ಲಿನ ಯಾರೂ ಅಲ್ಲ. ಇಲ್ಲ ನಾನಲ್ಲ. ಶ್ಯಾಮನಿಗೆ ಗೊತ್ತು, ಅವನು ಶ್ಯಾಮ ಚಕ್ರವರ್ತಿ. ಅಪ್ಪ ಕಮಲಾಕ್ಷ ಚಕ್ರವರ್ತಿ. ವಿಕ್ರಮಪುರದ ಖಾನಿಖಾಡ ಗ್ರಾಮ ಅವನ ಊರು. ಅವನು ಸೇಂಟ್ ಎಂಡ್ ಮಿಲರ್ ಕಂಪನಿಯ ಚಿಕ್ಕ ಅಧಿಕಾರಿಯಾಗಿದ್ದ. ಈ ಎಲ್ಲದರ ನಡುವೆ ಅವನು ಬಂಧಿಯಾಗಿದ್ದಾನೆ. ಅದಕ್ಕೆ ಅವನಿಗೆ ಅವನ್ಯಾರು ಅಥವಾ ಅವನು ಯಾವ ತರಹ ಎನ್ನುವುದು ಅವನಿಗೆ ಗೊತ್ತಿಲ್ಲ.

# 14

ಶ್ಯಾಮನಿಗೆ, ಸ್ವಲ್ಪ ನೆತ್ತಿ ಬಿಸಿಯಾಗಿ ತಲೆ ಸಿಡಿತ ಹಾಗೂ ಸ್ವಲ್ಪ ಬಾಯಾರಿಕೆಯಾದಂತೆ ಅನಿಸಿತು. ಅವನಿಗೆ ಜ್ವರ ಬರುತ್ತಾ ಇದೆ. ಆದರೂ ಅವನ ಮೈ ಅಷ್ಟೇನು ತಣ್ಣಗಾಗಿಲ್ಲ ಎಂದು ಅವನಿಗನಿಸಿತು. ದೇಹದಲ್ಲಿ ತುಂಬಾ ಕೊಳೆ ಸೇರಿಕೊಂಡಿದೆ. ಟವೆಲಿನಿಂದ ಮೈಯನ್ನು ಚೆನ್ನಾಗಿ ತಿಕ್ಕಿ ಒರೆಸಿಕೊಂಡು, ಇಡೀ ಮೈಯೊಳಗಿನ ಕೊಳೆಯನ್ನು ತೆಗೆಯುವ ಪ್ರಯತ್ನ ಮಾಡಿದ. ಕೊನೆಗೆ ಮೈ ಮೇಲೆ ತುಂಬ ನೀರನ್ನು ಹೊಯ್ದುಕೊಂಡ. ಅವನ ಶರೀರ ಎಣ್ಣೆ ಕಾಣದೆ, ಒಣಗಿ, ಚಳಿಗೆ ಅಲ್ಲಲ್ಲಿ, ಒಡೆದಿದೆ. ಆ ಒಡೆದ ಜಾಗಗಳಲ್ಲಿ, ತಣ್ಣೀರು ನುಗ್ಗಿ ಅವನನ್ನು ಥರ ಥರ ನಡುಗಿಸುತ್ತಾ ಇತ್ತು. ಕಿವಿ ಚಳಿಗೆ ಕನ್ ಕನ್ ಎಂದಿತು. ಚಳಿಯಿಂದ ತಲೆ ಸಿಡಿಯಿತು, ಹಲ್ಲುಗಳು ಚುಳ್ ಎಂದವು. ಆದರೂ ಇಂದು ಅವನು ತುಂಬಾ ಹೊತ್ತು ಸ್ನಾನ ಮಾಡಿದ. ಕೊಳೆಯಾದ ರೇಶಿಮೆಯ ಶಾಲನ್ನು ಹೊದ್ದುಕೊಂಡು, ಹೋಟೆಲಿಗೆ ಹೊರಡುತ್ತಿದ್ದಂತೇ ಅವನ ದೇಹ ಥರ ಥರ ಕಂಪಿಸತೊಡಗಿತು. ಅವನಿಗೆ ಕಣ್ಣಲ್ಲಿ ಉರಿ ಉರಿ ಎಂದೆನಿಸತೊಡಗಿತು. ತನ್ನ ದೇಹ ಪೂರ್ತಿ ಸ್ವಚ್ಛವಾಗಿಲ್ಲ. ಇನ್ನೂ ಕೊಳೆ ಉಳಿದಿದೆ ಎಂಬ ಭಾವನೆ ಅವನ ಮನಸ್ಸಿಗೆ ಬಂತು. ಇನ್ನೂ ತುಂಬಾ ಹೊತ್ತು ತಾನು ಸ್ನಾನ ಮಾಡುವುದು ತುಂಬಾ ಅವಶ್ಯಕ ಎಂದು ಅವನಿಗೆ ಅನ್ನಿಸಿತು.

ಅನ್ನದ ಮೊದಲ ತುತ್ತನ್ನು ಬಾಯಿಗಿಡುತ್ತಲೇ ದೇಹದೊಳಗಿನಿಂದ ವಾಂತಿ ಹೊರಬರುತ್ತಿದೆ ಎಂದವನಿಗನ್ನಿಸಿತು. ಊಟದ ಮೇಜಿನ ತುಂಬಾ ಸಜ್ಜುಗೊಳಿಸಿ ಇಟ್ಟಿದ್ದ,

ಚೈನಾ ಮಣ್ಣಿನ ತಟ್ಟೆಯ ಮೇಲೆ ಅವನು ತಲೆ ತಗ್ಗಿಸಿಕೊಂಡಿದ್ದ. ಆ ತಟ್ಟೆಯ ಮೇಲೆ ಜೊಲ್ಲು ಅವನ ಬಾಯಿಂದ ಸುರಿಯಿತು. ಯಾರಾದರೂ ಅವನನ್ನು ಗಮನಿಸುವ ಮೊದಲೇ ಅವನು ಕರವಸ್ತ್ರದಿಂದ ತನ್ನ ಮುಖವನ್ನು ಮುಚ್ಚಿಕೊಂಡ. ಅನಂತರ ಎದ್ದು ಹೋಗಿ ಮುಖ ತೊಳೆದುಕೊಂಡು ಬಂದ. ಅರೆ ನಿದ್ದೆಯಲ್ಲಿದ್ದ ಮ್ಯಾನೇಜರನಿಗೆ, ಅಸ್ಪಷ್ಟ ಧ್ವನಿಯಲ್ಲಿ – ನನ್ನ ಊಟವನ್ನು ನಾಯಿಗಳಿಗೆ ಹಾಕಿ ಬಿಡಿ ಎಂದ ಶ್ಯಾಮ.

ಏನಾಯ್ತು?

ಮೈಯಲ್ಲಿ ಚೆನ್ನಾಗಿಲ್ಲ.

ಶ್ಯಾಮ ಹೊರ ಬಂದು, ಒಂದು ಪಾನಿನಂಗಡಿಯಿಂದ ಉಪ್ಪು, ಮಸಾಲೆ ಹಾಗೂ ನಿಂಬೆ ರಸ ಹಾಕಿದ ಸೋಡ ಕುಡಿದ. ಹಾಗೇ ತಲೆ ನೋವಿನ ಎರಡು ಗುಳಿಗೆಗಳನ್ನು ಕೊಂಡುಕೊಂಡ. ಅವನ ನಾಲಿಗೆಗೆ ಏನೂ ರುಚಿಸುತ್ತಿರಲಿಲ್ಲ. ಅವನಿಗೆ ತುಂಬಾ ಜ್ವರ ಬಂದಿದೆ. ತುಂಬಾ ಅಸೌಖ್ಯವಾಗಬಹುದು. ತುಂಬಾ ದಿನದಿಂದ ಅವನು ತನ್ನ ದೇಹದ ಕಡೆ ಚೆನ್ನಾಗಿ ಗಮನವಿಟ್ಟಿಲ್ಲ. ತುಂಬಾ ದಿನದಿಂದ ಅವನನ್ನು ಅನ್ಯಮನಸ್ಕನನ್ನಾಗಿ ಮಾಡಿ, ಅವನ ಶರೀರ ಅಸೌಖ್ಯವನ್ನು ಬರಮಾಡಿಕೊಂಡಿದೆ. ಯಾರಿಗೆ ಗೊತ್ತು ಈ ಸಲ ಅಸೌಖ್ಯದಿಂದಾಗಿ ಮನೆಯಲ್ಲೋ ಅಥವಾ ಆಸ್ಪತ್ರೆಯಲ್ಲೋ ಅವನು ತುಂಬಾ ದಿನ ಮಲಗಿಕೊಳ್ಳ ಬೇಕಾಗಬಹುದು.

ಶ್ಯಾಮ ತುಂಬಾ ಮೆಲ್ಲನೆ ನಡೆಯುತ್ತಿದ್ದ. ಅವನಿಗೆ ಅಕಾರಣವಾಗಿ, ತನಗೆ ಅಸೌಖ್ಯ ಬರುವ ಮೊದಲು, ತಾನು ಯಾವುದೋ ಒಂದು ಕೆಲಸವನ್ನು ಮುಗಿಸುವುದು ಬಾಕಿ ಇದೆ ಎಂದು ಮನಸ್ಸಿಗನ್ನಿಸುತ್ತಿತ್ತು. ಅವನ ಶರೀರ ಕಂಪಿಸುತ್ತಿತ್ತು. ಮನದೊಳಗೆ ಕೂಡಾ ಒಂದು ರೀತಿಯ ಕಸಿವಿಸಿ. ಹೊರಗೆ ಮಳೆ ಬರುವಂತಿದೆ, ಮೊದಲು, ಮೇಲ್‌ಛಾವಣಿಯಲ್ಲಿ ಒಣಗಲು ಹಾಕಿದ ಬಟ್ಟೆಬರೆಗಳನ್ನು ತರಬೇಕು ಎನ್ನುವಂತಹ ಮನದ ಧಾವಂತ. ಅಥವಾ ಟ್ರೈನು ಹೊರಡುವ ಗಂಟೆ ಬಾರಿಸುತ್ತಿದೆ. ಸಮಯಾವಕಾಶವಿಲ್ಲ. ಟ್ರೈನು ಹೊರಡುವ ಮೊದಲೇ ವಿದಾಯ ಹೇಳಲು ಬಂದವರಿಗೆ, ನನ್ನ ಮನೆಯನ್ನು ಚೆನ್ನಾಗಿ ನೋಡಿಕೋ, ನಾನು ಸಾಕಿದ ಹಕ್ಕಿಗಳಿಗೆ ನೀರು, ಕಾಳು ಹಾಕು. ಮನೆಯಲ್ಲಿ ಕಳ್ಳತನವಾಗದಂತೆ ನೋಡಿಕೋ, ನಾನು ಹಿಂತಿರುಗಿ ಬರುವ ಮೊದಲೇ ನನ್ನ ಪ್ರಿಯ ಜನರು ವಿದಾಯ ಹೇಳದಂತೆ ನೋಡಿಕೋ, ನನ್ನ ಸುಂದರವಾದ ತೋಟಕ್ಕೆ ಯಾರೂ ತಮ್ಮ ಹಸು, ಕುರಿಗಳನ್ನು ನುಗ್ಗಿಸದಂತೆ ನನ್ನ ಕೈಯಿಂದಲೇ ನಾನು ನೆಟ್ಟ ಸಸಿಗಳು, ವೈಶಾಖದ ಗಾಳಿಗೆ ಹಾರಿ ಹೋಗದಂತೆ ನೋಡಿಕೋ ಎಂಬ ಮುಖ್ಯವಾದ ಮಾತುಗಳನ್ನು ಹೇಳುವುದು ಆವಶ್ಯಕ.

ಈ ಎಲ್ಲಾ ಅರ್ಥಹೀನ ಮಾತುಗಳನ್ನು ಶ್ಯಾಮ ಮನದಲ್ಲೇ ಗೊಣಗುಟ್ಟುತ್ತಿದ್ದ. ಶ್ಯಾಮನಿಗೆ ಸರಿಯಾಗಿ ತಿಳಿಯುವುದಿಲ್ಲ. ಆದರೂ ತಾನು ಯಾವುದೋ ಮುಖ್ಯವಾದ ಮಾತನ್ನು ಯಾರಿಗೋ ಹೇಳುವುದು ಇನ್ನೂ ಬಾಕಿ ಇದೆ ಎಂದು ಅವನ ಮನಸ್ಸಿಗನ್ನಿಸಿತು. ಯಾರಿಗೆ? ಶ್ಯಾಮನಿಂದ ಯೋಚಿಸಲಾಗಲಿಲ್ಲ. ಅವನ ಅಕ್ಕ ಪಕ್ಕ ಶೂನ್ಯ ಜನರು

ಓಡಾಡುತ್ತಿದ್ದಾರೆ. ಅವರೆಲ್ಲ ಇವನಿಗೆ ಚಿರಅಪರಿಚಿತರು. ಇವರೆಲ್ಲ ಯಾರಿಗೆ ಏನಾಗಬೇಕು? ಇಲ್ಲ. ಶ್ಯಾಮ ತಲೆ ಅಲ್ಲಾಡಿಸುತ್ತಾನೆ.

ಮಧ್ಯಾನ್ಹದ ಬಿಸಿಲು, ಪಕ್ವಕಾಳಿನ ಬಣ್ಣ ತಳೆದಿದೆ. ಶ್ಯಾಮ ತನ್ನ ಚಿರಪರಿಚಿತ ಕಂಬದ ಮೈಗೊರಗಿ, ಗಾಜಿನ ಬಾಗಿಲಿಗೆದುರಾಗಿ ನಿಂತುಕೊಂಡು ಮೆಲ್ಲ ಮೆಲ್ಲನೆ ಏದುಸಿರು ಬಿಡತೊಡಗಿದ. ಬಾಗಿಲನ್ನು ಸರಿಯಾಗಿ ದಿಟ್ಟಿಸಿ ನೋಡಿದ. ಬಾಗಿಲಿನ ಮೇಲೆ ತುಂಬಾ ಧೂಳು. ಒಳಗಿನದು ಸರಿಯಾಗಿ ಕಾಣಿಸುವುದೇ ಇಲ್ಲ. ಶ್ಯಾಮನಿಗೆ ತುಂಬಾ ಸಿಟ್ಟು ಬಂತು. ಈ ಜನ ಕೆಲಸದಲ್ಲಿ ತುಂಬಾ ಸೋಮಾರಿಗಳು. ಇವರು ಗಾಜಿನ ಬಾಗಿಲನ್ನು ದಿನಾ ಒರೆಸಿ ಸ್ವಚ್ಛ ಮಾಡುವುದು ತುಂಬಾ ಅಗತ್ಯ. ಈ ಮಾತನ್ನು ಒಳಗಡೆ ಹೋಗಿ, ಮೇಲಿನಧಿಕಾರಿಗೆ – ನಿಮ್ಮ ಕಚೇರಿಯ ಗಾಜಿನ ಬಾಗಿಲು ತುಂಬಾ ಕೊಳೆಯಾಗಿ ಹೋಗಿದೆ, ಅದನ್ನು ಸ್ವಲ್ಪ ಸ್ವಚ್ಛ ಮಾಡಿಸಿ, ಎಂದು ತಿಳಿಸಲು ಇಚ್ಛೆಯಾಗುತ್ತೆ.

ಆದರೆ. ಶ್ಯಾಮ ಒಂದಿಷ್ಟು ಆ ಸ್ಥಳದಿಂದ ಅಗಲುವುದಿಲ್ಲ. ಅವನು ಅದೇ ರೀತಿ ನಿಂತುಕೊಂಡೇ ಇದ್ದ. ಅವನು ತನ್ನ ಮನಸ್ಸು ಹಾಗೂ ಹೃದಯದಿಂದ ಗಾಜಿನ ಆ ಕೊಳೆಯನ್ನು ಭೇದಿಸಲು ಪ್ರಯತ್ನಿಸಿದ.

ಅಕ್ಕ ಪಕ್ಕ ನೆರಳಿನಂತೆ, ಅಸ್ತಿತ್ವವಿಲ್ಲದ ಜನ ಓಡಾಡುತ್ತಿದ್ದಾರೆ. ಅವನಿಗೆ ಪರಿಚಯವಿರುವ ಈ ಚತುರ್ದಿಕ್, ರಸ್ತೆ, ಮನೆಗಳನ್ನು ಭೇದಿಸಿಕೊಂಡು, ಒಂದೊಂದೇ ಮಾಯಾವಿ ಜಿಂಕೆಗಳು ಓಡಿ ಬರುತ್ತಿವೆ. ಆದರೂ ಅವರ್ಯಾರಿಗೂ ಇದರ ಅರಿವಿಲ್ಲ. ಶರೀರದೊಳಗೆ ಮೋಡ ಗರ್ಜಿಸುತ್ತಿದೆ. ಮಳೆ ಸುರಿಯುತ್ತಿದೆ. ಅದೇ ಮಳೆಯ ನೀರಿನಂತೆ ಹೃದಯ ಪ್ರೀತಿಯಿಂದ ತುಂಬಿ ಬರುತ್ತಿದೆ. ಬಹುದೂರದಲ್ಲಿ ಪರಿಚಯವಿಲ್ಲದ ಒಂದು ರೈಲುಗಾಡಿ, ಸೇತುವೆ ದಾಟಿ ಹೋಗುತ್ತಿದೆ.

ಶ್ಯಾಮನಿಗೆ ಸ್ಪಷ್ಟವಾಗಿ ಕಾಣಿಸುವುದಿಲ್ಲ. ಗುಂಪಿನಿಂದ, ತುಂಬಾ ಎತ್ತರ ಕಪ್ಪು ಮುಖದ ವ್ಯಕ್ತಿ ಒಬ್ಬ ಹೊರ ಬಂದು ಅವನ ಮುಂದೆ ನಿಂತುಕೊಂಡಂತೆ ಶ್ಯಾಮನ ಮನಸ್ಸಿಗನಿಸುತ್ತೆ. ಅವನ ಮುಖ ತುಂಬಾ ದಯಾಹೀನ, ಹಾಗೂ ನಿಷ್ಠುರವಾಗಿದೆ. ಶ್ಯಾಮ ಚಕಿತನಾಗಿ, ಮಿನು ಅಲ್ವಾ ಅಂತಾನೆ.

ಆ ವ್ಯಕ್ತಿ ಸ್ಥಿರ ಕಣ್ಣುಗಳಿಂದ ನೋಡುತ್ತಾನೆ. ಅವನ ತುಟಿ ಅಲ್ಲಾಡುತ್ತಿದೆ. ಅವನು ಮಾತನಾಡುತ್ತಿದ್ದಾನೆ. ಶ್ಯಾಮನಿಗೆ ಸ್ಪಷ್ಟವಾಗಿ ಅರ್ಥವಾಗುವುದಿಲ್ಲ. ಮಿನು ಅವನನ್ನು ನಿನಗೆ ಏನು ಬೇಕು? ನೀನ್ಯಾರು ಅಂತ ಕೇಳುತ್ತಿದ್ದಾನೆ ಎಂದು ಅವನ ಮನಸ್ಸಿಗೆ ಅನಿಸುತ್ತೆ.

ನಾನು ಶ್ಯಾಮ - ಭಯದಿಂದ ಹೇಳುತ್ತಾನೆ. ಮಿನು, ನಾನು ಶ್ಯಾಮ, ಶ್ಯಾಮ ಚಕ್ರವರ್ತಿ, ಖಾನಿಖಾಡ ಗ್ರಾಮದ ಕಮಲಾಕ್ಷ ಚಕ್ರವರ್ತಿ ನಮ್ಮಪ್ಪ. ಮತ್ತೆ ನೀನು ಮಿನು, ನಾರಾಯಣ ಗಂಜ್‌ದ ಮಿನು... ಅಲ್ವಾ?

ಆ ವ್ಯಕ್ತಿ ಗಾಜಿನ ಬಾಗಿಲನ್ನು ಮರೆಮಾಡಿ ನಿಂತುಕೊಳ್ಳುತ್ತಾನೆ. ಅವನ ಮುಖ ಅಗಲವಾಗಿ ಕಾಣಿಸುತ್ತದೆ. ಅವನ ತುಟಿ ಪುನಃ ಅಲ್ಲಾಡಿತು. ಶ್ಯಾಮನಿಗೆ ಮಿನು ಮಾತನಾಡುತ್ತಿದ್ದಾನೆ; ನಿನ್ನ ಗುರುತು ಸಿಗಲಿಲ್ಲ ಎಂದು ಹೇಳುತ್ತಿದ್ದಾನೆ ಎನ್ನುವುದು ಅರ್ಥವಾಯಿತು.

ಶ್ಯಾಮ ತಕ್ಷಣ ಚಕಿತನಾದ. ಶ್ಯಾಮ ಆ ವ್ಯಕ್ತಿಯ ಬಲಗೈ ನೋಡಿದ. ಆ ಕೈಯಲ್ಲಿ ಉಕಾರದಂತಿರುವ ಕಬ್ಬಿಣದ ಸಲಾಕೆ. ವಿದ್ಯುತ್ ಗತಿಯಿಂದ ಆ ಕೈ ಬೀಸಿ ಬಂತು. ಅಸಹಾಯ ಶ್ಯಾಮ ಅದನ್ನು ತಡೆಯುವ ಪ್ರಯತ್ನವನ್ನೇ ಮಾಡಲಿಲ್ಲ. ಅದು ಎಲ್ಲಿ ಅವನಿಗೆ ತಗುಲಿತು ಎನ್ನವುದೂ ಅವನಿಗೆ ತಿಳಿಯಲಿಲ್ಲ. ಮೃದು ಕಂಬವನ್ನು ಭೇದಿಸಿಕೊಂಡು ಅವನ ಶರೀರ, ಫುಟ್‌ಪಾತಿನ ಮೇಲೆ ಒರಗುತ್ತಿದೆ. ಪುನಃ ಅವನು ಎದ್ದು ಕುಳಿತುಕೊಳ್ಳುವ ಪ್ರಯತ್ನವನ್ನು ಮಾಡುತ್ತಾನೆ. ಅವನೆದುರು ಕಂಬದಂತಿರುವ ಎರಡು ಕಾಲುಗಳ ಮೇಲೆ ಆ ವ್ಯಕ್ತಿ ನಿಂತುಕೊಂಡಿರುವುದು ಅವನಿಗೆ ಕಂಡು ಬರುತ್ತದೆ. ಆ ಕಾಲುಗಳು ಮೇಲೇಳುತ್ತಲೇ ಹಳೇ ಬೂಟ್ಸಿನ ಒದೆತ. ಕ್ಷಣದಲ್ಲಿ ಇಡೀ ಶರೀರದೊಳಗಿನಿಂದ ವಾಂತಿ ಹೊರ ಬಂತು, ಅವನ ರುಚಿ ಕೆಟ್ಟ ನಾಲಿಗೆಯನ್ನು ಅತಿಕ್ರಮಿಸಿ ಉಗುಳು, ಬಳ ಬಳನೆ ಹೊರಬಂತು. ಅವನೆದೆ ಒದ್ದೆಯಾಯಿತು. ಆದರೆ ಅವನ ಎದೆ ಹಗುರವಾಯಿತು. ತುಂಬಾ ದಿನಗಳಿಂದ ಈ ವಾಂತಿ ಅವನಲ್ಲಿ ಸೇರಿಕೊಂಡು ಬಿಟ್ಟಿತು. ಪುನಃ ಶ್ಯಾಮ ಎದ್ದೇಳುವ ಪ್ರಯತ್ನ ಮಾಡುತ್ತಾನೆ. ಆದರೆ ಅವನಿಂದ ಮೇಲೇಳಲಾಗುವುದಿಲ್ಲ. ಆ ವ್ಯಕ್ತಿ ತನ್ನ ಬಲಕೈ ಮುಂದೆ ಮಾಡಿ, ಕುತ್ತಿಗೆ ಹತ್ತಿರ ಶಾಲನ್ನು ಬಿಗಿಯಾಗಿ, ಮುಷ್ಟಿಯಲ್ಲಿ ಹಿಡಿಯುತ್ತಾನೆ. ಹಾಗೇ ಅವನನ್ನು ಎಳೆದು, ಎತ್ತಿ ಎದ್ದು ನಿಲ್ಲಿಸುತ್ತಾನೆ. ಪುನಃ ಅವನ ಕೈಯಲ್ಲಿನ ಕಬ್ಬಿಣದ ಸಲಾಕೆ ಹೊಳಯುತ್ತೆ. ಪುನಃ ಕೈ ಎರಡೂ ಬೀಸಿ ಬರುತ್ತೆ. ಶ್ಯಾಮ ಮೆಲ್ಲನೆ ನಗುತ್ತಾನೆ. ಅವನನ್ನು ತಡೆಯುವುದಿಲ್ಲ.ಆ ಹೊಡೆತದ ಜೋರಿಗೆ ಅವನ ತಲೆ ಗಿರ್ ಎನ್ನುತ್ತದೆ, ಹಿಂದಿನ ಕಂಬದೊಳಗೆ ತೂರಿ ಹೋಗುತ್ತೆ. ಆಶ್ಚರ್ಯ. ಶ್ಯಾಮನಿಗೆ ತುಂಬಾ ಚೆನ್ನ ಎಂದೆನಿಸುತ್ತದೆ. ಕೆಳಗೆ ಬೀಳುತ್ತಿರುವಂತೆಯೇ, ಶ್ಯಾಮ ಆ ವ್ಯಕ್ತಿಯ ಬಿಗಿ ಹಿಡಿತದೊಳಗೇ ಗೊಣಗುಟ್ಟುತ್ತಾನೆ – ಯಾಕೆ ಮಿನು ನನ್ನನ್ನು ಹೊಡೀತೀ? ಯಾಕೆ ಹೊಡೀತೀ? ನಾನು ಇಲ್ಲಿ ಬಂದು, ಲೀಲಾಳ ಮುಂದೆ ನಿಂತುಕೊಂಡಿದ್ದೇನೆ ಅಂತಾನಾ? ಅಥವಾ ಕೆಲವು ದಿನಗಳ ಹಿಂದೆ ನಾನು ಒಬ್ಬನ ಮುಖದ ಮೇಲೆ ಕನ್ನಡಿಯ ಬೆಳಕು ಬೀರಿದ ಅಂತಲೋ?... ಆಃ... ಯಾವ ಕಾರಣವೇ ಆಗಿರಲಿ... ಮಿನು ನಿಲ್ಲಿಸಬೇಡ... ಮಿನು... ಶಾಭಾಶ್.

ಬಡ್ಡೀ ಮಗನೇ, ಸೂಳೇ ಮಗನೇ, ಶ್ಯಾಮನಿಗೆ ಮಿನುವಿನ ಮಾತು ಕೇಳಿ ಬರುತ್ತದೆ.

ಇಲ್ಲ. ಶ್ಯಾಮ ತಲೆ ಕೊಡವುತ್ತಾನೆ. ನಾನು ಶ್ಯಾಮ ಚಕ್ರವರ್ತಿ. ಕಮಲಾಕ್ಷ ಚಕ್ರವರ್ತಿ ನನ್ನ ತಂದೆ. ವಿಕ್ರಮಪುರದ ಖಾನಿಖಾಡಾ ನಮ್ಮ ಊರು...

ನೀರಿನ ಕೊಳೆ, ಘಟ್ಟಕ್ಕೆ ಹೋಗುವ ರಸ್ತೆ ಕಾಮರಂಗಿನ ಮರ, ಹಾಗೇ ಭಾವಿಯ ಹತ್ತಿರ ದೀಪದ ಹುಳ ಚಕ್ ಚಕ್ ಎಂದು ಹೊಳೆಯುತ್ತಿದೆ. ಶ್ಯಾಮನಿಗೆ ಎಲ್ಲಾ ಕಣ್ಣಿಗೆ ಕಾಣಿಸುತ್ತದೆ.

ಘನ ಅಂಧಕಾರದ ನಡುವೆ, ಗೋಡೆಯ ಮೇಲೆ ಚಿಕ್ಕ ಒಂದು ಕಂದೀಲಿನ ದೀಪದ ಬಳಿ ಕುಳಿತ ಅಮ್ಮ, ತಟ್ಟನೆ ಬೀಜ ಮಂತ್ರ ಮರೆತು, ಮೆಲ್ಲನೆ ಕೂಗ್ತಾ ಇದ್ದಾಳೆ ಮನು... ಮನುರೇ... ಮನು... ಮನೂ

ನಾಲ್ಕು ಕಡೆಯಿಂದ ಜನ ಬರುತ್ತಿದ್ದಾರೆ. ಎತ್ತರ, ಕಪ್ಪು ಮುಖದ ಮಿನು ಬೊಟ್ಟು ಮಾಡಿ ಅವನನ್ನು ಏನೋ ಗದರಿದ. ಶ್ಯಾಮನಿಗೆ ಯಾವುದೂ ಸರಿಯಾಗಿ ಅರ್ಥವಾಗಲಿಲ್ಲ. ಆದರೂ

ತಲೆ ಅಲ್ಲಾಡಿಸಿ ಮಾತನಾಡುವ ಪ್ರಯತ್ನ ಮಾಡಿದ – ಸರಿ ಹಾಗಾದ್ರೆ – ಎಲ್ಲಾ ಸರಿಯಾಗಿದೆ.

ಮಿನು ಯಾರಿಗೂ ಏನೂ ಉತ್ತರ ಕೊಡಲಿಲ್ಲ. ಮಾತನಾಡದೆ, ಕೊನೆಯ ಬಾರಿ ಶ್ಯಾಮನನ್ನು ನೋಡಿ, ಗುಂಪಿನಲ್ಲಿ ಒಂದಾಗಿ ಹೊರಟು ಹೋದ.

ಪುನಃ ಮೆಲ್ಲಮೆಲ್ಲನೆ ಮಿನುವಿನ ಕೈಯಿಂದ ಬಿಡುಗಡೆ ಹೊಂದಿದ ಅವನ ಶರೀರ, ಮಣ್ಣಿನ ಕಡೆ ವಾಲಿ ಹೋಗುತ್ತಿತ್ತು. ಮಿನು ಅವನನ್ನು ಯಾಕೆ ಹೊಡೆದ ಎನ್ನುವುದು ಶ್ಯಾಮನಿಗೆ ಅರ್ಥವಾಗಲಿಲ್ಲ. ಅರ್ಥಮಾಡಿಕೊಳ್ಳುವ ಅಗತ್ಯವೂ ಇರಲಿಲ್ಲ. ಶ್ಯಾಮನ ಜ್ವರ ಹೆಚ್ಚಾಗುತ್ತಿದೆ. ಆದರೂ ಅವನಿಗೆ ಯಾವೊಂದೂ ನೋವು ಕಾಣಿಸಲಿಲ್ಲ. ಅವನಿಗೆ ಸುಮ್ಮನೆ ಮಲಗಿಕೊಳ್ಳುವ ಇಚ್ಛೆಯಾಯಿತು. ದಿಟ್ಟಿಸಿ ನೋಡಿದ. ನೆರಳಿನಂತೆ, ಅಸ್ತಿತ್ವವಿಲ್ಲದ ಜನರು ಅವನನ್ನು ಸುತ್ತುವರಿದಿದ್ದಾರೆ. ಶ್ಯಾಮ ಕೂಗುತ್ತಾನೆ – ಎಲ್ಲರೂ ಸರಿಯಿರಿ, ಆ ಗಾಜಿನ ಬಾಗಿಲನ್ನು ಮರೆಮಾಡಬೇಡಿ.

ಆಶ್ಚರ್ಯ. ಗುಂಪನ್ನು ಭೇದಿಸಿ ಅವನು ಗಾಜಿನ ಬಾಗಿಲನ್ನು ನೋಡುತ್ತಾನೆ. ನೆರಳಿನಂತೆ ಲೀಲ, ಬಾಗಿಲ ಬಳಿ ಬಂದು, ಅದಕ್ಕೊರಗಿ ನಿಂತುಕೊಂಡಿದ್ದಾಳೆ. ಇಂದು ಲೀಲ ಅವನ ನಿರೀಕ್ಷೆಯಲ್ಲಿದ್ದಳು ಎಂದು ಶ್ಯಾಮನಿಗೆ ಸ್ಪಷ್ಟವಾಗಿ ಅರ್ಥವಾಗುತ್ತೆ. ಶ್ಯಾಮನಿಗೆ ವಾಸಂತಿ ಬಣ್ಣ ತುಂಬಾ ಇಷ್ಟ. ಲೀಲಾ ಇಂದು ಅದೇ ಬಣ್ಣದ ಸೀರೆ ಉಟ್ಟಿದ್ದಾಳೆ. ವಿಷಣ್ಣ, ಶಾಂತ ಅವಳ ಕಣ್ಣುಗಳು ಸಮಸ್ತ ಇಡೀ ಶರೀರದಲ್ಲಿ ತಾಯಿಯಾಗುವ ಮೊದಲಿನ ನಮ್ರತೆ ಎದ್ದು ಕಾಣಿಸುತ್ತಿದೆ. ಒತ್ತಿ ಹಿಡಿದ ಅಳುವಿನಿಂದಾಗಿ ಲೀಲಾಳ ತುಟಿ ಕಂಪಿಸುತ್ತಿದೆ. ಆ ಜನರು ನಮಗೆ ಎಂದೂ ತೊಂದರೆ ಮಾಡುವುದಿಲ್ಲ, ನೀವು ಯಾಕೆ ಇಷ್ಟೊಂದು ನಿಷ್ಠುರರು.

ತಟ್ಟನೆ ಶ್ಯಾಮನ ಎದೆಯಲ್ಲಿ ಗುರ್ ಗುರ್ ಎಂದು ಮೋಡ ಗರ್ಜಿಸುತ್ತದೆ. ಜಿಂಕೆಗಳ ಗುಂಪು ಜೋರಾಗಿ ಓಡಾಡುತ್ತಿವೆ... ಅನಂತರ ಕೇವಲ ಎಲ್ಲೆಡೆಯೂ ಬರೀ ಜಿಂಕೆಗಳೇ, ಸರಳ ಹಾಗೂ ಸುಂದರ ಕಣ್ಣುಗಳ ಜಿಂಕೆಗಳು. ಎಲ್ಲಾ ಕಡೆಗಳಿಂದ ಓಡಿ ಬರುತ್ತಿವೆ.ಮೋಡ ಕವಿದ ಮಧ್ಯಾನ್ಹ ಪರಿಚಯವಿಲ್ಲದ ಒಂದು ಸೇತುವೆಯನ್ನು, ಕಪ್ಪು ರೈಲು ಗಾಡಿ ದಾಟುತ್ತಿದೆ... ಮಳೆಯ ನೀರಿನಿಂದ ಎದೆ ತುಂಬಿ ಬರುತ್ತದೆ.

ಅಸ್ಪಷ್ಟ ಕಣ್ಣಿನಿಂದ, ಗುಂಪಿನ ಮಧ್ಯೆ, ಪರಿಚಯವಿರುವ ಮುಖಗಳಿಗಾಗಿ ಶ್ಯಾಮ ಹುಡುಕಾಡುತ್ತಾನೆ... ಆಃ ಸೋನಾಕಾಕಾ, ರಂಗತ್ತೆ, ಮನುಮಾಮ ನಾನು ಮನು. ನಾನು ನಿಮ್ಮ ಮನು... ಹುಟ್ಟುವುದು ತುಂಬಾ ಕಷ್ಟಕರ ಆದರೂ ನಿಮ್ಮೆಲ್ಲರಿಗೋಸ್ಕರ, ಇಲ್ಲಿ ನೋಡಿ ನಾನು ಪುನಃ ಒಂದು ಸಲ ಹುಟ್ಟಿ ಬರುತ್ತೇನೆ... ಪ್ರೀತಿಸುವುದು ತುಂಬಾ ಕಷ್ಟ ಅಂತ ನಮ್ಮೆಮ್ಮನಿಗೂ ಗೊತ್ತು, ಆದರೂ ನಾನು ಅದೇ ಕಷ್ಟವನ್ನು ಎದೆಯಲ್ಲಿ ಹೊತ್ತಿದ್ದೇನೆ... ಶೀಘ್ರದಲ್ಲಿಯೇ ನಾನು ಸುಸಮಯ, ಸುಕಾಲವನ್ನು ನನ್ನ ಈ ಭೂಮಿಗೆ ತರುತ್ತೇನೆ... ನಿರೀಕ್ಷೆ ಮಾಡಿ.... ತುಂಬಾ ಮೋಹದಿಂದ, ತುಂಬಾ ಪ್ರೀತಿಯಿಂದ ಅದಕ್ಕಾಗಿ ನೀವೆಲ್ಲ ನಿರೀಕ್ಷೆ ಮಾಡಿ. ಧೂಳು ತುಂಬಿದ ರಸ್ತೆಯ ಮೇಲೆ ಶ್ಯಾಮ ಮುಖ ಹುದುಗಿಸುತ್ತಾನೆ.

---

Laser Typeset at Saravu Graphic Impressions and
Printed at Central Electric Press, Delhi